# ಹೊಸತು

## ಒಳಗೇನಿದೆ.....




*ಚಿತ್ರಗಳು : ರವಿಕುಮಾರ್ ಅಜ್ಜೀಪುರ, ಶ್ರೀಹರಿ*
*ಸತೀಶ್ ಯಲ್ಲಾಪುರ, ವಸಂತ ಹೊಸಬೆಟ್ಟು , ಎಸ್. ಶಶಿಕಾಂತ್*
*ಮುಖಚಿತ್ರ : ಲಂಡನ್ನಿನಲ್ಲಿ ನಡೆದ ಬೃಹತ್ ಯುದ್ಧವಿರೋಧಿ ಪ್ರತಿಭಟನೆ*
*ಚಿತ್ರ ಒದಗಿಸಿದವರು : ಕಿರಣ್ ಚೌಬೀನ - ಲಂಡನ್*
*ವಿನ್ಯಾಸ : ನವಕರ್ನಾಟಕ ವಿನ್ಯಾಸ*
*ಕಚೇರಿ ಸಹಕಾರ : ಜೆ. ವಿ. ತೇಜೋವತಿ*


## ಈ ತಿಂಗಳು

**ಫ್ರಾ**ನ್ಸಿನ ಬದಲು ಭಾರತವು ವಿಶ್ವಸಂಸ್ಥೆಯ ಭದ್ರತಾ ಮಂಡಲಿಯ ಖಾಯಂ ಸದಸ್ಯ ರಾಷ್ಟ್ರವಾಗಿರಬೇಕೆಂದು ಅಮೆರಿಕಾದ ಒಂದು ಪ್ರಭಾವಿ ದಿನಪತ್ರಿಕೆ ಹೇಳಿದೆ. ಆ ಪತ್ರಿಕೆಯು ಶ್ವೇತ ಭವನದ ಅನಧಿಕೃತ ವಕ್ತಾರ. ಇರಾಕಿನ ಮೇಲೆ ಯುದ್ಧ ಘೋಷಿಸಿ ಅಲ್ಲಿಯ ತೈಲಸಂಪತ್ತನ್ನು ತನ್ನದಾಗಿಸಿಕೊಳ್ಳಲು ಫ್ರಾನ್ಸ್ ಅಡ್ಡಿ ಬರುತ್ತಿದೆಯೆಂಬುದು ಬುಷ್‌ಗೆ ಅಸಮಾಧಾನ ತಂದಿದೆ. ಭಾರತವು ಆತ ಹೇಳಿದಂತೆ ನಡೆದುಕೊಳ್ಳುವ ದೇಶವೆಂಬ ಭಾವನೆ ಬಂದಿದ್ದರೆ ನಮ್ಮ ನೀತಿಗಳನ್ನು ಪರಾಮರ್ಶಿಸಿಕೊಳ್ಳಬೇಕೆಂದರ್ಥ. ಭಯೋತ್ಪಾದಕರೊಂದಿಗೆ ಇರಾಕ್ ಸಂಪರ್ಕ ಇರಿಸಿಕೊಂಡಿದ್ದಿತೆಂದು ವಿದೇಶಾಂಗ ಸಚಿವ ಪವೆಲ್ ಹೇಳಿರುವುದು ಸತ್ಯದ ಮಾತು. ಏಕೆಂದರೆ ಸದ್ದಾಂ ಹುಸೇನ್ ಅನೇಕ ವರ್ಷಗಳ ಕಾಲ ಶ್ವೇತಭವನದಲ್ಲಿ ಅಮೆರಿಕಾದ ಅಧ್ಯಕ್ಷರ ಸಖ್ಯವನ್ನು ನಿರಂತರವಾಗಿ ಅನುಭವಿಸಿದ್ದ ದಾಖಲೆಗಳಿವೆ. ಈಗ ಇರಾಕನ್ನು ಧ್ವಂಸ ಮಾಡಬೇಕೆನ್ನುವ ಅಮೆರಿಕಾ ಮತ್ತೆ ಭಯೋತ್ಪಾದಕರನ್ನು ಹುಟ್ಟಿಸುತ್ತದೆ. ಬೇರಾವ ರೀತಿಯಲ್ಲೂ ಆ ದೇಶದ ಮಿಲಿಟರಿ ಶಕ್ತಿಯನ್ನು ಎದುರಿಸಲಾಗದವರು ವೈಯ್ಯಕ್ತಿಕ ಭಯೋತ್ಪಾದನೆಯಲ್ಲಿ ತೊಡಗಿದರೆ ಆಶ್ಚರ್ಯವೇನಿಲ್ಲ. ಬರುವ ವರ್ಷಗಳಲ್ಲಿ ಭಯೋತ್ಪಾದಕರು ನ್ಯೂಯಾರ್ಕಿನ ಮೇಲೆ ವಿಮಾನ ದಾಳಿ ನಡೆಸಲು ಅಸಾಧ್ಯ; ಆಗ ಅವರು ಅಲ್ಲಲ್ಲಿ ಅಮೆರಿಕಾದ ನಾಗರಿಕರನ್ನು ಥಳಿಸಲು ಉಪಕ್ರಮಿಸಿದರೆ ಅದಕ್ಕೆ ನೇರವಾಗಿ ಅಮೆರಿಕಾದ ಅಧ್ಯಕ್ಷರೇ ಹೊಣೆಯಾಗಬೇಕಾಗುತ್ತದೆ. ಒಂದು ಕೋಟಿಗೂ ಹೆಚ್ಚು ಜನ ಯುದ್ಧದ ವಿರೋಧವಾಗಿ ಪ್ರತಿಭಟನೆ ಸಲ್ಲಿಸಿದ್ದಾರೆ. ವಿಶ್ವದ ಅನೇಕ ರಾಷ್ಟ್ರಗಳಲ್ಲಿ ಈ ಪ್ರತಿಭಟನೆ ನಡೆದಿದೆ. ಆದರೆ ಅಮೆರಿಕಾದ ಅಧ್ಯಕ್ಷ ಇದಕ್ಕೆಲ್ಲಾ ಜಗ್ಗಲಾಗದೆಂದು ಹೇಳಿರುವುದನ್ನು ನೋಡಿದರೆ ಆತನು ಪ್ರಜಾಪ್ರಭುತ್ವಕ್ಕೆ ಎಷ್ಟು ಮನ್ನಣೆ ನೀಡುತ್ತಾನೆಂದು ಸ್ಪಷ್ಟವಾಗುತ್ತಿದೆ.

ಇರಾಕನ್ನು ಬಗ್ಗುಬಡಿಯಬೇಕಾದ್ದು ಅನಿವಾರ್ಯವೆಂದು ನಮ್ಮ ಪ್ರವೀಣ ತೋಗಡಿಯಾ ಬಡಬಡಿಸಿದ್ದು, ಸದ್ಯಕ್ಕೆ ಬಾಯಿ ಮುಚ್ಚಿಕೊಂಡಿರಲು ವಾಜಪೇಯಿ ಸೂಚಿಸಿದರೆಂದು ವರದಿಯಾಗಿದೆ. ಈ ಪ್ರವೀಣನ ಸಂಸ್ಕೃತಿಯ ಪ್ರಕಾರ ಎಲ್ಲ ಇಸ್ಲಾಂ ದೇಶಗಳನ್ನೂ, ಇಸ್ಲಾಂ ಮತಸ್ಥರನ್ನೂ ಕೊಚ್ಚಿಹಾಕಬೇಕಾದ್ದು ಧರ್ಮರಕ್ಷಣೆಯ ಒಂದು ಭಾಗ. ನಾಗರಿಕತೆಗಳ ಸಂಘರ್ಷ ಎಂದು ಅದನ್ನು ವ್ಯಾಖ್ಯಾನಿಸಿರುವ ತೋಗಡಿಯಾ ಒಬ್ಬ ಸಂಶೋಧಕ ಕೂಡ ! ಆದ್ದರಿಂದಲೇ ಆತ ಅಯೋಧ್ಯೆಯ ಜೊತೆಗೆ ನಮ್ಮ ರಾಜ್ಯದ ಬಾಬಾಬುಡನ್‌ಗಿರಿ ಮತ್ತು ಮಧ್ಯಪ್ರದೇಶದ ಭೋಜಶಾಲಾಗಳನ್ನು ಆಯ್ಕೆಮಾಡಿಕೊಂಡಿರುವುದು. ಅಲ್ಲೆಲ್ಲಾ ಆಧುನಿಕ ಶ್ರೀಕೃಷ್ಣಪರಮಾತ್ಮನಾಗಿ ಈತ ಧರ್ಮ ಸಂಸ್ಥಾಪನೆಯಲ್ಲಿ ನಿರತನಾಗಿದ್ದಾನೆ. ಕುರುಕ್ಷೇತ್ರದಲ್ಲಿ ಇಪ್ಪತ್ತಕ್ಕೂ ಹೆಚ್ಚು ಅಕ್ಷೌಹಿಣೀ ಸೈನ್ಯಗಳು ಪ್ರಾಣ ತೆತ್ತಿರುವಾಗ ನಮ್ಮಲ್ಲಿ ಕೆಲವರು ಧರ್ಮರಕ್ಷಣೆಗಾಗಿ ಮಡಿದರೆ ತಪ್ಪೇನು ಎನ್ನುವ ಈತ ಇತ್ತೀಚೆಗೆ ಮಂಗಳೂರಿನಲ್ಲಿ ಅಸಹ್ಯವಾದ ಭಾಷೆಯನ್ನು ಬಳಸಿದ್ದಾನೆ, ದ್ವೇಷದ ಜ್ವಾಲೆಯನ್ನು ಹರಡಿದ್ದಾನೆ. ಉದ್ರೇಕಿಸುವ ಮಾತನ್ನಾಡಬಾರದೆಂಬ ಷರತ್ತಿನ ಮೇಲೆ ನ್ಯಾಯಾಂಗವು ಆತನಿಗೆ 'ಅಭಿವ್ಯಕ್ತಿ ಸ್ವಾತಂತ್ರ್ಯ' ನೀಡಿದ್ದಿತಂತೆ. ಯಾವುದು ಉದ್ರೇಕ ಎಂಬುದು ಖಚಿತವಿಲ್ಲದಾಗ ಏನು ಹೇಳಿದರೂ ನಡೆಯುತ್ತದೆಂಬುದು ತೋಗಡಿಯಾ ವ್ಯಾಖ್ಯಾನ. ಧರ್ಮದ ಜೊತೆಗೆ ಹೊಟ್ಟೆ, ಬಟ್ಟೆ, ನೆಮ್ಮದಿ, ದೇಶದ ಆರ್ಥಿಕ ಸ್ವಾತಂತ್ರ್ಯ, ಇತ್ಯಾದಿಗಳ ಬಗ್ಗೆ ಕಾಳಜಿ ಇರಬೇಕೆಂದು ಶ್ರೀಕೃಷ್ಣ ಅಪ್ಪಣೆಕೊಡಿಸಿದ್ದರೆ ಚೆನ್ನಾಗಿರುತ್ತಿತ್ತು. ಆಗಲಾದರೂ ಜನರ ಹುಚ್ಚಿಗೆ ಒಂದು ಎಲ್ಲೆ ಇರುತ್ತಿತ್ತೋ ಏನೋ !

ತೋಗಡಿಯಾನಷ್ಟೇ ಅತಾರ್ಕಿಕ ಜೀವಿಗಳು ನಮ್ಮಲ್ಲಿ ಹೇರಳವಾಗಿದ್ದಾರೆ. ಅಮೆರಿಕಾದ ಬಾಹ್ಯಾಕಾಶ ಯಾನ ಸಂಸ್ಥೆಯ ಅಪಕ್ವತೆಯಿಂದಾಗಿ ದುರಂತದಲ್ಲಿ ಆ ದೇಶದವಳೇ ಆದ ಕಲ್ಪನಾ ಸುಟ್ಟುಹೋದರೆ ನಮ್ಮ ದೇಶ ಆಕೆಗೆ 'ಭಾರತ ರತ್ನ' ಪ್ರಶಸ್ತಿ ಕೊಡಬೇಕೆಂದು ಬಿಸುಸುಯ್ಯುವ ಜನ ನಮ್ಮಲ್ಲಿದ್ದಾರೆ. ಆಕೆಯ ಪ್ರಶಂಸಾರ್ಹ ಸಾಧನೆಗಳನ್ನು ಗುರುತಿಸುವುದೇ ಬೇರೆ,'ನಾಸಾ' ಸಂಸ್ಥೆಯ ಆಡಳಿತದಲ್ಲಿ ಸಂಭವಿಸಿದ ಸಾವಿಗೆ ದುಃಖಿಸುವುದೇ ಬೇರೆ. ಇದೇ 'ನಾಸಾ' ೧೯೭೦ರಲ್ಲಿ ಮೂರು ಜನ ಸೋಯುಜ್ ಬಾಹ್ಯಾಕಾಶ ಯಾತ್ರಿಗಳು ಸೋವಿಯೆತ್ ಒಕ್ಕೂಟದಲ್ಲಿ ದುರಂತಕ್ಕೀಡಾದಾಗ ಹೇಳಿದ್ದ ಮಾತು ಬಹಳ ಮಂದಿಯ ನೆನಪಲ್ಲಿ ಉಳಿದಿಲ್ಲ. ''ತಾಂತ್ರಿಕ ಪರಿಣತಿ ಸಾಕಷ್ಟಿಲ್ಲದಾಗ ಬಾಹ್ಯಾಕಾಶಕ್ಕೆ ಜೀವಂತ ಜನರನ್ನು ಕಳಿಸುವ ಮೋಜನ್ನು ಸೋವಿಯೆತ್ ಒಕ್ಕೂಟ ಕೈಬಿಡಬೇಕು,'' ಎಂದಿತ್ತು ನಾಸಾ. ಈಗ ಆ ಮಾತನ್ನು ನಾಸಾಕ್ಕೆ ಯಾರು ಹೇಳಬೇಕು ? ಕಲ್ಪನಾ ಜೊತೆ ಸಮೀಕರಿಸಿಕೊಳ್ಳುವವರು ಹೇಳಬೇಕಲ್ಲವೇ ? ನಾಸಾದ ನೈಪುಣ್ಯದಲ್ಲೂ ತೂತುಗಳಿವೆ ಎಂಬುದನ್ನು ಅರಿತರೆ ಸಾಕೆನಿಸುತ್ತದೆ.

ಇನ್ನೊಂದು ಅತ್ಯಂತ ದಾರುಣ ಮನಃಸ್ಥಿತಿ ನಮ್ಮಲ್ಲಿ ಕ್ರಿಕೆಟ್ಟಿನ ಕೊಡುಗೆ, ಕ್ರಿಕೆಟ್ ಆಟಗಾರರನ್ನು ವೈಭವೀಕರಿಸಿರುವುದರ ಕೊಡುಗೆ. ಯಾರೋ ಮೂಢರು ಕೊಲ್ಕತಾದಲ್ಲಿ ಯಜ್ಞ ಮಾಡಿದರಂತೆ : ಗಂಗೂಲಿ ತಂಡ ಆಟಗಳಲ್ಲಿ ಗೆಲ್ಲಲಿ, ಎಂದು ! ಯಜ್ಞಗಳು ನಿಷ್ಫಲವೆಂದು ಹೇಳಿದ್ದ ಬುದ್ಧನ ಮಾತನ್ನು ನಿಜ ಮಾಡುವ ದಿಕ್ಕಿನಲ್ಲಿ ನಮ್ಮ ಕ್ರಿಕೆಟ್ ವೀರರು ಮುನ್ನುಗ್ಗುತ್ತಿರುವುದು ಆರೋಗ್ಯಕರ ಬೆಳವಣಿಗೆಯೆಂದು ಕೆಲವರು ಕುಹಕವಾಡುತ್ತಿದ್ದಾರೆ. ಆಟದಲ್ಲಿ ಹನ್ನೊಂದು ಜನ ಸೋತರೆ ಇಡೀ ದೇಶ ಹರಾಕಿರಿ ಮಾಡಿಕೊಳ್ಳಬೇಕೆಂಬ ಮೌಢ್ಯಕ್ಕೆ ಪರಿಹಾರವೇನು ?





ಸಂಪುಟ-೪ ಸಂಚಿಕೆ -೮ ಮಾರ್ಚ್ ೨೦೦೩





*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೨೬

*ಹೊಸತು ಕಚೇರಿಯ ವಿಳಾಸ*




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩.೫೮೦ / ೮೧ / ೮೨
**e-mail : nkp@bgl.vsnl.net.in**


## ವಾಜಪೇಯಿ ಸರ್ಕಾರಕ್ಕೆ ಎಚ್ಚರಿಕೆಯ ಗಂಟೆ

**ಸಂಪಾದಕೀಯ**

**ರಾ**ಷ್ಟ್ರದಲ್ಲಿ ಜನಜೀವನ ಹದಗೆಡುತ್ತಿದೆ. ರೈತಾಪಿಜನ, ಕಾರ್ಮಿಕರು ಹಾಗೂ ಸಣ್ಣ ದುಡಿಮೆದಾರರ ಬದುಕು ದುರ್ಭರವಾಗುತ್ತಿದೆ. ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿನ ಬಿಕ್ಕಟ್ಟು ತೀವ್ರವಾಗುತ್ತಿದೆ. ಕೋಮುವಾದ ಇಡೀ ಜನಜೀವನವನ್ನು ಆಕ್ರಮಿಸಿಕೊಳ್ಳುತ್ತಿದೆ. ಆಂತರಿಕವಾಗಿ ಮತೀಯ ದ್ವೇಷದ ಜ್ವಾಲೆ ಹರಡುವ ಸನ್ನಿವೇಶ ಸಂಘಟಿತವಾಗಿ ನಿರ್ಮಾಣವಾಗುತ್ತಿದೆ. ಕೇಂದ್ರದಲ್ಲಿ ಸಮ್ಮಿಶ್ರ ಸರಕಾರದ ಜನವಿರೋಧಿ ನೀತಿಗಳೇ ಇಂಥ ಆತಂಕಕಾರಿ ಪರಿಸ್ಥಿತಿಗೆ ಎಡೆಮಾಡಿಕೊಟ್ಟಿವೆ. ಆದರೂ ಅವೇ ನೀತಿಗಳ ಮುಂದುವರಿಕೆ ಜಾರಿಯಲ್ಲಿದೆ.

ನಾವು ಗಳಿಸಿದ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಲು ಮತ್ತು ಸಾಮಾಜಿಕ ಆರ್ಥಿಕ ಅಭಿವೃದ್ಧಿ ಸಾಧಿಸಲು ಸಾರ್ವಜನಿಕ ಕ್ಷೇತ್ರದಡಿಯಲ್ಲಿ ವ್ಯಾಪಕ ಕೈಗಾರಿಕೀಕರಣದ ಅಗತ್ಯತೆಯನ್ನು ಮನಗಂಡು ಅಂದಿನ ಆಡಳಿತ ವರ್ಗ ತೆಗೆದುಕೊಂಡ ತೀರ್ಮಾನಗಳಿಗೆ ಒಂದು ಐತಿಹಾಸಿಕ ಹಿನ್ನೆಲೆಯಿದೆ. ಮೂರು ನಾಲ್ಕು ದಶಕಗಳಲ್ಲಿ ಸಾರ್ವಜನಿಕ ಕ್ಷೇತ್ರದಲ್ಲಿನ ವೈಜ್ಞಾನಿಕ, ತಾಂತ್ರಿಕ ಸಂಸ್ಥೆಗಳು ಹಾಗೂ ಮೂಲಭೂತ ಮತ್ತು ರಕ್ಷಣಾ ಉದ್ದಿಮೆಗಳು ಸಾಧಿಸಿದ ಅದ್ಭುತ ಯಶಸ್ಸು ರಾಷ್ಟ್ರದ ಸರ್ವತೋಮುಖ ಬೆಳವಣಿಗೆಗೆ ಗಮನೀಯವಾದ ಕೊಡುಗೆಯನ್ನು ನೀಡಿವೆ. ಹಾಗಿದ್ದಾಗ್ಯೂ ಈಚಿನ ಜನವಿರೋಧಿ ನೀತಿಗಳ ಅಂಗವಾಗಿ ಸಾರ್ವಜನಿಕ ಉದ್ದಿಮೆಗಳು ಮತ್ತಿತರ ಸರಕಾರಿ ಸೊತ್ತುಗಳನ್ನು ಖಾಸಗಿಯವರಿಗೆ ಮಾರಿ ಒಟ್ಟು ೭೮,೦೦೦ ಕೋಟಿ ರೂಪಾಯಿಗಳನ್ನು ಜಮಾಯಿಸಿಕೊಳ್ಳುವ ತಯಾರಿಯನ್ನು ಇಂದಿನ ಕೇಂದ್ರ ಸರಕಾರ ನಡೆಸಿದೆ. ಇಂದು ಕೇಂದ್ರ ಅಥವಾ ಬಹುತೇಕ ರಾಜ್ಯ ಸರಕಾರಗಳ ನೀತಿಗಳನ್ನು ನಿರ್ಧರಿಸುತ್ತಿರುವುದು ವಾಜಪೇಯಿ, ಶೌರಿ, ನಾಯ್ಡುಗಳಲ್ಲ. ವಿಶ್ವ ಬ್ಯಾಂಕ್, ಏಷ್ಯಾ ಅಭಿವೃದ್ಧಿ ಬ್ಯಾಂಕ್ ಮತ್ತಿತರ ಸಾಮ್ರಾಜ್ಯಶಾಹಿ ಸಂಘಸಂಸ್ಥೆಗಳು ಸರಕಾರದ ರೀತಿನೀತಿಗಳನ್ನು ರೂಪಿಸುವ ಗತಿ ಬಂದೊದಗಿದೆ. ಇದನ್ನು ರಾಷ್ಟ್ರೀಯತೆ ಎನ್ನುವುದು ನಾಚಿಕೆಯ ವಿಷಯ.

ಸಾರ್ವಜನಿಕ ಉದ್ದಿಮೆಗಳ ವಿರುದ್ಧ ಇಲ್ಲಸಲ್ಲದ ಅಪಪ್ರಚಾರಗಳನ್ನು ಹುಟ್ಟಿಹಾಕುತ್ತಾ ಅವನ್ನು ಒಳಗೊಳಗೇ ನಷ್ಟಕ್ಕೀಡು ಮಾಡುತ್ತಾರೆ. ಇದೇ ಒಂದು ಉದ್ಯಮದಂತಾಗಿದೆ. ಬಂಡವಾಳಶಾಹಿಯ ಸಾಕು ಕುನ್ನಿಗಳೇ ಈ ಪಿತೂರಿಯ ಪ್ರಾಯೋಜಕರು. ಈಗ ಅರುಣ್ ಶೌರಿ ಇದರ ರೂವಾರಿ. ಜಗತ್ತಿನ ಯಾವ ರಾಜಕೀಯ ವ್ಯವಸ್ಥೆಯಲ್ಲಿಯೂ ಈ ಬಗೆಯ ಸಚಿವ ಖಾತೆಯನ್ನು ಯಾರೂ ಕಂಡಿಲ್ಲ, ಕೇಳಿಲ್ಲ. ದೇಶದ ಸಾರ್ವಭೌಮತ್ವದ ಪ್ರತೀಕವಾದ ಗಣರಾಜ್ಯ ದಿನದಂದು ನಡೆದ ಒಂದು ಪಾತಕ ತೀರ್ಮಾನದಂತೆ ಹಿಂದೂಸ್ತಾನ್ ಪೆಟ್ರೋಲಿಯಂ ಮತ್ತು ಭಾರತ್ ಪೆಟ್ರೋಲಿಯಂ ತೈಲ ಕಂಪನಿಗಳು ಭಾರತ ಅಲ್ಯೂಮಿನಿಯಮ್ ಕಂಪನಿಯಂತೆ ಜನರ ಕೈಬಿಟ್ಟು ಹೋಗಲಿವೆ. ಸರಕಾರದ ಕಣ್ಣು ರಾಷ್ಟ್ರೀಕೃತ ಬ್ಯಾಂಕುಗಳು ಮತ್ತು ಜೀವವಿಮಾ ಸಂಸ್ಥೆಯ ಮೇಲೆಯೂ ಬಿದ್ದಿದೆ. ಆದರೆ ಪುಕ್ಕಟೆಯಾಗಲ್ಲ! ಪಕ್ಷದ ನಿಧಿ ಮತ್ತು ಕೆಲವು ನಾಯಕಮಣಿಗಳ ಸ್ವಂತ ಆಸ್ತಿಪಾಸ್ತಿ, ಇವು ಈ ದುರ್ವ್ಯವಹಾರದ ಹೊಲಸಿನಲ್ಲಿ ಬೆಳೆದು ಫಲ ನೀಡಿಯಾವು!

ಬರುವ ಏಪ್ರಿಲ್ ತಿಂಗಳಿಂದ ದೂರವಾಣಿ ಕರೆಗಳು ದುಬಾರಿಯಾಗಲಿವೆ. ಸಾರ್ವಜನಿಕರು, ಅದರಲ್ಲೂ ಸಾಂಪ್ರದಾಯಿಕ ದೂರವಾಣಿಗಳನ್ನು ಹೊಂದಿರುವ ಮಧ್ಯಮ ಮತ್ತು ಕೆಳಮಧ್ಯಮ ವರ್ಗದ ಜನರು, ಇದರ ಹೊಡೆತವನ್ನು ಅನುಭವಿಸಲಿದ್ದಾರೆ. ಇದು ದೂರಸಂಪರ್ಕ ನಿಯಂತ್ರಣ ಪ್ರಾಧಿಕಾರದ ಕೊಡುಗೆ. ಇದನ್ನು ದೂರವಾಣಿ ಕರೆಗಳ ದರದಲ್ಲಿ ಹೆಚ್ಚಳವೆಂದು ಅರ್ಥೈಸಲಾಗದು. ಈ ಪ್ರಕ್ರಿಯೆಯ ಹಿಂದೆ, ಖಾಸಗಿ ಕಂಪನಿಗಳು ಸರಕಾರಿ ದೂರವಾಣಿ ವ್ಯವಸ್ಥೆಯನ್ನು ಕಬಳಿಸುವ ಹುನ್ನಾರ, ಸಚಿವ ಪ್ರಮೋದ ಮಹಾಜನರಂಥವರ ಸ್ವಾರ್ಥ ಮತ್ತು ಕೋಟಿಗಟ್ಟಲೆ ರೂಪಾಯಿಗಳ ದುರ್ವ್ಯವಹಾರ, ಇವೆಲ್ಲವೂ ಅಡಗಿವೆ. ಆದರೆ ವಾಜಪೇಯಿ ಕಣ್ಣು ಮುಚ್ಚಿ ಹಾಲು ಕುಡಿಯುತ್ತಿದ್ದಾರೆ.

ಇಂದಿನ ಸಾಮಾಜಿಕ-ಆರ್ಥಿಕ ಸಂದರ್ಭಕ್ಕೆ ತಕ್ಕಂತೆ ಸಾರ್ವಜನಿಕರ ದೈನಂದಿನ ಅಗತ್ಯತೆಗಳು ವರ್ಗಾಧಾರಿತವಾಗಿ ಹೆಚ್ಚಾಗುತ್ತಿವೆ. ಅನ್ನ, ನೀರು, ವಸತಿಯಂತಹ ಮೂಲಭೂತ ಬೇಡಿಕೆಗಳಿಂದಲೇ ವಂಚಿತರಾಗಿರುವ ಕೋಟ್ಯಂತರ ಜನ ಈ ದೇಶದಲ್ಲಿದ್ದಾರೆ. ಅವರ ಸಂಖ್ಯೆ ದಿನೇ ದಿನೇ ಜಾಸ್ತಿಯಾಗುತ್ತಿದೆ. ವಿಜ್ಞಾನ, ತಂತ್ರಜ್ಞಾನ ಬೆಳೆದಂತೆ ಅದರ ಪ್ರಯೋಜನ ಪಡೆಯುವ ಜನವಿಭಾಗವೂ ನಮ್ಮಲ್ಲಿದೆ. ದೂರವಾಣಿಯ ವಿಷಯವನ್ನೇ ಗಮನಿಸಿದರೆ, ಸೆಲ್ ಫೋನ್ ಅವಶ್ಯಕತೆ ನಮ್ಮಲ್ಲಿ ಯಾವ ವಿಭಾಗದ ಜನರಿಗಿದೆ? ಯಾರಿಗೇ ಇರಲಿ, ಅವರಿಗೆ ಇಲ್ಲಸಲ್ಲದ ರಿಯಾಯಿತಿ ಏಕೆ? ಖಾಸಗಿ ಕಂಪನಿಗಳು ಕೊಡುತ್ತವೆಯೆನ್ನಲಾದ ರಿಯಾಯಿತಿಯನ್ನು ಕೊಡಿಸಲು ಸರ್ಕಾರದ ವ್ಯವಸ್ಥೆಯಡಿ ಬರುವ ಸಾರ್ವಜನಿಕರ ಜೇಬು ಕತ್ತರಿಸಿರುವ ಪ್ರಮೋದ ಮಹಾಜನ್ ಯಾರ ಪ್ರತಿನಿಧಿಯಾಗಿ ವರ್ತಿಸಿದ್ದಾರೆ?

ಆಧುನೀಕರಣದ ನೆಪದಲ್ಲಿ ಭಾರತ ಸಂಚಾರ ನಿಗಮ ಮತ್ತು ಮಹಾನಗರ ಟೆಲಿಫೋನ್ ನಿಗಮ ಎಂಬ ಎರಡೂ ಸರಕಾರಿ ಸ್ವಾಮ್ಯದ ಸಂಸ್ಥೆಗಳನ್ನು ನಿರ್ಜೀವಗೊಳಿಸಿ ದೂರವಾಣಿ ವ್ಯವಸ್ಥೆಯನ್ನು ಖಾಸಗಿಯವರಿಗೆ ಒಪ್ಪಿಸುವ ಹುನ್ನಾರ ೨೦೦೧ರಿಂದ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಜರುಗುತ್ತಲೇ ಬಂದಿದೆ. ಇಂದಿನ ಅಂಕಿ-ಸಂಖ್ಯೆಯಂತೆ ನಾಲ್ಕು ಕೋಟಿ ಜನರು ಸ್ಥಿರ ಫೋನ್ ಹೊಂದಿದ್ದು, ಎಪ್ಪತ್ತು ಲಕ್ಷ ಜನ ಮೊಬೈಲ್ ಹೊಂದಿದ್ದಾರೆ. ದೂರವಾಣಿ ನಿಯಂತ್ರಣ ಪ್ರಾಧಿಕಾರದ ಶಿಫಾರಸ್ಸುಗಳು ಸ್ಥಿರ ಫೋನ್ ಹೊಂದಿರುವವರ ಬಿಲ್‌ಗಳನ್ನು ದುಬಾರಿಯಾಗಿಸಲಿದೆ; ಖಾಸಗಿ ಕಂಪನಿಗಳ ಗ್ರಾಹಕರ ಭಾರವನ್ನು ಹಗುರಗೊಳಿಸುವುದಕ್ಕಾಗಿ!

ಸರಕಾರದ ಎಲ್ಲ ನೀತಿಗಳು ಮತ್ತು ಯೋಜನೆಗಳ ಹಿಂದೆ ವಿವಿಧ ಬಗೆಯ ಹಿತಾಸಕ್ತಿಗಳು ಕೆಲಸ ಮಾಡುವುದು ಸರ್ವೇಸಾಮಾನ್ಯ. ಇಂದಿನ ಖಾಸಗೀಕರಣದ ನೀತಿಗಳಿಂದ ಸಂಭವಿಸುವ ಪರಿಸ್ಥಿತಿಯಲ್ಲಿ ಎಲ್ಲ ಬಂಡವಾಳಗಾರರೂ ತಮ್ಮ ತಮ್ಮ ಪಾಲನ್ನು ಬಾಚಿಕೊಳ್ಳಲು ಸೆಣಸುತ್ತಿದ್ದಾರೆ. ಇಂಥ ವ್ಯವಹಾರಗಳಲ್ಲಿ ರಿಲಯನ್ಸ್ ಮತ್ತು ಟಾಟಾ ಕಂಪನಿಗಳ ಪಾತ್ರ ಮಹತ್ವದ್ದು. ರಿಲಯನ್ಸ್‌ನ ಮುಖೇಶ್ ಅಂಬಾನಿಯೊಡನೆ ಮಹಾಜನ್‌ಗಿರುವ ಸಖ್ಯ ಈಗ ಸ್ಥಿರ ದೂರವಾಣಿ

ಹೊಂದಿದವರಿಗೆ ಕುತ್ತಾಗಿ ಪರಿಣಮಿಸಲಿದೆ; 'ಗ್ಲೋಬಲ್ ಸಿಸ್ಟಮ್ ಫಾರ್ ಮೊಬೈಲ್' ಎಂಬ ಹೆಸರಿನಲ್ಲಿ ಏರ್‌ಟೆಲ್, ಸ್ಪೈಸ್, ಹಚ್ ಕಂಪನಿಗಳಿಂದ ಲೂಟಿಯಾಗಲಿದೆ. ಈ ಅನೈತಿಕ ಪೈಪೋಟಿಯಲ್ಲಿ ರಿಲೆಯನ್ಸ್ ಒಂಟಿ ಸಲಗದಂತೆ ದೂರವಾಣಿ ವ್ಯವಸ್ಥೆಯ ಮೇಲೆ ದಾಳಿ ನಡೆಸುವ ಹಂತದಲ್ಲಿದೆ. ಸೆಲ್ ಫೋನ್ ದರ ಸ್ಥಿರ ಫೋನ್ ದರಕ್ಕಿಂತ ಕಡಿಮೆಯೆಂದೆನಿಸಿ ಅನಿವಾರ್ಯವಾಗಿ ಜನರು ಸೆಲ್ ಫೋನ್‌ಗೆ ಮೊರೆಹೋಗುವ ಪರಿಸ್ಥಿತಿ ಉದ್ಭವವಾದರೆ ಅಚ್ಚರಿಯೇನಲ್ಲ. ಎಂದರೆ, ಸರಕಾರಿ ಸಂಸ್ಥೆಗಳಾದ ಭಾರತ ಸಂಚಾರ ನಿಗಮ ಮತ್ತು ಮಹಾನಗರ ಟೆಲಿಫೋನ್ ನಿಗಮ ಎರಡನ್ನೂ ಕ್ರಮೇಣ ಕತ್ತು ಹಿಚುಕಿ ಕೊಂದುಹಾಕಿ ದೇಶದಲ್ಲಿ ಖಾಸಗಿ ದೂರವಾಣಿ ಕಂಪನಿಗಳ ಸಾಮ್ರಾಜ್ಯದ ಸ್ಥಾಪನೆ ಮಾಡುವುದು ವಾಜಪೇಯಿ ಸರ್ಕಾರದ ನೀತಿಗೆಟ್ಟ ಜನವಿರೋಧಿ ಕ್ರಮ ಎಂದರ್ಥ.

ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣದ ಭಾಗವಾಗಿ ವಾಜಪೇಯಿ ಸರಕಾರ ಇದುವರೆಗಿನ ತನ್ನ ಎಲ್ಲ ಆರ್ಥಿಕ ನೀತಿಗಳನ್ನು ಅಮೆರಿಕೆಯ ಹಿಡಿತದಲ್ಲಿರುವ ಆರ್ಥಿಕ ಸಂಸ್ಥೆಗಳಿಗೆ ವಹಿಸಿಕೊಟ್ಟು ದೇಶದ್ರೋಹವೆಸಗಿದೆ. ಅದು ಅವರ 'ಧರ್ಮ'. ಇವುಗಳಲ್ಲಿ ಕಾರ್ಮಿಕ ಸಂಘಟನೆಗಳಿಗೆ ಸಂಬಂಧಪಟ್ಟ ಕಾಯಿದೆಯೂ ಒಂದು. ಈ ವಿಧ್ವಂಸಕ, ಜನವಿರೋಧಿ ತಿದ್ದುಪಡಿಯು ಜಾರಿಗೆ ಬಂದದ್ದೇ ಆದರೆ ಕೋಟ್ಯಂತರ ಕಾರ್ಮಿಕರು ಬೀದಿಪಾಲಾಗಲಿದ್ದಾರೆ; ಒಂದರ್ಥದಲ್ಲಿ ಮತ್ತೆ ಜೀತದಾಳುಗಳಾಗಲಿದ್ದಾರೆ. ನಮ್ಮ ಉತ್ಪಾದನಾ ಘಟಕಗಳು ಸುಟ್ಟು ಬೂದಿಯಾಗುತ್ತವೆ. ಎಲ್ಲದಕ್ಕೂ ಬೇರೆಯವರ ಮುಂದೆ ಕೈಚಾಚುವುದು ನಮ್ಮ ದೇಶದ ಹೀನ ಪಾಡಾಗುತ್ತದೆ.

ಅಸಂಘಟಿತ ಕಾರ್ಮಿಕರ ಬಗ್ಗೆ ಆಗಾಗ್ಗೆ ಮೊಸಳೆ ಕಣ್ಣೀರು ಸುರಿಸುವ ಸರಕಾರ ಹಾಗೂ ಖಾಸಗಿ ಕಂಪನಿಗಳು ಕಾರ್ಮಿಕ ವರ್ಗದ ವಿರುದ್ಧದ ಅನೇಕ ಕಾರ್ಯಾಚರಣೆಗಳನ್ನು ನಡೆಸುತ್ತಿದ್ದಾರೆ. ವಾಜಪೇಯಿ ಪಕ್ಷದ ಪೂರ್ವಾಶ್ರಮದ ಜನಸಂಘ ಒಂದು ಕಾಲದಲ್ಲಿ ಕಾರ್ಮಿಕರನ್ನು ಸಂಘಟಿಸುವುದೇ ರಾಷ್ಟ್ರ ವಿರೋಧಿ ಚಟುವಟಿಕೆ ಎಂದು ಬೊಬ್ಬೆ ಇಡುತ್ತಿತ್ತು. ಆದರೆ ಇಂದು ಭಾಜಪದ ಕಾರ್ಮಿಕ ಸಂಘಟನೆಯಾದ ಭಾರತೀಯ ಮಜದೂರ್ ಸಂಘ ಕೇಂದ್ರ ಸರಕಾರದ ಆರ್ಥಿಕ ಮತ್ತು ಕಾರ್ಮಿಕ ವಿರೋಧಿ ನೀತಿಗಳನ್ನು ವಿರೋಧಿಸುತ್ತಿದೆ, ಇತರ ಸಂಘಟನೆಗಳೊಂದಿಗೆ ಸಾಮೂಹಿಕ ಚಳವಳಿಯಲ್ಲಿ ಪಾತ್ರ ವಹಿಸುತ್ತಿದೆ. ಖಾಸಗಿ ಯಜಮಾನರ ಅವಕೃಪೆಯೂ ಬೇಡ, ಸಾಮಾನ್ಯ ದುಡಿಮೆಗಾರರ ಕೋಪದ ಬೆಂಕಿಯೂ ಬೇಡ ಎಂಬ ವಾಜಪೇಯಿ ಗೋಮುಖವ್ಯಾಘ್ರ ಇಲ್ಲಿ ಕೆಲಸ ಮಾಡುತ್ತಿದೆ.

ಆರ್ಥಿಕ ಸುಧಾರಣೆಗಳ ನೆಪದಲ್ಲಿ ಆಳುವ ವರ್ಗ ಆ ಪ್ರಕ್ರಿಯೆಯ ಎಲ್ಲ ವಿನಾಶಕಾರಿ ಅಂಶಗಳನ್ನೂ ದುಡಿಯುವ ಜನರ ಮೇಲೆ ಹೇರುತ್ತಿದೆ. ಕಾರ್ಖಾನೆಗಳ ಮುಚ್ಚುವಿಕೆ, ನೌಕರಿಗಳ ಸಂಖ್ಯೆಯಲ್ಲಿ ಇಳುವರಿ, ನೌಕರರನ್ನು ಕೆಲಸದಿಂದ ತೆಗೆಯುವುದು, ಇವುಗಳಿಂದಾಗಿ ದೇಶ ತತ್ತರಿಸುತ್ತಿದೆ. ಕಾರ್ಮಿಕ ಕ್ಷೇಮಾಭಿವೃದ್ಧಿಯ ಕಟ್ಟುಪಾಡುಗಳು, ಕಾನೂನು, ಎಲ್ಲವನ್ನೂ ಸರಕಾರ ಗಣನೆಗೇ ತೆಗೆದುಕೊಳ್ಳುತ್ತಿಲ್ಲ. ಅಳಿದುಳಿದ ಕೆಲವು ಉದ್ದಿಮೆಗಳನ್ನೂ ಖಾಸಗೀಕರಣಗೊಳಿಸಿ ದೇಶದ ಇಡೀ ಆರ್ಥಿಕ ವ್ಯವಸ್ಥೆಯನ್ನು ಬಂಡವಳಿಗರ ಒಡೆತನಕ್ಕೆ ಒಪ್ಪಿಸುವುದು ವಾಜಪೇಯಿ ಸರ್ಕಾರದ ಗುರಿ. ಇದಕ್ಕೆ ಇದುವರೆವಿಗೂ ಜರುಗಿರುವ ವಿದ್ಯಮಾನಗಳೇ ಸಾಕ್ಷಿ. ಅಮೆರಿಕಾಕ್ಕೆ ಭಂಟರಾಗುವುದೇ ಅವರ ಪರಮೋದ್ದೇಶ. ಆದ್ವಾನಿ-ಸಿಂಘಾಲ್-ಸುದರ್ಶನ್ ಕೂಟ ಮತ್ತು ಬಂಡವಾಳಶಾಹಿ ಹುಟ್ಟುಹಾಕಿದ ಕೋಮುವಾದವು ನಮ್ಮ ಸಮಾಜವನ್ನು ಒಡೆಯುವುದರಲ್ಲಿ ದಾಪುಗಾಲು ಹಾಕುತ್ತಿದೆ. ತಮ್ಮ ದೈನಂದಿನ ಸಂಕಷ್ಟಗಳ ಪರಿಹಾರಕ್ಕಾಗಿ ಕಾರ್ಮಿಕ ಸಂಘಟನೆಗಳ ಸಹಯೋಗವನ್ನು ಪಡೆಯುವ ಕಾರ್ಮಿಕ ವರ್ಗದ ಒಂದು ದೊಡ್ಡ ಭಾಗವು ಚುನಾವಣೆಗಳಲ್ಲಿ ವಾಜಪೇಯಿ ಬಣವನ್ನು ಬೆಂಬಲಿಸಿ ತನಗೆ ತಾನು ನೇಣು ಹಗ್ಗವನ್ನು ನೇಯ್ದುಕೊಂಡಿತೇನೋ ಎಂಬ ಆತಂಕ ಇಂದು ನಮ್ಮ ಮುಂದಿದೆ. ನಮ್ಮನ್ನು ಕಂಗಾಲಾಗಿಸುತ್ತಿರುವ ಜನವಿರೋಧಿ ರಾಜಕೀಯ ವ್ಯವಸ್ಥೆಯ ವಿರುದ್ಧವಾಗಿ ಒಂದು ಸಮಗ್ರ ಹೋರಾಟದ ಅವಶ್ಯಕತೆಯಿದೆ. ಅದಕ್ಕೆ ಪೂರ್ವಭಾವಿಯಾಗಿ ಇಡೀ ಕಾರ್ಮಿಕ ವರ್ಗದ ವಿವಿಧ ಸಂಘಟನೆಗಳು ತಮ್ಮೆಲ್ಲ ಆಂತರಿಕ ಭಿನ್ನಾಭಿಪ್ರಾಯಗಳನ್ನು ಬದಿಗಿಟ್ಟು ಒಂದಾಗಿ ನಿಂತು ಹೋರಾಡಬೇಕಾಗಿದೆ. ಇದು ಅವರ ಐತಿಹಾಸಿಕ ಜವಾಬ್ದಾರಿ. ಈ ನಿಟ್ಟಿನಲ್ಲಿ ಇದೇ ಫೆಬ್ರವರಿ ೨೬ರಂದು ದೆಹಲಿಯಲ್ಲಿ ಕೇಂದ್ರ ಸರಕಾರದ ಆರ್ಥಿಕ ನೀತಿಗಳನ್ನು ವಿರೋಧಿಸಿ ಸಂಘಟಿಸಲಾದ ಬೃಹತ್ ಪ್ರತಿಭಟನಾ ಕಾರ್ಯಕ್ರಮ ನಿಜಕ್ಕೂ ಮೆಚ್ಚುವಂಥಾದ್ದು. ಪಾರ್ಲಿಮೆಂಟಿಗೆ ದುಡಿಯುವ ಜನ ಕೊನೆಯ ಎಚ್ಚರ ನೀಡಿದ್ದಾರೆಂದರೆ ತಪ್ಪಾಗಲಾರದು. ದೇಶದಲ್ಲಿ ಎಲ್ಲ ಕಾರ್ಮಿಕರನ್ನು ಪ್ರತಿನಿಧಿಸುವ ಕೇಂದ್ರೀಯ ಸಂಘಟನೆಗಳೂ ಈ ಹೋರಾಟದಲ್ಲಿ ಕೈಜೋಡಿಸಿದ್ದು ಹೊಸ ಭರವಸೆಯನ್ನು ಮೂಡಿಸುತ್ತದೆ.

ಸರಕಾರಿ ಅಥವಾ ಸಾರ್ವಜನಿಕ ಉದ್ದಿಮೆಗಳಿಂದ ಬಂಡವಾಳವನ್ನು ಹಿಂತೆಗೆಯುವಿಕೆಯಾಗಲಿ, ದೂರವಾಣಿ ದರ ಏರಿಕೆಯಾಗಲಿ, ಇವು ಇಂದು ರಾಷ್ಟ್ರವನ್ನು ಆವರಿಸಿರುವ ಲೂಟಿಯ ಮನೋಭಾವದ ಒಂದು ಮುಖ ಮಾತ್ರ. ಅಂತಹ ಹುನ್ನಾರಗಳು ಇನ್ನೂ ಸಾವಿರದಷ್ಟಿವೆ. ಅವಕ್ಕೆ ಪ್ರತಿರೋಧ ಒಡ್ಡಲು ಫೆಬ್ರವರಿ ೨೬ರಂದು ಜರುಗಿದ ದುಡಿಯುವ ಜನರ ಪ್ರತಿಭಟನೆಯು ಒಂದು ಸಾಂಕೇತಿಕ ದಿಟ್ಟ ಹೆಜ್ಜೆ. ಲಂಚಗುಳಿತನ, ಕೋಮುವಾದ, ಪರಿಸರ ಮಾಲಿನ್ಯ, ಹೀಗೆ ಇನ್ನೂ ಹಲವಾರು ಸಮಸ್ಯೆಗಳು ಜನತೆಯ ಮುಂದಿವೆ. ಇವೆಲ್ಲವನ್ನೂ ಪರಾಮರ್ಶಿಸಿಕೊಂಡು ಇಡೀ ಜನಸಮುದಾಯ ಸಮಗ್ರ ಹೋರಾಟಗಳನ್ನು ರೂಪಿಸಬೇಕಾಗಿದೆ. ಈ ಹೋರಾಟಗಳು ಕೋಮುವಾದದ ವಿರೋಧದ್ದು, ಜಾಗತೀಕರಣದ ವಿರುದ್ಧವಾದದ್ದು, ಅಮೆರಿಕನ್ ಸಾಮ್ರಾಜ್ಯಶಾಹಿ ವಿರೋಧದ್ದು, ಪ್ರಜಾಪ್ರಭುತ್ವವನ್ನು ಬಲಗೊಳಿಸುವಂಥದ್ದು, ಜನಪರವಾದದ್ದು. ಇಂದು ದುಡಿಯುವ ಜನತೆ ಒಂದಾಗಿ ವಾಜಪೇಯಿ ಸರ್ಕಾರವನ್ನು ಹಿಮ್ಮೆಟ್ಟಿಸದಿದ್ದಲ್ಲಿ ಅದು ನಮ್ಮ ದೇಶದ ಭವಿಷ್ಯದ ಬಗ್ಗೆ ಉಪೇಕ್ಷೆಯ ಭಾವನೆಯನ್ನು ಪ್ರದರ್ಶಿಸಿದಂತಾಗುತ್ತದೆ. ದುಡಿಯುವ ಜನ ಹಾಗೆ ಹಿಮ್ಮುಖರಾಗುವುದಿಲ್ಲವೆಂಬ ಭರವಸೆ ನಮ್ಮದು.

- ಎಸ್. ಸುರೇಂದ್ರ









*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

*ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ :೨೨೫೧೩೬೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧ ☎ : ೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪ ☎ : ೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨ ☎ : ೪೨೪೩೦೨

## ಪತ್ರಗಳು

'ಹೊಸತು' ವಿಶೇಷ ಸಂಚಿಕೆ -೨೦೦೩ ಕಥೆಗಳು, ಕವನಗಳು, ಹನಿಗವನಗಳು, ಪ್ರಬಂಧಗಳು, ಇಂದಿನ ರಾಜಕೀಯ ವ್ಯವಸ್ಥೆಗಳ ವಿಶ್ಲೇಷಣೆಗಳನ್ನೊಳಗೊಂಡ ಲೇಖನಗಳಿಂದ ವೈವಿಧ್ಯಮಯವಾದ ಸಂಚಿಕೆಯಾಗಿ ಮೂಡಿಬಂದಿದೆ. ಈ ಸಂಚಿಕೆ ಸಂಗ್ರಾಹ್ಯ ಯೋಗ್ಯ. ಆಕರ್ಷಕ ಹೊರ ಕವಚ, ಸುಂದರ ಹಾಗೂ ಸ್ಪಷ್ಟ ಮುದ್ರಣ ಈ ಸಂಚಿಕೆಯ ಹೈಲೈಟ್.

ಈ ಸಂಚಿಕೆಯನ್ನು ಓದಿದಾಗ ಒಳ್ಳೆಯ ರುಚಿಕರವಾದ ಹಾಗೂ ವಿವಿಧ ಖಾದ್ಯಗಳನ್ನೊಳಗೊಂಡ ಮೃಷ್ಟಾನ್ನ ಭೋಜನ ಮಾಡಿದಂತ ತೃಪ್ತಿ, ಸಂತೋಷವಾಯ್ತು. ಈ ಸಂಚಿಕೆಯ ಯಶಸ್ಸಿಗೆ ಕಾರಣರಾದ ಎಲ್ಲರಿಗೂ ಓದುಗ ಬಳಗದ ಪರವಾಗಿ ಅಭಿನಂದನೆಗಳು.

*ಶಿವಮೊಗ್ಗ* **ಎನ್. ಶೇಷಗಿರಿರಾವ್**

ಈ ಸಲವೂ ಜನವರಿ ಸಂಚಿಕೆ ವೈವಿಧ್ಯ ವಿಶೇಷಗಳನ್ನೇ ಇಂಬುಗೊಂಡಿದೆ, ಪತ್ರಿಕೆಯ ಕಾಳಜಿ ಸಕಾಲಿಕ ಸುಸಂಗತಿಯನ್ನು ಮೆರೆದಿದೆ. ಸಂಪಾದಕೀಯದಲ್ಲಿ ಮದರ್ ಥೆರೆಸಾ ಅವರಿಗೆ ದೈವೀ ಪವಾಡಗಳ ವೇಷ ತೊಡಿಸುತ್ತಿರುವುದನ್ನು ಅಲ್ಲಗಳೆದಿರುವುದಕ್ಕಾಗಿ ಅಭಿನಂದನೆಗಳು.

*ಚಿಗಟೇರಿ* **ಮುದೇನೂರ ಸಂಗಣ್ಣ**

'ಹೊಸತು' ವಿಶೇಷ ಸಂಚಿಕೆ ಸ್ಪಷ್ಟ ಮುದ್ರಣದಿಂದ ಅಚ್ಚುಕಟ್ಟಾಗಿ ಮೂಡಿಬಂದು, ವಿಚಾರಪೂರಿತ ಲೇಖನಗಳೊಂದಿಗೆ ಸಂಗ್ರಹ ಯೋಗ್ಯವಾಗಿದೆ. ತಮ್ಮ ಶ್ರಮ ಅದ್ವಿತೀಯ.

*ಬೆಂಗಳೂರು* **ಎ. ಕೃಷ್ಣ ಸ್ವಾಮಿ**

'ಹೊಸತು' ವಿಶೇಷ ಸಂಚಿಕೆ ಮುದ್ದಾಗಿತ್ತು. ಅಮರೇಶ ನುಗಡೋಣಿಯವರ ಕತೆ 'ಕೊರಡು ಕೊನರುವ ಪರಿ' ವಿಶಿಷ್ಟ ವಿಭಿನ್ನವಾಗಿತ್ತು. ಸಮಾಜದಲ್ಲಿ ಮತಮಾನ್ಯಗಳ ಹೆಸರಲ್ಲಿ ಆಗುತ್ತಿರುವ ವಿಷಯಗಳು ಜನರಿಗೆ ತಿಳಿಯದಂತೆ ಮಾಡುವ ಒಳ ಸಂಚುಗಳನ್ನು ಬಿಚ್ಚಿ ಹೇಳುತ್ತದೆ.

'ಚುಕ್ಕಿ' ಕತೆಯ ಮುಖ್ಯಪಾತ್ರವೆನಿಸುತ್ತಾಳೆ.

*ದೇವದುರ್ಗ* **ಭೀಮೋಜಿರಾವ್ ಜಗತಾಪ್**

'ಹೊಸತು' ವಿಶೇಷಾಂಕ ಚೆನ್ನಾಗಿ ಬಂದಿದೆ. ಅಭಿನಂದನೆ.

*ಧಾರವಾಡ* **ಡಾ|| ಪಂಚಾಕ್ಷರಿ ಹಿರೇಮಠ**

ಈ ವಿಶೇಷ ಸಂಚಿಕೆಯಲ್ಲಿ ನೀವು ಸಂಕಲಿಸಿರುವ ವಿಷಯ ವೈವಿಧ್ಯವನ್ನು ಗಮನಿಸಿದರೆ ಅಚ್ಚರಿಯಾಗುತ್ತದೆ ! ನಿಮಗೆ ಧನ್ಯವಾದಗಳು !

*ಕುಮಟ* ಬಿ. ಎ. ಸನದಿ

ವಿಶೇಷಾಂಕ ಹೊತ್ತು ತಂದ ಶೀರ್ಷಿಕೆಗಳು ಒಂದಕ್ಕಿಂತೊಂದು ಮಿಗಿಲು. ಓದುಗರ ಮನಸ್ಸನ್ನು ಸೂರೆಗೊಂಡಿತ್ತು. ಉದಾಹರಣೆಗೆ ಡಾ|| ಕೆ. ಶಿವಶಂಕರರ ''ಜಲಸಂಪನ್ಮೂಲ, ಜಲಮಾಲಿನ್ಯ ಮತ್ತು ಜಲಸಂರಕ್ಷಣೆ'' ಅಂಕಿ ಅಂಶಗಳೊಂದಿಗೆ ಪೂರಕವಾಗಿದ್ದರೆ, ಡಾ|| ಸಿ. ಪ್ರಕಾಶ ರಾವ್ ಅವರ ''ರಾಷ್ಟ್ರೀಯ ಆರೋಗ್ಯ ನೀತಿ ಜಾಗತೀಕರಣದ ಹಿನ್ನೆಲೆಯಲ್ಲಿ'' ವಾಸ್ತವತೆಯ ನೈಜಚಿತ್ರಣವನ್ನು ಪ್ರತಿಬಿಂಬಿಸುವಂತಿತ್ತು. ಡಾ|| ರಾಜಾರಾಮ ಹೆಗಡೆಯವರ ''ವಿಜಯನಗರದ ಪತನ ಕಥನಗಳು'' ಇತಿಹಾಸದ ಮರುಕಳಿಕೆ ಆಗಿತ್ತೆಂದರೆ ಅತಿಶಯೋಕ್ತಿಯಲ್ಲ.

ಒಟ್ಟಾರೆ ನಿರೀಕ್ಷೆಗೂ ಮೀರಿ ನಿಂತಿತ್ತು.

*ಬೆಂಗಳೂರು* **ನೆ. ಲ. ರಾಮಮೂರ್ತಿ**




ಫೆಬ್ರವರಿ ತಿಂಗಳಿನ 'ಹೊಸತು' ಮಾಸ ಪತ್ರಿಕೆಯ ಮುಖಚಿತ್ರದ ಕೊಡುಗೆ ಶ್ರೀ ಕೆ. ಪಿ. ಸ್ವಾಮಿಯವರದ್ದು. ಅತ್ಯದ್ಭುತವಾಗಿತ್ತು.

ಇಂತಹದೇ ಕಲಾತ್ಮಕ ಚಿತ್ರಗಳಿಗಾಗಿ ಆಶಿಸುವ ಓದುಗ ನಾನು.

*ಬೆಂಗಳೂರು* **ಬಿ. ವಿಜಯ ಶೆಟ್ಟಿ**

ಅರಬೆತ್ತಲೆ ಫಕೀರ ಗಾಂಧೀ – ಸೂಟುಧಾರಿ ಅಂಬೇಡ್ಕರ್ ಫೆಬ್ರವರಿ ಸಂಚಿಕೆಯ ಸಿ. ಬಿ. ಹೊನ್ನಯ್ಯರವರ ತಾತ್ವಿಕ ಜಿಜ್ಞಾಸೆ ಓದಿ ಮನಸ್ಸು ದ್ವಂದಕ್ಕೆ ಬಿತ್ತು ! ವೈಚಾರಿಕತೆಯ ನೆವದಿಂದ ಲೇಖಕರು ನಮ್ಮ ಮೆದುಳಿಗೆ ಕೈಯಿಕ್ಕಿ ಚಿಂತಿಸಲು ಪ್ರೇರೇಪಿಸಿದ್ದಾರೆ ! ಈ ಈರ್ವರು ನಾಯಕರು ಸ್ವಾತಂತ್ರ್ಯಪೂರ್ವದ ಜನಸಂಘರ್ಷದಲ್ಲಿ ತಮ್ಮದೇ ಛಾಪಿನ ಮೂಲಕ ಧಾವಂತದ ಕ್ರಿಯೆಗೆ ಕೈ ಜೋಡಿಸಿದ್ದರು ! ಭಿನ್ನಾಭಿಪ್ರಾಯಗಳಿದ್ದೂ ತಾತ್ವಿಕ ನೆಲೆಗಟ್ಟು ಒಂದೇ ಆಗಿತ್ತೆಂಬುದು ಗಮನೀಯ ಅಂಶ. ಇಂಥ ಬರಹಗಳಿಂದ 'ಹೊಸತು'ಗೊಂದು ಮೆರುಗು !

*ಕಣವೆ ಬಿಳಚಿ* **ಸಂತೇಬೆನ್ನೂರು ಫೈಜ್ನಟ್ರಾಜ್**

೨೦೦೩ರ ಫೆಬ್ರವರಿ 'ಹೊಸತು' ಸಂಚಿಕೆಯ ಹಲವು ಲೇಖನಗಳು ವಿಚಾರ ಪ್ರಚೋದಕ ಮತ್ತು ಸಕಾಲಿಕ. ಸಂಚಿಕೆಯಲ್ಲಿನ ಪ್ರೊ|| ಸಿ. ಬಿ. ಹೊನ್ನಯ್ಯನವರ ''ಅರೆ ಬೆತ್ತಲೆ ಫಕೀರ ಗಾಂಧಿ ಸೂಟುಧಾರಿ ಅಂಬೇಡ್ಕರ್ : ತಾತ್ವಿಕ ಜಿಜ್ಞಾಸೆ'' ಪರಿವರ್ತನೆಗೆ ಸಂಬಂಧಿಸಿದಂತೆ ಎರಡು ವಿರುದ್ಧವಾಗಿರುವ ಮತ್ತು ಧ್ರುವಗಳ ಮಾದರಿಯ ವ್ಯಾಖ್ಯಾನಗಳಾಗಿವೆ. ಗಾಂಧಿ ಒಂದು ರೀತಿಯಲ್ಲಿ ಯಥಾಸ್ಥಿತಿವಾದ ಪ್ರತಿನಿಧಿಸಿದರೆ ಅಂಬೇಡ್ಕರ್ ಅದನ್ನು ತಿರಸ್ಕರಿಸಿ ನಿಲ್ಲುವರು.

ಅದೇ ರೀತಿ ಸಂಚಿಕೆಯ ಸಂದರ್ಶನ ಲೇಖನ ''ನ್ಯಾಯಕ್ಕಾಗಿ ಹೋರಾಡುವುದು ಅಪರಾಧವಲ್ಲ'' ರಾಹುಲ ಬೆಳಗಲಿ ಅವರ ಲೇಖನ. ದೇಶದಲ್ಲಿ ಸ್ವಾರ್ಥ ಹೆಚ್ಚಾಗಿರುವ ಇಂದು ಈ ಮಾತು (ನಿಃಸ್ವಾರ್ಥದ್ದು) ಆಡುವವರು ಇದ್ದಾರಲ್ಲ ಎಂಬ ಆನಂದ ಆಗುತ್ತದೆ.

*ಸೇಡಂ* **ಅಣ್ಣಾ ಸಾಗರ್, ಬಿ. ಆರ್.**

ಫೆಬ್ರವರಿ ಸಂಚಿಕೆಯ ಮುಖಪುಟ ಚೆನ್ನಾಗಿರಲಿಲ್ಲ ಆದರೂ ಬಸವ ಮತ್ತು ದೇವರು ಕಥೆ ಸುಂದರವಾಗಿತ್ತು.

ಹೆಸರು, ಬಡತನ, ಪ್ರೀತಿಯ, ಮಧ್ಯೆಯ ಸಂಬಂಧಗಳು ಸುಂದರವಾಗಿತ್ತು.

*ಆನೆಗುಂಡಿ* **ರಾಧಾಕೃಷ್ಣ**

ಫೆಬ್ರವರಿ ಸಂಚಿಕೆಯಲ್ಲಿ ಶ್ರೀ. ರಾ. ನಂ. ಚಂದ್ರಶೇಖರ ಅವರು ಎತ್ತಿರುವ ಪ್ರಮುಖ ಪ್ರಶ್ನೆಯನ್ನು ಇಡೀ ದುಡಿಯುವ ಜನತೆ ಪರಿಶೀಲಿಸಿ ದೇಶದ ಸಂಪತ್ತಿನ ವೃದ್ಧಿಗಾಗಿ ಹೋರಾಟಗಳನ್ನು ನಡೆಸುವುದು ಆದ್ಯತೆಯ ಕೆಲಸವೆಂದು ಭಾವಿಸುತ್ತೇನೆ.

*ಚಿತ್ರದುರ್ಗ* **ಎಂ. ವೀರೇಶ**

### ಕರಾವಳಿ ಸಾಂಸ್ಕೃತಿಕ ಪ್ರತಿಷ್ಠಾನ

ಕಾಸರಗೋಡಿನ ಕರಾವಳಿ ಸಾಂಸ್ಕೃತಿಕ ಪ್ರತಿಷ್ಠಾನ ಹಾಗೂ ಕಾಸರಗೋಡು ಜಿಲ್ಲೆಯ ಕನ್ನಡ ಸಂಘ ಸಂಸ್ಥೆಗಳ ಸಹಯೋಗದಲ್ಲಿ ಕಾಸರಗೋಡಿನ ಮಂಜೇಶ್ವರದ ರಾಷ್ಟ್ರಕವಿ ನಿವಾಸದ ಆವರಣದಲ್ಲಿ ಮಾರ್ಚ್ ೨೩, ೨೦೦೩ ರಂದು ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈ ಅವರ ೧೨೦ನೇ ಜನ್ಮ ದಿನೋತ್ಸವ ಹಾಗೂ ಕೇರಳ ರಾಜ್ಯ ಪ್ರಥಮ ಕನ್ನಡ ಮತ್ತು ಸಂಸ್ಕೃತಿ ಸಮ್ಮೇಳನ ನಡೆಯಲಿದೆ. ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈ ಸ್ಮಾರಕ ನಿವಾಸವನ್ನು ಸಾಹಿತ್ಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರವನ್ನಾಗಿಯೂ, ಅಂತರ್-ರಾಜ್ಯ ಮಟ್ಟದಲ್ಲಿ ಅಧ್ಯಯನ ಮತ್ತು ಸಂಶೋಧನಾ ಕೇಂದ್ರವನ್ನಾಗಿಯೂ ರೂಪೀಕರಿಸುವುದಕ್ಕಾಗಿ ಸಂಬಂಧಪಟ್ಟ ಸರಕಾರಗಳಿಗೆ ಒತ್ತಾಯಿಸಲು ಕೇರಳ ರಾಜ್ಯ ಕನ್ನಡ ಮತ್ತು ಸಂಸ್ಕೃತಿ ಸಮ್ಮೇಳನ-೨೦೦೩ನ್ನು ಏರ್ಪಡಿಸಲಾಗಿದೆ.

ಅಖಿಲ ಕರ್ನಾಟಕ ರಾಜ್ಯದಿಂದ ಸಾಹಿತಿಗಳು, ವಿದ್ವಾಂಸರು, ಪತ್ರಕರ್ತರು, ಪ್ರಕಾಶಕರು, ಹಾಗೂ ಸಾಹಿತ್ಯಾಭಿಮಾನಿಗಳು ಹೆಚ್ಚಿನ ಸಂಖ್ಯೆಯಲ್ಲಿ ಪಾಲ್ಗೊಳ್ಳುವಂತೆ ವಿನಂತಿಸಲಾಗಿದೆ.

**ವಿವರಗಳಿಗೆ ಸಂಪರ್ಕಿಸಿ :-**

**ಶಿವರಾಮ ಕಾಸರಗೋಡು**
**ಅಧ್ಯಕ್ಷರು, ಕರಾವಳಿ ಸಾಂಸ್ಕೃತಿಕ ಪ್ರತಿಷ್ಠಾನ**
**ಪಾರೆಕಟ್ಟೆ ರಸ್ತೆ, ಅಂಚೆ : ರಾಮದಾಸ ನಗರ**
**ಕಾಸರಗೋಡು - ೬೭೧ ೧೨೩. ದೂರವಾಣಿ :**
**೦೪೯೯-(೯೪೯೯) ೪೨೬೩೪೧, ೪೨೭೬೧೧**

# ಕೋಮುವಾದದ ನೆರಳಲ್ಲಿ

**ಡಾ|| ಜಿ. ಎಸ್. ಶಿವರುದ್ರಪ್ಪ**

**ನಾ**ನು ನನ್ನ ಬದುಕಿನ ಬಹುಭಾಗವನ್ನು ವಿದ್ಯಾರ್ಥಿಗಳ ಜತೆಗೆ ಕಳೆದಿದ್ದೇನೆ. ಹೆಸರಿಗೆ ನಾನು ಮೂವತ್ತು ವರ್ಷಗಳ ಕಾಲ ಅಧ್ಯಾಪಕನಾಗಿದ್ದರೂ, ಮೂಲತಃ ನಾನು ಒಬ್ಬ ವಿದ್ಯಾರ್ಥಿಯಾಗಿಯೇ ಉಳಿದಿದ್ದೇನೆ; ಬೆಳೆದಿದ್ದೇನೆ. ನಿವೃತ್ತನಾಗಿ ಒಂದೂವರೆ ದಶಕದ ನಂತರ ಇಂಥ ವಿದ್ಯಾರ್ಥಿ ಸಮುದಾಯದ ಜತೆಗೆ ಇರುವುದು ಮತ್ತು ನನ್ನ ಕೆಲವು ಚಿಂತನೆಗಳನ್ನು ಅವರೊಂದಿಗೆ ಹಂಚಿಕೊಳ್ಳುವುದು ನನಗೆ ಸಂತೋಷದ ಸಂಗತಿಯೇ. ಇಂಥ ಒಂದು ಸಂದರ್ಭವನ್ನು ವಿದ್ಯಾರ್ಥಿ ಒಕ್ಕೂಟದ ಸಂಘಟಕರು ನನಗೆ ತಂದುಕೊಟ್ಟಿದ್ದಾರೆ.

ವಿದ್ಯಾರ್ಥಿಗಳಾದ ನೀವೆಲ್ಲ ಯುವಕರು. ಯೌವನ ಎನ್ನುವುದು ಉತ್ಸಾಹಕ್ಕೆ, ಕಲ್ಪನಾ ಸಾಮರ್ಥ್ಯಕ್ಕೆ ಮತ್ತು ಕ್ರಿಯಾಶೀಲತೆಗೆ ಒಂದು ಸಂಕೇತ ಎಂದು ನಾನು ತಿಳಿದಿದ್ದೇನೆ. ಈ ಒಂದು ಯೌವನವನ್ನು ಯಾರು ತಮ್ಮ ಬದುಕಿನ ಉದ್ದಕ್ಕೂ ಉಳಿಸಿಕೊಳ್ಳುತ್ತಾರೋ ಅವರಿಂದ ಮಾತ್ರ ನಿಜವಾದ ಬದಲಾವಣೆಗಳು ನಮ್ಮ ಪರಿಸರದಲ್ಲಿ ಸಂಭವಿಸಬಹುದು. ನಾನು ಹದಿನೆಂಟು ವರ್ಷದ ಮುದುಕರನ್ನು ಕಂಡಿದ್ದೇನೆ; ಎಪ್ಪತ್ತೈದು ವರ್ಷದ ಯುವಕರನ್ನು ಕಂಡಿದ್ದೇನೆ ! ಈ ಹಿನ್ನೆಲೆಯಿಂದ ಹೇಳುವುದಾದರೆ ಯೌವನ ಎನ್ನುವುದು ಕೇವಲ ಒಂದು ವಯೋಮಾನಕ್ಕೆ ಸಂಬಂಧಿಸಿದ್ದಲ್ಲ; ಅದೊಂದು ಉತ್ಸಾಹಪೂರ್ಣವಾದ ಮತ್ತು ಕ್ರಿಯಾಶಾಲಿಯಾದ ಮನಃಸ್ಥಿತಿ - ಎಂದೇ ನನ್ನ ತಿಳಿವಳಿಕೆಯಾಗಿದೆ.

ಒಂದು ದೇಶದ ಚರಿತ್ರೆಯ ನಿರ್ಣಾಯಕ ಘಟ್ಟಗಳಲ್ಲಿ ಬದಲಾವಣೆಗಳಾಗಿರುವುದು ಇಂಥ ಕ್ರಿಯಾಶೀಲರಾದ ಯುವಕರಿಂದಲೇ. ಭಾರತೀಯ ಸ್ವಾತಂತ್ರ್ಯ ಚಳುವಳಿಯಲ್ಲಿ ಪಾಲುಗೊಂಡವರಲ್ಲಿ ಬಹುಪಾಲು ಅಂದಿನ ವಿದ್ಯಾರ್ಥಿಗಳು ಅಥವಾ ಯುವಕರು ಎಂದು ಹೇಳಬಹುದು - ಅವರಿಗೆ ಸ್ಫೂರ್ತಿ ಹಾಗೂ ಮಾರ್ಗದರ್ಶಕರಾದವರು ಹಿರಿಯರಾಗಿದ್ದರು.

ನಾನು ವಿದ್ಯಾರ್ಥಿಯಾಗಿದ್ದ ಕಾಲ ಈ ರಾಷ್ಟ್ರದ ಚರಿತ್ರೆಯಲ್ಲಿ ಅತ್ಯಂತ ಚಲನಶೀಲವಾದ ಕಾಲವಾಗಿತ್ತು; ಉಜ್ವಲವಾದ ಕಾಲವಾಗಿತ್ತು. ಆಗ ಪರಾಕ್ರಮಣದ ವ್ಯಥೆಯ ಜತೆಗೆ, ಈ ಪರತಂತ್ರದಿಂದ ಪಾರಾಗಿ, ಸ್ವತಂತ್ರವಾಗುವ ಹೋರಾಟದ ಕೆಚ್ಚಿತ್ತು. ಕಣ್ಣ ಮುಂದೆ ಭವ್ಯ ಭಾರತದ ನಿರ್ಮಾಣದ ಕನಸಿತ್ತು. ಜತೆಗೆ ಈ ಗುರಿಗೆ ಮುನ್ನಡೆಸಬಲ್ಲ ಮಾರ್ಗದರ್ಶಕ ಮಹಾ ಸತ್ವಗಳಿದ್ದವು. ರಾಷ್ಟ್ರಕವಿ ಕುವೆಂಪು ಅವರ ಮಾತುಗಳಲ್ಲಿ ಹೇಳಬೇಕಾದರೆ :

'ಮುಂದಕ್ಕೆ ಗುರಿಯಿತ್ತು, ಹಿಂದಕ್ಕೆ ಗುರುವಿದ್ದ,
ನುಗ್ಗಿದುದು ಧೀರದಂಡು !'

ಆದರೆ ಸ್ವಾತಂತ್ರ್ಯ ಬಂದ ಅರ್ಧಶತಮಾನದ ನಂತರದ ಕಾಲದ ಇಂದಿನ ಭಾರತದಲ್ಲಿ ನಿಂತ ನಿಮ್ಮ ಮುಂದೆ - ಪ್ರಜಾಪ್ರಭುತ್ವವನ್ನು ಒಪ್ಪಿಕೊಂಡ ಸ್ವತಂತ್ರ ಭಾರತವಿದೆ. ಈ ಭಾರತ ಕಂಡ ಪ್ರಜಾಪ್ರಭುತ್ವದ ಕನಸುಗಳು ಈಡೇರದ, ಒಂದು ಉಬ್ಬಸಗೊಳಿಸುವ ಅಸ್ವಸ್ಥತೆ ಈ ದೇಶವನ್ನೆಲ್ಲ ಕಬಂಧನಂತೆ ಆವರಿಸಿಕೊಂಡಿದೆ. ಈ ಅಸ್ವಸ್ಥತೆಯ ಕಾರಣಗಳನ್ನು ಸ್ಥೂಲವಾಗಿ ನಾಲ್ಕು ಎಂದು ಗುರುತಿಸಬಹುದು.

ಮೊದಲನೆಯದು : ಪರಿಸರ ನಾಶದ ತಲ್ಲಣಗಳು.

ಎರಡನೆಯದು : ಕಳೆದ ಎರಡು ಶತಮಾನಗಳ ಕಾಲದಲ್ಲಿ ಈ ಜಗತ್ತು ವಿಜ್ಞಾನ ಮತ್ತು ತಂತ್ರಜ್ಞಾನಗಳಲ್ಲಿ ಅನೂಹ್ಯವಾದ ಪ್ರಗತಿಯನ್ನ ಸಾಧಿಸಿದ್ದರೂ, ಈ ಭಾರತದ ಜನಮನಸ್ಸು ಇನ್ನೂ ಅವೈಚಾರಿಕತೆಯಲ್ಲಿ ಮತ್ತು ಹೊಸ ಹೊಸ ಮೂಢನಂಬಿಕೆಗಳಲ್ಲಿ ಸ್ಥಗಿತಗೊಳ್ಳುತ್ತಿರುವ ಕ್ರಮ.

ಮೂರನೆಯದು : ದಿನದಿಂದ ದಿನಕ್ಕೆ ದೇವರು-ದೇವಸ್ಥಾನ ಮತ್ತು ಧರ್ಮದ ಹೆಸರಿನಲ್ಲಿ ವಿಜೃಂಭಿಸುತ್ತಿರುವ ಕೋಮುವಾದದ ಅನಾಹುತಗಳು ಮತ್ತು ಜಾಗತಿಕ ಭಯೋತ್ಪಾದಕತೆಯೊಂದಿಗೆ ಅದು ವಿಸ್ತರಿಸಿಕೊಳ್ಳುತ್ತಿರುವ ಸಂಬಂಧದ ಅಪಾಯಗಳು.

ನಾಲ್ಕನೆಯದು : ಜಾಗತೀಕರಣ, ಉದಾರೀಕರಣಗಳ ಜಾಲದಲ್ಲಿ ಈ ದೇಶ ಬಹುರಾಷ್ಟ್ರೀಯತೆಯ ನಿಯಂತ್ರಣಕ್ಕೆ ಒಳಗಾಗಿ ಪಡುತ್ತಿರುವ ಪಾಡುಗಳು.

ಈ ನಾಲ್ಕರಲ್ಲಿ ಮೊದಲನೆಯದಾದ ಪರಿಸರ ನಾಶದ ತಲ್ಲಣ, ಈ ದೇಶದ ಅಭಿವೃದ್ಧಿ ಯೋಜನೆಗಳ ಜತೆಗೆ ತಳುಕು ಹಾಕಿಕೊಂಡಿರುವ ಸಂಗತಿಯಾಗಿದೆ. ಗಾಂಧೀ ಮಾದರಿಯ ಗ್ರಾಮ ಕೇಂದ್ರಿತ ಹಾಗೂ ಸರ್ವೋದಯ ಮೂಲವಾದ ಅಭಿವೃದ್ಧಿ ಯೋಜನೆಗಳನ್ನು ಮೂಲೆಗೆ ತಳ್ಳಿ ನೆಹರೂ ಮಾದರಿಯ ಪಾಶ್ಚಾತ್ಯ ತಂತ್ರಜ್ಞಾನ ಮೂಲವಾದ ಅಭಿವೃದ್ಧಿ ಯೋಜನೆಗಳನ್ನು ಅನುಷ್ಠಾನಕ್ಕೆ ತಂದದ್ದರಿಂದ, ಮೇಲುನೋಟಕ್ಕೆ ಸಾಕಷ್ಟು ಪ್ರಗತಿಯಾದಂತೆ ತೋರಿದರೂ, ಈ ದೇಶದ ಪರಿಸರದ ಮೇಲೆ ಹಾಗೂ ಅವುಗಳನ್ನವಲಂಬಿಸಿದ ಅರಣ್ಯ ಸಂಸ್ಕೃತಿಗಳ ಮೇಲೆ ಆಗಿರುವ, ಆಗುತ್ತಿರುವ ದುಷ್ಪರಿಣಾಮಗಳು ಗಾಬರಿಗೊಳಿಸುವಂತಿವೆ. ಕುಡಿಯುವ ನೀರು, ತಿನ್ನುವ ಅನ್ನ, ಉಸಿರಾಡುವ ಗಾಳಿ ಇವೆಲ್ಲ ಮಲಿನವಾಗಿ, ನಾಳಿನ ಚರಿತ್ರಕಾರರು ಈ ನಮ್ಮ ಕಾಲಮಾನವನ್ನು 'ಮಾಲಿನ್ಯ ಯುಗ' ಎಂದು ಕರೆದರೂ ಆಶ್ಚರ್ಯವಿಲ್ಲ.

ಇನ್ನು ನಾನು ಪ್ರಸ್ತಾಪಿಸಿದ ಎರಡು ಮೂರನೆ ಆತಂಕಗಳಾದ ಅವೈಚಾರಿಕತೆ ಹಾಗೂ ಈ ದೇಶ ಹೇಗೋ ಬಹುಕಾಲದಿಂದ ಕಾಪಾಡಿಕೊಂಡು ಬಂದ ಕೋಮು ಸಾಮರಸ್ಯದ ಆಕೃತಿಗಳು ಧಾರ್ಮಿಕ ಮೂಲಭೂತವಾದಿಗಳಿಂದ ಚೂರು ಚೂರಾಗುತ್ತಿರುವುದನ್ನು ಅಸಹಾಯಕತೆಯಿಂದ ನಾವು ನೋಡಬೇಕಾಗಿರುವ ದುರಂತ – ಈ ಎರಡೂ ಒಂದಕ್ಕೊಂದು ತಳುಕು ಹಾಕಿಕೊಂಡಿವೆ. ನಿಚ್ಚಳವಾದ ವೈಚಾರಿಕತೆಯಿಂದ ಈ ದೇಶದ ಚರಿತ್ರೆ ಹಾಗೂ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳುವ ಪ್ರಯತ್ನ ಮಾಡದೆ ಇದ್ದರೆ ನಾವು ಇನ್ನಷ್ಟು ಅಧೋಗತಿಗೆ ಇಳಿಯುವುದು ಖಂಡಿತ.

ನಾಲ್ಕನೆಯದಾದ ಜಾಗತೀಕರಣ ಉದಾರೀಕರಣಗಳ ಕಾರಣದಿಂದ ನಮ್ಮ ದೇಶೀಯ ಸಂಸ್ಕೃತಿಗಳು ಕ್ರಮೇಣ ನಾಶವಾಗುವ ಪರಿಸ್ಥಿತಿ ಪ್ರಾಪ್ತವಾಗುವುದಲ್ಲದೆ, ಬಂಡವಾಳಶಾಹಿ ರಾಷ್ಟ್ರಗಳ ಕೈಗೊಂಬೆಯೂ ಮಾರುಕಟ್ಟೆಯೂ ಆಗಿ ಈ ದೇಶ ಪರಿವರ್ತಿತವಾಗಿ, ನಾವು ಬಹುಕಾಲದಿಂದ ಹೋರಾಡಿ ಪಡೆದುಕೊಂಡ ಸ್ವಾತಂತ್ರ್ಯಕ್ಕೆ ಯಾವ ಬೆಲೆಯೂ ಇಲ್ಲವಾಗುವ ಸಂಭವವಿದೆ. ಈ ಸಂದರ್ಭದಲ್ಲಿ ಮಹಾತ್ಮಾ ಗಾಂಧಿಯವರು ಹೇಳಿದ ಮಾತೊಂದು ನೆನಪಿಗೆ ಬರುತ್ತಿದೆ: 'ನಾನು ನನ್ನ ಸುತ್ತ ಗೋಡೆ ಕಟ್ಟಿಕೊಂಡು, ನನ್ನ ಮನೆಯ ಕಿಟಕಿ ಬಾಗಿಲುಗಳನ್ನೆಲ್ಲ ಮುಚ್ಚಿಕೊಂಡು ಕೂತಿರಲು ಇಚ್ಛಿಸುವುದಿಲ್ಲ; ಈ ಮನೆಯ ಕಿಟಕಿ ಬಾಗಿಲುಗಳನ್ನೆಲ್ಲ ಅಗಲವಾಗಿ ತೆರೆದಿಡುತ್ತೇನೆ. ಹತ್ತು ದಿಕ್ಕಿನ ಗಾಳಿಗಳೆಲ್ಲ ಈ ಮನೆಯ ಮೇಲೆ ಬೀಸಲಿ. ಆದರೆ ನಾನು ಮಾತ್ರ ನಿಂತ ನೆಲದಿಂದ ವಿಚಲಿತವಾಗುವುದನ್ನು ನಿರಾಕರಿಸುತ್ತೇನೆ ?' ಈಗ ಈ ಸ್ವತಂತ್ರ ಭಾರತದ ಆಡಳಿತವನ್ನು ಕೈಗೆ ತೆಗೆದುಕೊಂಡ ಪ್ರಭೃತಿಗಳು, ಈ ದೇಶದ ಕಿಟಕಿ ಬಾಗಿಲುಗಳನ್ನೆಲ್ಲ ಅಗಲವಾಗಿ ತೆರೆದಿದ್ದಾರೆ. ಈಗ ಹತ್ತು ದಿಕ್ಕಿನ ಗಾಳಿ ಮಾತ್ರವಲ್ಲ; ಇನ್ನೂ ಏನೇನೋ, ಈ ದೇಶದ ತೆರೆದ ಬಾಗಿಲ ಮೂಲಕ ನುಗ್ಗುತ್ತಿವೆ! ಕೇಳಿಕೊಳ್ಳಬೇಕಾದ ಪ್ರಶ್ನೆ : ನಾವು ಈ ದಾಳಿಗಳಿಂದಾಗಿ, ನಿಂತ ನೆಲದ ಮೇಲೆ ಭದ್ರವಾಗಿ ಕಾಲೂರಿ ನಿಂತಿದ್ದೇವೆಯೆ ?

ಹತ್ತೊಂಬತ್ತನೆಯ ಶತಮಾನದ ಮಹಾ ಸಂತರಾದ ಶ್ರೀ ರಾಮಕೃಷ್ಣ ಪರಮಹಂಸರು ತಮ್ಮ ಯೋಗ ವಿಜ್ಞಾನದ ಪ್ರಯೋಗಶಾಲೆಯಲ್ಲಿ ಸಾಕ್ಷಾತ್ಕರಿಸಿಕೊಂಡು ಸಾರಿದ ಸತ್ಯ ಇದು : 'ಜಗತ್ತಿನ ಎಲ್ಲ ಧರ್ಮಗಳ ತಿರುಳೂ ಒಂದೇ. ಯಾವ ಒಂದು ಧರ್ಮವೂ ಮತ್ತೊಂದಕ್ಕಿಂತ ಶ್ರೇಷ್ಠವೂ ಅಲ್ಲ, ಕನಿಷ್ಠವೂ ಅಲ್ಲ; ಎಲ್ಲ ಧರ್ಮಗಳೂ ಸತ್ಯವೇ. ಮತಗಳೆಲ್ಲ ಮೂಲತಃ ಪಥಗಳೇ.' ಶ್ರೀ ರಾಮಕೃಷ್ಣರ ಸಾಕ್ಷಾತ್ ಶಿಷ್ಯರಾದ ಶ್ರೀ ಸ್ವಾಮಿ ವಿವೇಕಾನಂದರು, ಈ ಮಹಾ ಸತ್ಯವನ್ನು ಸೆಪ್ಟಂಬರ್ ಹನ್ನೊಂದು, ೧೮೯೩ರಂದು ಅಮೆರಿಕಾದ ಚಿಕಾಗೋ ನಗರದ ಸರ್ವಧರ್ಮ ಸಮ್ಮೇಳನದಲ್ಲಿ ಜಗತ್ತಿನ ಕಿವಿಗೆ ಕೇಳುವಂತೆ ಉದ್ಘೋಷಿಸಿದ ಒಂದು ಶತಮಾನದ ತರುವಾಯ, ಅದೇ ಸೆಪ್ಟಂಬರ್ ಹನ್ನೊಂದನೆಯ ತಾರೀಖು ೨೦೦೧ರಂದು ಇಸ್ಲಾಂ ಧಾರ್ಮಿಕ ಮೂಲಭೂತವಾದಿ ಉಗ್ರರಿಂದ ಅಮೆರಿಕಾದ ನ್ಯೂಯಾರ್ಕ್ ನಗರದ ಬೃಹತ್ ವಾಣಿಜ್ಯ ಸಂಕೀರ್ಣದ ಅವಳಿ ಕಟ್ಟಡಗಳು ಧ್ವಂಸಗೊಂಡ ಸಂಗತಿ, ಜಗತ್ತಿನಾದ್ಯಂತ ಸುದ್ದಿ ಮಾಡಿ ತಲ್ಲಣದ ತರಂಗಗಳನ್ನು ಎಬ್ಬಿಸಿತೆಂಬುದು ಒಂದು ವಿಪರ್ಯಾಸದ ವಿಷಯವಾಗಿದೆ. ಆದರೆ ಇದಕ್ಕೂ ಮುನ್ನ ಅದೇ ಶ್ರೀ ರಾಮಕೃಷ್ಣರ-ಸ್ವಾಮಿ ವಿವೇಕಾನಂದರ ನಾಡಾದ ಭಾರತದಲ್ಲಿ ಕಳೆದ ಎರಡು-ಮೂರು ದಶಕಗಳ ಕಾಲಮಾನದಲ್ಲಿ ಕೋಮುಗಲಭೆಗಳಲ್ಲಿ ಸತ್ತವರ ಸಂಖ್ಯೆ, ಅಮೆರಿಕಾದ ಈ ಬೃಹದ್ ದುರ್ಘಟನೆಯಲ್ಲಿ ಸತ್ತವರ ಸಂಖ್ಯೆಗಿಂತ ಅನೇಕಪಟ್ಟು ಮಿಗಿಲಾಗಿದೆ ಎಂಬ ಸಂಗತಿ ಜಗತ್ತಿನಾದ್ಯಂತ ಅಂತಹ ದೊಡ್ಡ ಸುದ್ದಿಯಾಗದೆ ಹೋದರೂ – ನಿಜಕ್ಕೂ ಭಾರತದ ಧಾರ್ಮಿಕ ಸಾಮರಸ್ಯಕ್ಕೆ ಬಿದ್ದ ಬಹುದೊಡ್ಡ ಹೊಡೆತವಾಗಿದೆ. ಇಂಡಿಯಾದ ಚರಿತ್ರೆಯಲ್ಲಿ ಒಂದು ಧರ್ಮದವರಿಗೂ ಮತ್ತೊಂದು ಧರ್ಮದವರಿಗೂ ಸಂಘರ್ಷಗಳು ಉಂಟಾದ ಸಂದರ್ಭಗಳು ಸಾಕಷ್ಟಿದ್ದರೂ, ಅವು ಅನಂತರದ ಸಹಬಾಳ್ವೆಗೆ ಅಷ್ಟೇನೂ ಮಾರಕವಾಗಲಿಲ್ಲವೆಂದು ಹೇಳಬಹುದು. ಜತೆಗೆ ಯಾವ ಧರ್ಮದ ದೊರೆಗಳು ರಾಜ್ಯಭಾರ ಮಾಡಿದರೂ ಅವರು ಬಹುತೇಕ ತಮ್ಮ ರಾಜ್ಯದ ಎಲ್ಲ ಧರ್ಮಗಳವರ ಹಿತವನ್ನು

ತಕ್ಕಮಟ್ಟಿಗೆ ಕಾಯ್ದುಕೊಂಡು ಬರುವ ಕಡೆಗೆ ಗಮನವಿತ್ತರೆಂದು ಚಾರಿತ್ರಿಕ ದಾಖಲೆಗಳು ಸಾಬೀತುಪಡಿಸುತ್ತವೆ. ಇಂಡಿಯಾದ ರಾಜರು ತಾಳಿದ ಧಾರ್ಮಿಕ ನಿಲುವುಗಳನ್ನು ಸ್ಥೂಲವಾಗಿ ಮೂರು ಬಗೆ ಎಂದು ವಿಂಗಡಿಸಿ ನೋಡಬಹುದು: ಮೊದಲನೆ ವರ್ಗದವರು: ಸರ್ವಧರ್ಮ ಸಹಿಷ್ಣುಗಳು; ಅಶೋಕ-ಅಕ್ಬರ್ ಇಂಥವರು. ಎರಡನೆಯದು: ಸ್ವಧರ್ಮಸಂರಕ್ಷಕರು ಎಂದರೆ ಅನ್ಯಧರ್ಮಗಳ ಆಕ್ರಮಣಗಳಿಂದ ಹಿಂದೂಧರ್ಮವನ್ನು ಸಂರಕ್ಷಿಸಿದವರು. ಶಿವಾಜಿ ಮತ್ತು ವಿಜಯನಗರದ ರಾಜರು ಈ ಸಾಲಿಗೆ ಸೇರುತ್ತಾರೆ. ಮೂರನೆಯವರು ತಮ್ಮ ಧರ್ಮವೇ ಶ್ರೇಷ್ಠ ಎಂದು ಅದನ್ನು ಬಲವಂತವಾಗಿ ಅನ್ಯಧರ್ಮೀಯರ ಮೇಲೆ ಹೇರುವವರು. ಗಝ್ನಿ ಮಹಮ್ಮದ್, ಔರಂಗಜೇಬ್ ಇಂಥವರು. ಈ ಬಗೆಯ ಜನರು ಎಷ್ಟೋ ವೇಳೆ ಅನ್ಯಧರ್ಮೀಯರ ದೇವಾಲಯಾದಿಗಳನ್ನು ನಾಶಪಡಿಸಿದ ನಿದರ್ಶನಗಳೂ ಸಾಕಷ್ಟಿವೆ. ಈ ದಿನ ಒಂದು ನಿರ್ದಿಷ್ಟ ಕೋಮಿಗೆ ಸೇರಿದವರ ಬಗ್ಗೆ ದ್ವೇಷ-ಅಸಹನೆಗಳನ್ನು ಪ್ರಚೋದಿಸಲು, ದೇವಾಲಯ ನಾಶದ ದೃಷ್ಟಾಂತಗಳನ್ನು ಮುಂದಿಡುತ್ತಾ, ಈ ದೇಶದ ಎಲ್ಲ ದೇವಾಲಯಗಳ ನಾಶವೂ, ಉದ್ದೇಶಪೂರ್ವಕವಾದ ಮತೀಯ ದ್ವೇಷಗಳಿಂದಲೇ ಸಂಭವಿಸಿತೆಂದು ಚರಿತ್ರೆಯನ್ನು ವ್ಯಾಖ್ಯಾನಿಸುವವರು ಸಾಕಷ್ಟಿದ್ದಾರೆ. ನಾವು ಈ ಸಂಗತಿಗಳನ್ನು ತಕ್ಕ ಎಚ್ಚರ ಮತ್ತು ವಿವೇಚನೆಯಿಂದ ಪರಿಶೀಲಿಸಿ ಇವುಗಳ ಸತ್ಯಾಸತ್ಯತೆಗಳನ್ನು ಸರಿಯಾಗಿ ಮಂಡಿಸುವ ಅಗತ್ಯವಿದೆ. ಯಾಕೆಂದರೆ ಹಿಂದೆ ಈ ದೇಶದಲ್ಲಿ ಒಂದು ಧರ್ಮದವರ ದೇವಾಲಯಗಳನ್ನು ಇನ್ನೊಂದು ಧರ್ಮದವರು ನಾಶಪಡಿಸಿದ ನಿದರ್ಶನಗಳು ಸಾಕಷ್ಟಿದ್ದರೂ ಅವೆಲ್ಲವೂ ಧಾರ್ಮಿಕ ಅಸಹನೆಯ ಕಾರಣದಿಂದಲೆ ಸಂಭವಿಸಿದವುಗಳೆಂದು ತೀರ್ಮಾನಿಸುವುದು ಚರಿತ್ರೆಗೆ ಮಾಡುವ ಅಪಚಾರವಾಗುತ್ತದೆ. ವಾಸ್ತವದ ಸಂಗತಿಯೇನೆಂದರೆ ದೇವಾಲಯಗಳು ಹಿಂದಿನ ಕಾಲದ ಸಾಮಾಜಿಕ ಸಂದರ್ಭದಲ್ಲಿ ವಹಿಸುತ್ತಿದ್ದ ಪಾತ್ರ ಬಹುಮುಖಿಯಾಗಿದ್ದರೂ ಅವು ಸಂಪತ್ತಿನ ಸಂಚಯಸ್ಥಾನಗಳೂ ಆಗಿದ್ದುದರಿಂದ ದೇವಾಲಯಗಳ ಮೇಲೆ ನಡೆದ ದಾಳಿಗಳ ಹಿಂದೆ, ಹೀಗೆ ಸಂಪತ್ತನ್ನು ದೋಚುವ ಆರ್ಥಿಕ ಉದ್ದೇಶವೇ ಪ್ರಧಾನವಾಗಿತ್ತು. ಘಜನಿ ಮಹಮದನು ಗುಜರಾತಿನ ಸುಪ್ರಸಿದ್ಧ ದೇವಾಲಯವನ್ನು ಕೊಳ್ಳೆ ಹೊಡೆಯಲು ಮುಖ್ಯ ಆಕರ್ಷಣೆಯಾದದ್ದು ಅಲ್ಲಿ ಸಂಚಯನಗೊಂಡ ಸಂಪತ್ತೇ ಹೊರತು, ಆತನ ಧರ್ಮ ದ್ವೇಷವಲ್ಲ. ಮತ್ತು ಹೀಗೆ ಸಂಪತ್ತಿಗಾಗಿ ಬೇರೆ ರಾಜ್ಯಗಳ ದೇವಸ್ಥಾನಗಳ ಮೇಲೆ ದಾಳಿ ಮಾಡಿದವರು ಕೇವಲ ಮುಸ್ಲಿಂ ದೊರೆಗಳೇ ಅಲ್ಲ, ಹಿಂದೂ ರಾಜರುಗಳೂ ಮತ್ತೊಬ್ಬ ಹಿಂದೂ ರಾಜರುಗಳ ರಾಜ್ಯಗಳ ಮೇಲೆ ದಾಳಿ ನಡೆಯಿಸಿದಾಗ ಸಂಭವಿಸಿದ ಘಟನೆಗಳೂ ಹೌದು. ನಿದರ್ಶನಕ್ಕೆ ಹೇಳುವುದಾದರೆ ಕಾಶ್ಮೀರ ರಾಜಮನೆತನದ ಹರ್ಷ ಎಂಬಾತನು ದೇವಾಲಯಗಳನ್ನು ಹೀಗೆ ಸಂಪತ್ತಿಗಾಗಿ ಕೊಳ್ಳೆ ಹೊಡೆಯಲೆಂದೇ 'ದೇವಾಲಯೋತ್ಪಾಟನ ನಾಯಕ' ಎಂಬ ಮಂತ್ರಿಯನ್ನು ನೇಮಿಸಿದ್ದನಂತೆ! ಅಷ್ಟೇ ಅಲ್ಲ, ಗೆದ್ದ ರಾಜರು ಸೋತ ರಾಜರ ನಗರಗಳನ್ನು ಲೂಟಿ ಮಾಡುವುದು, ಅವರ ದೇವಾಲಯಗಳನ್ನು ನಾಶಪಡಿಸುವುದು, ತಮ್ಮ ವಿಜಯವನ್ನು ಸಾರುವ ಸಂಕೇತವೂ ಆಗಿತ್ತು. ಕರ್ನಾಟಕದ ಪವಿತ್ರ ಕ್ಷೇತ್ರವಾದ ಶೃಂಗೇರಿಯನ್ನು ಮರಾಠರು ಲೂಟಿ ಮಾಡಿದಾಗ, ಆ ಹಾನಿಯ ನಷ್ಟವನ್ನು ಸರಿಪಡಿಸಿ, ಶಾರದಾದೇವಿಯ ಪೂಜೆಗೆ ಅನುಕೂಲ ಮಾಡಿಕೊಟ್ಟವನು ಟಿಪ್ಪೂಸುಲ್ತಾನ್. ಕ್ರಿ. ಶ. ೧೬೭೦ರಲ್ಲಿ ಔರಂಗಜೇಬನು ಜಾಟರನ್ನು ಸೋಲಿಸಿ ಮಥುರಾದಲ್ಲಿದ್ದ ಅವರ ಕೇಶವ ದೇವಾಲಯವನ್ನು ನಾಶಪಡಿಸಿ ಅದರ ಪಕ್ಕದಲ್ಲಿ ಈದ್ಗಾವನ್ನು ಕಟ್ಟಿಸಿದ್ದು ಎಷ್ಟು ನಿಜವೋ, ಹಾಗೆಯೆ ಬೃಂದಾವನದ ಶ್ರೀಕೃಷ್ಣ ದೇವಾಲಯಕ್ಕೆ ಹದಿನಾರು ಕೋಟಿ ರೂಪಾಯಿ ಬೆಲೆ ಬಾಳುವ ದಾನವನ್ನು ಕೊಟ್ಟನೆಂಬುದು ಅಷ್ಟೇ ನಿಜ. ಹನ್ನೊಂದು ಹನ್ನೆರಡನೆ ಶತಮಾನಗಳಲ್ಲಿ ಅನೇಕ ಬಸದಿಗಳು ಶಿವ ದೇವಾಲಯಗಳಾಗಿ ಪರಿವರ್ತನೆಗೊಂಡಿವೆ. ವಿಜಯನಗರದ ರಾಜರ ಕಾಲದಲ್ಲಿ ವೈಷ್ಣವರಿಂದ ಜೈನರ ಮೇಲೆ ಹಲ್ಲೆ ನಡೆದು ಅನಂತರ ಸಂಧಾನ ನಡೆದು ಜೈನ ದೇವಾಲಯಗಳ ಉಸ್ತುವಾರಿಯನ್ನು ವೈಷ್ಣವರೇ ನೋಡಿಕೊಳ್ಳಲು ಒಪ್ಪಿದ ಅಪರೂಪದ ಪ್ರಸಂಗವು ದಾಖಲಾಗಿದೆ. ಆದರೆ ಈ ಎಲ್ಲ ಧಾರ್ಮಿಕ ಸಂಘರ್ಷಗಳನ್ನು ಈ ಹೊತ್ತಿನ ಕೋಮುಗಲಭೆಗಳ ಸಾಲಿಗೆ ಸೇರಿಸಲು ಬರುವುದಿಲ್ಲ; ಯಾಕೆಂದರೆ ಇವುಗಳು ಇಂದಿನಂತೆ, ಅಂದಿನ ಆಳರಸರ ಪಾಲಿಗೆ ರಾಜಶಾಸನದ ಸಮಸ್ಯೆಗಳಾಗಿರಲಿಲ್ಲ. ಎಷ್ಟೋ ರಾಜರು, ಒಂದು ಧರ್ಮದಿಂದ ಮತ್ತೊಂದು ಧರ್ಮಕ್ಕೆ ಹೋಗುವುದು ಮತ್ತು ಹೋಗಿದ್ದು ಅವರ ವೈಯಕ್ತಿಕ ಆಯ್ಕೆಯ ಸಂಗತಿಯಾಗಿತ್ತು.

ಆದರೆ ಯಾವಾಗ ಈ ದೇಶ ವಿಭಜನೆಗೊಂಡು ಎರಡಾಯಿತೋ, ಮತ್ತು ಈ ದೇಶದ ಅಲ್ಪಸಂಖ್ಯಾತರಾದ ಮುಸ್ಲಿಮರು ಮತ್ತು ಕ್ರೈಸ್ತರು ಒಂದು ಬಗೆಯ ಅರಕ್ಷಿತ ಹಾಗೂ ಆತಂಕದ ಸ್ಥಿತಿಗೆ ಒಳಗಾದರೋ ಮತ್ತು ಅವರ ರಾಷ್ಟ್ರೀಯತೆಯನ್ನೆ ಬಹುಸಂಖ್ಯಾತರು ಶಂಕಿಸತೊಡಗಿದರೋ, ಪ್ರಶ್ನಿಸತೊಡಗಿದರೋ, ಅಂದಿನಿಂದ ಈ ದೇಶದ ಕೋಮುವಾದ ರಾಜಕೀಯದ ವಿಷಯವಾಗಿ, ತೀರಾ ವಿಕೃತಗೊಂಡ ಸ್ವರೂಪವನ್ನು ಪಡೆದುಕೊಂಡಿತು. ತನ್ನ ಸಂವಿಧಾನದಲ್ಲಿ ಸೆಕ್ಯುಲರ್ ಅಥವಾ ಜಾತ್ಯಾತೀತತೆಯನ್ನು ಘೋಷಿಸಿಕೊಂಡ ಭಾರತದ ರಾಜಕಾರಣದ ಒಂದು ಪಂಗಡವು, ರಾಜಕೀಯ ಲಾಭದ ಕಾರಣಕ್ಕಾಗಿ 'ಹಿಂದೂ ರಾಷ್ಟ್ರೀಯವಾದ'ವನ್ನು ಎತ್ತಿಹಿಡಿಯುತ್ತ, ತನಗೆ ಅನುಕೂಲಕರವಾದ ರೀತಿಯಲ್ಲಿ ಈ ದೇಶದ ಚರಿತ್ರೆಯನ್ನು ವ್ಯಾಖ್ಯಾನಿಸುತ್ತ, ಕೋಮುವಾದವನ್ನು ಪ್ರಬಲವಾಗಿ ಪ್ರತಿಪಾದಿಸತೊಡಗಿದೆ. ಒಂದು ಧರ್ಮದವರನ್ನು ಇನ್ನೊಂದು ಧರ್ಮದವರ ವಿರುದ್ಧ ಎತ್ತಿಕಟ್ಟುವುದು, ಬಹುಸಂಖ್ಯಾತರ ಸಂಸ್ಕೃತಿಗೆ, ಈ ಅಲ್ಪಸಂಖ್ಯಾತರು ಹೊರಗಿನವರು ಎಂದು ವಾದಿಸುವುದು, ಚರಿತ್ರೆಯ ಉದ್ದಕ್ಕೂ ಹಿಂದೂಧರ್ಮದ ವಿರುದ್ಧವಾಗಿ ಅವರು ಮಾಡಿರುವರೆನ್ನಲಾದ ಅನ್ಯಾಯ-ಅಪಚಾರಗಳನ್ನು ಬಣ್ಣಕಟ್ಟಿ ಎತ್ತಿಹೇಳಿ ಅವರ ಬಗ್ಗೆ ದ್ವೇಷ-ತಿರಸ್ಕಾರಗಳನ್ನು ಹುಟ್ಟಿಸುವುದು ಈ ಕೋಮುವಾದದ ಲಕ್ಷಣವಾಗಿದೆ.

ಸರಿಯಾಗಿ ವಿಚಾರ ಮಾಡಿ ನೋಡಿದರೆ ನಿಜವಾದ ಹಿಂದೂಧರ್ಮವಾಗಲೀ ಭಾರತೀಯ ಸಂಸ್ಕೃತಿಯಾಗಲೀ ಕೋಮುವಾದವನ್ನೂ, ಧಾರ್ಮಿಕ ಮೂಲಭೂತ ವಾದವನ್ನೂ ಪ್ರತಿಪಾದಿಸುವ ಸ್ವರೂಪದ್ದಲ್ಲ. ಯಾಕೆಂದರೆ ಎಲ್ಲ ಬಗೆಯ ವೈವಿಧ್ಯತೆಗಳನ್ನು ಮಾನ್ಯ ಮಾಡುವುದು ಅದರ ಲಕ್ಷಣವಾಗಿದೆ. ಅನೇಕ ಪರಕೀಯ ಸಂಸ್ಕೃತಿಗಳನ್ನು ಬರಮಾಡಿಕೊಂಡರೂ, ಆ ಕಾರಣಕ್ಕೆ ತನ್ನತನವನ್ನು ಕಳೆದುಕೊಳ್ಳದೆ, ಅವುಗಳೆಲ್ಲದರ ಸಹಬಾಳ್ವೆಗೆ ಅವಕಾಶ ಮಾಡಿಕೊಡುವ ಉದಾರತೆ ಹಿಂದೂ ಧರ್ಮಕ್ಕೆ ಇದೆ. ಜತೆಗೆ ಭಾರತೀಯ ಸಂಸ್ಕೃತಿಗೆ, ಅನೇಕ ಪರಕೀಯ ಧರ್ಮ ಹಾಗೂ ಸಂಸ್ಕೃತಿಗಳು ಕೊಟ್ಟ ಕೊಡುಗೆಗಳನ್ನೂ ನಾವು ನಿರ್ಲಕ್ಷಿಸಲು ಬರುವುದಿಲ್ಲ. ಜಗತ್ತಿನ ಬಹುದೊಡ್ಡ ಧರ್ಮಗಳು ಇಲ್ಲಿಗೆ ಬಂದು ನೆಲಸಿವೆ. ಪ್ರಾಚೀನ ಹಿಂದೂಧರ್ಮದ ಜತೆಗೆ, ಕ್ರೈಸ್ತ, ಮಹಮದೀಯ, ಬೌದ್ಧ, ಜೈನ, ಪಾರಸಿಕ, ಸೂಫೀ – ಇತ್ಯಾದಿ ವಿವಿಧ ಧಾರ್ಮಿಕ ಪಂಥಗಳು ಇಲ್ಲಿ ನೆಲೆನಿಂತಿವೆ. ಮತ್ತು ಭಾರತದ ಬಹುಮುಖೀ ಸಂಸ್ಕೃತಿಯನ್ನು ಅವು ರೂಪಿಸಿವೆ. ಅವುಗಳದೇ ಆದ ವಾಸ್ತುಶಿಲ್ಪ, ಚಿತ್ರಕಲೆ, ಸಂಗೀತ, ಸಾಹಿತ್ಯಗಳನ್ನು ಕೊಡುಗೆಯಾಗಿ ನೀಡಿವೆ. ಮತ್ತು ವಿವಿಧ ತತ್ವ ಪ್ರಣಾಲಿಗಳನ್ನು ಈ ಮಣ್ಣಿನಲ್ಲಿ ಬಿತ್ತಿವೆ. ಆಸ್ತಿಕತೆಯಂತೆ ನಾಸ್ತಿಕ್ಯವೂ, ದೇವಾಲಯ ನಿರ್ಮಾಣದ ಉತ್ಸಾಹದಂತೆ, ದೇವಾಲಯ ನಿರಾಕರಣೆಯ ಧ್ವನಿಗಳೂ ಈ ದೇಶದ ಚರಿತ್ರೆಯ ಒಂದು ಭಾಗವಾಗಿವೆ. ಇದರ ಜತೆ ವಿವಿಧ ಪ್ರಾಂತೀಯ ಉಪಸಂಸ್ಕೃತಿಗಳು: ಅವುಗಳು ಈ ದೇಶದ ಪ್ರಧಾನಧಾರೆಗೆ ಮುಖಾಮುಖಿಯಾಗಿ, ತಮ್ಮ ಪ್ರತಿಕ್ರಿಯೆಗಳನ್ನು ಅಭಿವ್ಯಕ್ತಿಸಿದ ಕ್ರಮಗಳೂ ವಿವಿಧ ಪ್ರಾದೇಶಿಕ ಭಾಷಾ ಸಾಹಿತ್ಯಗಳಲ್ಲಿ ಮೈಪಡೆದುಕೊಂಡಿವೆ. ಈ ಎಲ್ಲವುಗಳ ಮೊತ್ತವೂ, ಬಹುಸಂಕೀರ್ಣವೂ ಆಗಿರುವ ಭಾರತೀಯ ಸಂಸ್ಕೃತಿಯ ಬಹುಮುಖಿತ್ವವನ್ನು ಅರ್ಥಮಾಡಿಕೊಳ್ಳದೆ, ಇಂಡಿಯಾದಲ್ಲಿರುವು ದೇನಿದ್ದರೂ ಮೂಲತಃ ಹಿಂದೂ ಸಂಸ್ಕೃತಿ ಎಂದೂ, ಅದೊಂದೆ ಸರ್ವಶ್ರೇಷ್ಠ ಎಂದೂ, ಉಳಿದವೆಲ್ಲ ಹೊರಗಿನವುಗಳೆಂದೂ ಪ್ರತಿಪಾದಿಸುವುದು ಅವೈಚಾರಿಕ ಮಾತ್ರವಲ್ಲ, ಅಪಾಯಕಾರಿಯಾದದ್ದು ಕೂಡ. ಆದಕಾರಣ ಭಾರತೀಯ ಸಂಸ್ಕೃತಿಯ ಈ ಬಹುಮುಖತ್ವವನ್ನು ನಿರಾಕರಿಸುತ್ತ, ಏಕಮುಖೀ ಸಂಸ್ಕೃತಿಯನ್ನು ಪ್ರತಿಪಾದಿಸುವ ನಿಲುವುಗಳನ್ನು ನಾವು ತೀವ್ರವಾಗಿ ವಿರೋಧಿಸುವುದು ಅಗತ್ಯವಾಗಿದೆ.

ಒಬ್ಬ ಬರೆಹಗಾರನಾಗಿ ನನಗೆ ಅನ್ನಿಸುವುದೇನೆಂದರೆ, ದೇವರಾಗಲೀ, ದೇವಾಲಯಗಳಾಗಲೀ, ಮತ-ಧರ್ಮಗಳಾಗಲೀ, ಈ ಹೊತ್ತಿನ ಮನುಷ್ಯನ ಮೊದಲ ಅಗತ್ಯಗಳಲ್ಲ. ಅಗತ್ಯವಾದುದೆಂದರೆ, ಈ ಮನುಷ್ಯನ ಮತ್ತು ಅವನನ್ನು ಒಳಗೊಂಡ ಸಮಾಜದ ಸ್ವಾಸ್ಥ್ಯವನ್ನು ಇನ್ನಷ್ಟು ಕೆಡದ ಹಾಗೆ ಉಳಿಸುವುದು ಹೇಗೆ – ಎನ್ನುವುದು. ಮನುಷ್ಯನ ಆಧ್ಯಾತ್ಮಿಕ ಆವಶ್ಯಕತೆಗಳಾಗಿದ್ದ ಹಾಗೂ ಅವರೆಲ್ಲರನ್ನು ಹಿಡಿದು ಕೂಡಿಸುತ್ತಿದ್ದ ಧರ್ಮ-ದೇವರು-ದೇವಾಲಯಗಳೇ, ಈ ಮನುಷ್ಯರನ್ನು ಒಡೆಯುವ ಸ್ಫೋಟಕ ಸಾಮಗ್ರಿಗಳಾಗಿ ಬಳಕೆಯಾಗುತ್ತಿರುವ ಈ ಹೊತ್ತಿನಲ್ಲಿ, ಇವುಗಳನ್ನು ನಿರಾಕರಿಸಿ ನಿಲ್ಲಬಲ್ಲಂಥ ಮತ್ತು ನಮ್ಮ ರಾಷ್ಟ್ರದ ಸಂವಿಧಾನದ ಮೌಲ್ಯಗಳನ್ನು ಎತ್ತಿ ಹಿಡಿಯಬಲ್ಲಂಥ ಮನಃಸ್ಥಿತಿಯೊಂದು ನಿರ್ಮಾಣವಾದೀತೇ – ಎಂದು ನಾನು ಕಾದಿದ್ದೇನೆ.

---

*(೧) ತಾರೀಖು ೩.೨.೨೦೦೩ ರಂದು ಬೆಂಗಳೂರು ವಿಶ್ವವಿದ್ಯಾಲಯದ ಸೆನೆಟ್ ಹಾಲ್‌ನಲ್ಲಿ ಸೇರಿದ ಅಖಿಲ ಭಾರತೀಯ ವಿದ್ಯಾರ್ಥಿ ಸಂಘಟನೆಯ (ಎಸ್.ಎಫ್.ಐ)ಲ್ಲಿ ಮುಖ್ಯ ಅತಿಥಿಯಾಗಿ ನಾನು ಮಾಡಿದ ಭಾಷಣದ ಲೇಖನ ರೂಪ.

(೨) ಈ ಉಪನ್ಯಾಸ ಲೇಖನದಲ್ಲಿ ಪ್ರಸ್ತಾಪಿಸಲಾಗಿರುವ ಕೆಲವು ಚಾರಿತ್ರಿಕ ಸಂಗತಿಗಳಿಗೆ ನಾನು ಶ್ರೀ ರಾಜಾರಾಮ ಹೆಗಡೆಯವರ 'ಲೌಕಿಕ-ಅಲೌಕಿಕ' (೨೦೦೧) ಎಂಬ ಕೃತಿಗೆ ಋಣಿಯಾಗಿದ್ದೇನೆ.

**ಡಾ|| ಜಿ. ಎಸ್. ಶಿವರುದ್ರಪ್ಪ**
''ಚೈತ್ರ'', ನಂ.೮೬೭, ೧೮ನೇ ಮುಖ್ಯರಸ್ತೆ
ಬನಶಂಕರಿ ೨ನೇ ಹಂತ, ಬೆಂಗಳೂರು-೫೬೦ ೦೭೦

# ದಾರ್ಶನಿಕ ಮಾನವತಾವಾದಿ ಅರ್ಥಶಾಸ್ತ್ರಜ್ಞ

# ಪಿ. ಆರ್. ಬ್ರಹ್ಮಾನಂದ

**ಡಾ||** ಪಿ. ಆರ್. ಬ್ರಹ್ಮಾನಂದರರನ್ನು ''ಹೊಸತು'' ಕಳೆದ ಸೆಪ್ಟೆಂಬರ್ ೯ರಂದು ಸಂದರ್ಶಿಸಿದಾಗ ಅವರು ಇಷ್ಟು ಬೇಗನೆ ನಮ್ಮೆಲ್ಲರನ್ನಗಲುತ್ತಾರೆಂಬ ಯಾವ ಸೂಚನೆಯೂ ಇರಲಿಲ್ಲ. ಅವರೊಡನೆಯ ಸಂವಾದದ ಲೇಖನವನ್ನು ನವೆಂಬರ್ ೨೦೦೨ರ ಸಂಚಿಕೆಯಲ್ಲಿ ಪ್ರಕಟಿಸಿದ ನಂತರ ಪುನಃ ಅವರನ್ನು ಸಂಧಿಸಿದ್ದೆವು. ಆಗಲೂ ಅವರು ಲವಲವಿಕೆಯಿಂದ, ಜೀವನೋತ್ಸಾಹ ದಿಂದ ನಮ್ಮೊಡನೆ ಸಂವೇದಿಸಿದ್ದರು. ಭಾರತದ ಹಣ ಕಾಸು ಚರಿತ್ರೆಯ ರಚನೆಯ ಕೆಲಸವನ್ನು ಇನ್ನೂ ಅವರು ಮುಗಿಸಬೇಕಿತ್ತು. ಹಾಗೂ ಭಾರತದ ಹತ್ತನೆಯ ಪಂಚ ವಾರ್ಷಿಕ ಯೋಜನೆಯ ಮೂರು ಸಂಪುಟಗಳೂ ಪ್ರಕಟ ವಾದ ಮೇಲೆ ಅದರ ತಾಂತ್ರಿಕ ಪಾಂಡಿತ್ಯವನ್ನು ಮೆಚ್ಚಿ ಕೊಂಡಿದ್ದರು. ಆ ಕುರಿತು ತಮ್ಮ ಅನಿಸಿಕೆಗಳ ಹಲವು ಲೇಖನಗಳನ್ನು ಬರೆಯಲು ಸಿದ್ಧರಾಗುತ್ತಿದ್ದಂತೆಯೇ ಹಠಾತ್ತನೆ ನಿಧನ ಹೊಂದಿದ್ದು ಒಂದು ದುರಂತ. ''ಹೊಸತು''ವಿನೊಡನೆ ನಡೆಸಿದ ಸಂವಾದವನ್ನು ಮತ್ತೊಮ್ಮೆ ಓದಿದರೆ ಅಂದು ಅವರು ತಾವು ಹೇಳಬೇಕೆಂಬುದನ್ನೆಲ್ಲಾ ಕಳಕಳಿಯಿಂದ ಆದಷ್ಟು ಬೇಗನೆ ಹೇಳಿಬಿಡಬೇಕೆಂಬ ಅವಸರದಲ್ಲಿದ್ದರೇನೋ ಎಂದು ಈಗ ಅನ್ನಿಸುತ್ತದೆ. ಆ ಸಂವಾದದಲ್ಲಿ ಪ್ರಕಟಿಸಲಾಗದೆ ಉಳಿದ ಮಾತುಗಳನ್ನು ಈಗ ದಾಖಲಿಸುವುದು ಪ್ರಸ್ತುತವೆನಿಸಿ ಈ ಲೇಖನವನ್ನು ಬರೆಯಲಾಗಿದೆ.

ಮೊದಲಿಗೆ, ಹತ್ತನೆಯ ಯೋಜನೆಯ ಬಗೆಗೆ ಒಂದು ಮಾತು ಹೇಳಿ ಮುಂದುವರಿಯುವುದು ಸೂಕ್ತವೆನಿಸುತ್ತದೆ. ಕರಡು ಯೋಜನೆ ಪ್ರಕಟ ವಾಗುತ್ತಿದ್ದಂತೆಯೇ ಎಲ್ಲರಂತೆ ಬ್ರಹ್ಮಾನಂದರೂ ಗಮನಿಸಿದ್ದು ವಾಸ್ತವ ಸಂಗತಿಗಳ ಆಧಾರದ ಮೇಲೆ ಯಾವ ಮಟ್ಟದ ಅಭಿವೃದ್ಧಿ ಸಾಧ್ಯವಾಗುತ್ತಿತ್ತೋ ಅದು ರಾಜಕೀಯ ಪ್ರಚಾರಕ್ಕೆ ಸಾಲದೆಂಬ ಗ್ರಹಿಕೆಯ ಮೇಲೆ ಆಳುವವರು ಸ್ವಂತ ಪಕ್ಷದ ಪ್ರಚಾರಕ್ಕೋ ಎಂಬಂತೆ ಅವಾಸ್ತವಿಕ ಹೆಚ್ಚು ಅಭಿವೃದ್ಧಿ ದರವನ್ನು ನಿರ್ಧರಿಸುವ ಕಸರತ್ತಿನ ಟೀಕೆ. ಆದರೆ, ತಮ್ಮ ಮುಂದೆ ಹತ್ತನೆಯ ಯೋಜನೆಯ ಮೂರೂ ಸಂಪುಟಗಳು ದೊರೆತ ಮೇಲೆ ಅವರು ಮೆಚ್ಚಿಕೊಂಡಿದ್ದು ಈ ಅಭಿವೃದ್ಧಿ ದರದ ವಿಷಯವಲ್ಲ. ಅದು ಉದಾರ ಅರ್ಥವಾದದಲ್ಲಿ ಹಿಂದುಳಿದ ವ್ಯವಸ್ಥೆಯಲ್ಲಿ ಆರ್ಥಿಕ ಯೋಜನೆಯನ್ನು ರಚಿಸುವಾಗ ಉಪಯೋಗಿಸಬೇಕಾದ ತಾಂತ್ರಿಕ ಉಪಕರಣಗಳು, ಅವುಗಳ ಬಳಕೆ, ವಿಧಾನವನ್ನು ಮೆಚ್ಚಿಕೊಂಡಿದ್ದು. 'ದಿ ಹಿಂದೂ ಬಿಸಿನೆಸ್ ಲೈನ್' ಪತ್ರಿಕೆಗೆ ಎಂಟು ವರ್ಷಕ್ಕೂ ಮಿಕ್ಕು ವಾರಕ್ಕೊಂದು ಲೇಖನ ಬರೆಯುತ್ತಾ ಬಂದಿದ್ದ ಈ ಧೀಮಂತರು ಮರಣದ ಕ್ಷಣಕ್ಕೆ ಸ್ವಲ್ಪವೇ ಮುಂಚೆ ಬರೆದು ಮುಗಿಸಿದ ಲೇಖನ ಆ ಪತ್ರಿಕೆಯ ಜನವರಿ ೨೫ರ ಸಂಚಿಕೆಯಲ್ಲಿದೆ. ಅವರು ಮೆಚ್ಚಿಕೊಂಡಿದ್ದು ಈ ಯೋಜನೆಯಲ್ಲಿರುವ ರಾಜ್ಯಗಳ ಯೋಜನೆ ಮತ್ತು ಆರ್ಥಿಕ ಅಸಮತೋಲನಕ್ಕೆ ಸಂಬಂಧಪಟ್ಟ ವಿಸ್ತಾರ ಗಮನ. ಅವರು ಆತಂಕಗೊಂಡಿದ್ದು ಸಾಮಾಜಿಕ-ಆರ್ಥಿಕ ಪ್ರಕ್ರಿಯೆಗಳನ್ನು, ಅದಕ್ಕೆ ಸಂಬಂಧಪಟ್ಟ ರಾಜಕೀಯ ಪ್ರಕ್ರಿಯೆಗಳ ಬೆಳವಣಿಗೆಯನ್ನೇ ಕೇಂದ್ರವಾಗಿಸಿ, ಆರ್ಥಿಕ ಪ್ರಕ್ರಿಯೆಗಳಿಗಿಂತ ಮೇಲುಗೈಯಾಗಿಸುವ ಆರ್ಥಿಕ ಯೋಜನೆಯ ಮೇಲೆ ಹೇರುವ ಜನಪ್ರಿಯ ರಾಜಕೀಯ



ಒತ್ತಡಗಳನ್ನು. ''ಎನ್‌ಡಿಎ ಮತ್ತು ಭಾಜಪ ರಾಜಕೀಯ ಉದ್ದೇಶಗಳನ್ನು, ಸಾಮಾಜಿಕ-ರಾಜಕೀಯ ಪ್ರಕ್ರಿಯೆಗಳನ್ನು ವಿಕೃತಗೊಳಿಸುವ ಮೂಲಕ ಸಾಧಿಸಿಕೊಳ್ಳುವ ಮಾರ್ಗವನ್ನು ಸಂಪೂರ್ಣವಾಗಿ ಕೈಬಿಡುವುದು ಉಚಿತ. ಅದರ ಬದಲು ಆರ್ಥಿಕವಾಗಿ ಸಮರ್ಥ ನಿರ್ದೇಶನ ನೀಡುವತ್ತ ತಮ್ಮ ಗಮನವನ್ನು ಕೇಂದ್ರೀಕರಿಸಲಿ. ಹೀಗೆ ಮಾಡುವರೆಂಬ ಆಶಯದ ಮೇಲೆ ಯೋಜನೆಯನ್ನು ರಚಿಸಿರಬೇಕು. ಆದರೆ ರಾಜಕೀಯ ಧುರೀಣತ್ವ ಈ ಅಗತ್ಯತೆಗೆ ಎಚ್ಚೆತ್ತಂತೆ ಕಂಡು ಬಂದಿಲ್ಲ'', ಎಂಬುದು ಯೋಜನೆ ಕುರಿತ ಅವರ ಟೀಕೆ.

ನಮ್ಮ ಸಂವಾದದ ಸಂದರ್ಭದಲ್ಲಿ ಬ್ರಹ್ಮಾನಂದರು ಪದೇ ಪದೇ ಜ್ಞಾಪಿಸಿಕೊಳ್ಳುತ್ತಿದ್ದ ಹೆಸರು, ಜಾನ್ ಬೋರ್ಡ್ಲೆ ರಾಲ್ಸ್‌ನದು. ಕೆಲವು ಕಾಲದಿಂದ ಅನಾರೋಗ್ಯದಿಂದ ನರಳುತ್ತಿದ್ದ ರಾಲ್ಸ್ ಇತ್ತೀಚೆಗೆ, ನವೆಂಬರ್ ೨೪ರಂದು, ತೀರಿಕೊಂಡರು. ಪಿಆರ್‌ಬಿ ತನ್ನ ಮೆಚ್ಚಿನ ಈ ಚಿಂತಕನನ್ನು ಕುರಿತು 'ದಿ ಹಿಂದೂ ಬಿಸ್‌ನೆಸ್ ಲೈನ್' ಪತ್ರಿಕೆಯ ದಿನಾಂಕ ನವೆಂಬರ್ ೩೦, ೦೨ರ ಸಂಚಿಕೆಯಲ್ಲಿ ಸುದೀರ್ಘ ಶ್ರದ್ಧಾಂಜಲಿ ಲೇಖನ ಬರೆದಿದ್ದಾರೆ. ಪ್ರಾಸಂಗಿಕವಾಗಿ ರಾಲ್ಸ್‌ರನ್ನು ಕುರಿತದ್ದಾದರೂ, ಪಿಆರ್‌ಬಿಯವರ ಸಾಮಾಜಿಕ-ಆರ್ಥಿಕ ನಂಬಿಕೆಗಳನ್ನು ತಮ್ಮ ಕೊನೆಗಾಲದಲ್ಲಿ ಸ್ಪಷ್ಟಪಡಿಸಿದಂತೆ ಈ ಲೇಖನ ಮೂಡಿಬಂದಿದೆ. ರಾಲ್ಸ್ (೧೯೨೧-೨೦೦೨) ಕಳೆದ ನಾಲ್ಕು ದಶಕಗಳ ಅವಧಿಯಲ್ಲಿ ಬಹಳ ಪ್ರಭಾವೀ ತತ್ವಜ್ಞಾನಿ ಎನಿಸಿಕೊಂಡಿದ್ದಾರೆ. ಅವರ ತತ್ವಗಳು ಬಂಡವಾಳ ಶಾಹಿಗೂ, ಸಮಾಜವಾದಕ್ಕೂ ಪರ್ಯಾಯವಾಗಿ ಒಡ ಮೂಡುತ್ತವೆ. ಇದು, ಗಾಂಧೀಜಿಯವರು ಬಂಡವಾಳ ವನ್ನು, ಸಂಪತ್ತನ್ನು ಸಮಾಜದ ಪರವಾಗಿ ವಿಶ್ವಸ್ಥನಂತೆ ನೋಡಿಕೊಳ್ಳಬೇಕೆಂಬ ಧಾಟಿಯದೇ ಆದರೂ ರಾಲ್ಸ್ ತಮ್ಮ ವಿಚಾರಧಾರೆಗೆ ಸೈದ್ಧಾಂತಿಕ ತಳಹದಿಯನ್ನು ಸೃಷ್ಟಿಸಿದ್ದಾರೆ. ಆತನ 'ದಿ ಥಿಯರಿ ಆಫ್ ಜಸ್ಟೀಸ್' (೧೯೭೧) ಮತ್ತು 'ಪೊಲಿಟಿಕಲ್ ಲಿಬರಲಿಸಂ' ಎಂಬ ಎರಡು ಗ್ರಂಥಗಳು ಈ ಸಿದ್ಧಾಂತಕ್ಕೆ ಆಕರ ಗ್ರಂಥಗಳು. ಈ ಲೇಖನದಲ್ಲಿ ರಾಲ್ಸ್‌ನ ಸಿದ್ಧಾಂತವನ್ನು ಚರ್ಚಿಸುವ ಅವಶ್ಯಕತೆಯಿಲ್ಲ. ಆ ಬಗ್ಗೆ ಪಿಆರ್‌ಬಿಯವರ ಲೇಖನದಲ್ಲಿ ಸಾಕಷ್ಟು ವಿವರಗಳಿವೆ. ನಮ್ಮೊಡನೆಯ ಸಂವಾದದಲ್ಲಿನ ಅವರ ಮಾತುಗಳ ತಾತ್ಪರ್ಯ, ''ಸಾಮಾಜಿಕ ನ್ಯಾಯವರಿತು ಉತ್ಪಾದನೆಯನ್ನು ಉಪಭೋಕ್ತೃಗಳಿಗೆ ಹಂಚಬೇಕು. ಅಮರ್ತ್ಯ ಸೇನರು ಅವರವರ ಹಕ್ಕಿನನ್ವಯ ಅರ್ಹತೆಗೆ ತಕ್ಕಂತೆ ಹಂಚಬೇಕು ಎನ್ನುತ್ತಾರೆ. ಆದರೆ ಇದು ಹಿಂದುಳಿದ ಬಡವರ ವ್ಯವಸ್ಥೆಯಲ್ಲಿ ಸಾಧ್ಯವಿಲ್ಲ'' ಎನ್ನುತ್ತಾರೆ ಪಿಆರ್‌ಬಿ. ಒಪ್ಪಿಕೊಂಡ ನಿಯಮಾನುಸಾರ

---

**ಪಿ. ಆರ್. ಬ್ರಹ್ಮಾನಂದರೊಡನೆ 'ಹೊಸತು' ನಡೆಸಿದ ಸಂವಾದವನ್ನು ನವೆಂಬರ್ ಸಂಚಿಕೆಯಲ್ಲಿ ಪ್ರಕಟಿಸಿದ್ದೆವು. ಈ ಸಂವಾದದ ಉಳಿದ ಭಾಗವನ್ನು ಕಳೆದ ಜನವರಿ ೨೪ರಂದು ಹಠಾತ್ತನೆ ಗತಿಸಿದ ಶ್ರೀಯುತರ ನೆನಪಿಗಾಗಿ ಪ್ರಕಟಿಸುತ್ತಿದ್ದೇವೆ.**



**ವರದಿಯನ್ನು ಸಿದ್ಧಪಡಿಸಿದವರು**

**ಕೆ. ಎಸ್. ಪಾರ್ಥಸಾರಥಿ**

---

ಅಗತ್ಯವಿದ್ದಷ್ಟು ಕಾಲ, ಒಂದಿಷ್ಟು ಗುರುತಿಸಿ, ಅವರಿಗಾಗಿ ವಿಶೇಷವಾಗಿ ಹಂಚಬೇಕೆಂದು ತನ್ಮೂಲಕ ಕಾದಿರುಸುವಿಕೆಯ ಅಗತ್ಯವನ್ನು ಅವರು ಸಮರ್ಥಿಸುತ್ತಾರೆ. ಸಾಮಾಜಿಕ ನ್ಯಾಯ ಕನಿಷ್ಠ ವ್ಯಕ್ತಿಗೆ ಕನಿಷ್ಠ ಅನುಕೂಲಗಳನ್ನು ಒದಗಿಸುವುದರಲ್ಲಿ ಪ್ರಕಟವಾಗಬೇಕು, ಸಾಮಾಜಿಕ ನ್ಯಾಯವೆಂಬುದು ದಾನಧರ್ಮದ ಮಾತಲ್ಲ, ಅದು ವೈಚಾರಿಕವಾಗಿ ಸಮರ್ಥನೀಯ ಉದ್ದೇಶ. ಮುಂದುವರಿದು, ಸಾಮಾಜಿಕ ಮಟ್ಟದಲ್ಲಿ ಏಕಮುಖಿಯಾದ ಒಂದು ಗುಂಪಿನವರ ಆಧಿಪತ್ಯವನ್ನು ನಿರಾಕರಿಸುವ, ಬಹುಮುಖಿಯಾಗಿ ಎಲ್ಲವನ್ನು, ಎಲ್ಲರನ್ನು, ಒಳಗೊಂಡ ಸಮಾಜ ರಚನೆ ರಾಲ್ಸ್‌ನ ಹಾಗೂ ಪಿಆರ್‌ಬಿಯವರ ಧೋರಣೆ. ಥಾಮಸ್ ಹಾಬ್ಸ್, ಜಾನ್ ಲಾಕ್, ರೂಸೋ ಚಿಂತನೆಗಳನ್ನು ಗಾಂಧೀಜಿಯವರ ಅಂತ್ಯೋದಯದೊಡನೆ ಮೇಳೈಸುವ ಈ ಪ್ರಯತ್ನವನ್ನು ಮೆಚ್ಚಿಕೊಂಡ ಪಿಆರ್‌ಬಿ ತಮ್ಮ ಅರ್ಥಶಾಸ್ತ್ರದ ಪ್ರಜ್ಞಾವಲಯವನ್ನು ಮೀರಿ, ಮಾನವೀಯ

**Statement about ownership and other particulars about newspaper**

**FORM IV**

1. Place of publication : Bangalore
2. Periodicity of its publication : Monthly
3. Printer's Name : R. S. Rajaram
   Nationality : Indian
   Address : Navakarnataka Publications (P) Ltd. Embassy Centre Crescent Road, P. B. No. 5159 Bangalore - 560 001
4. Publisher's Name : R. S. Rajaram
   Nationality : Indian
   Address : Navakarnataka Publications (P) Ltd. Embassy Centre Crescent Road, P. B. No. 5159 Bangalore - 560 001
5. Editor's Name : G. Ramakrishna
   Nationality : Indian
   Address : Navakarnataka Publications (P) Ltd. Embassy Centre Crescent Road, P. B. No. 5159 Bangalore - 560 001
6. Name and address of individuals who own the newspaper and partners and shareholders holding more than one percent of the total capital : Navakarnataka Publications (P) Ltd., Embassy Centre Crescent Road P. B. No. 5159 Bangalore - 560 001 (Sole Proprietors)

I, R. S. Rajaram, hereby declare that the particulars given above are true to the best of my knowledge and belief.

Sd/-
R. S. Rajaram
Publisher

Date : 28-2-2003

ಕಳಕಳಿಯನ್ನು ಮೆರೆಯುವ ಮಹಾವ್ಯಕ್ತಿಯಾಗಿ ಕಂಡುಬರುತ್ತಾರೆ ಇಲ್ಲಿ.

ಅವರು, ಒಂದು ತೀರ್ಮಾನಕ್ಕೆ ಬರುವ ಮಾರ್ಗವನ್ನು ಇಂದಿನ ಸಮಸ್ಯೆಗಳಿಗೆ ಪರಿಹಾರವೆಂಬಂತೆ ಹೇಳುತ್ತಾರೆ. ಅಂತಿಮ ತೀರ್ಮಾನ ಏನೇ ಆಗಿರಲಿ, ಆ ತೀರ್ಮಾನಕ್ಕೆ ಬರುವ ಮಾರ್ಗವು ಮಾತ್ರ ವಾಸ್ತವಾಂಶದ ಆಧಾರದ ಮೇಲೆ ಆಗುತ್ತದೆ, ಆಗ ಸಂಬಂಧಪಟ್ಟವರು ಪರಸ್ಪರ ಒಪ್ಪಂದದ ಮೇಲೆ ಮೂರನೆಯವರ ಮಧ್ಯಸ್ಥಿಕೆಯನ್ನು ಕೋರಲು ಮುಂದುವರಿಯುವುದು ಸಾಧ್ಯ. ನಿಜ ಜೀವನದಲ್ಲಿ ಅಂಥ ಒಪ್ಪಂದ ಸಾಧ್ಯವಿಲ್ಲವಾದಾಗ, ರಾಜಕೀಯ ಪ್ರಕ್ರಿಯೆಯಲ್ಲಿ ಪರ್ಯಾಯ ಪರಿಹಾರಗಳ ಆಯ್ಕೆಗೆ ಅವಕಾಶ ಮಾಡಿಕೊಳ್ಳಬೇಕು. ಮಾರ್ಷಲನಿಂದ ಹಿಡಿದು ಪಿಆರ್‌ಬಿವರೆಗೆ, ರೆನೆಕ್ ಆ್ಯರೋನೂ (ಪಿಆರ್‌ಬಿಗೆ ಪ್ರಿಯನಾದ ಗೆಳೆಯ) ಸೇರಿದಂತೆ ಅನೇಕ ಅರ್ಥ ಶಾಸ್ತ್ರಜ್ಞರು, ತತ್ವಶಾಸ್ತ್ರಜ್ಞರ ಚರ್ಚೆ ಈ ನಿಲುವಿಗೆ ಆಧಾರ. ''ಕಾವೇರಿ ಸಮಸ್ಯೆ ನೋಡಿ, ಆ ತಾಯಿಯ ಹರಿವು ಪ್ರಕೃತಿಸಹಜವಾದ ಮಾರ್ಗ. ಈ ಪ್ರದೇಶದಲ್ಲಿ ಹಲವು ರಾಜ್ಯಗಳಿರುವುದು ಆಕಸ್ಮಿಕ, ಹಾಗೂ ಮಾನವನಿರ್ಮಿತ. ಪರಸ್ಪರ ಹಿತಾಸಕ್ತಿಗಳನ್ನು ಎಲ್ಲರೂ ಒಂದಿಷ್ಟು ತ್ಯಾಗ ಮಾಡದೆ ಹೇಗೆ ತಾನೇ ಪರಿಹಾರ ಸಾಧ್ಯ? ಇದರಲ್ಲಿ ರಾಜಕೀಯ ಮಾಡೋದು ಜನರಿಗೆ ಅನ್ಯಾಯವಲ್ಲವೇ ?'' ಎನ್ನುವ ಅವರ ನೋವಿನ ಮಾತುಗಳು ಇಂದು ನೀತಿ ನಿರೂಪಕರಿಗೆ ಮಾರ್ಗದರ್ಶನ ನೀಡೀತು.

ಆರ್ಥಿಕ ವಿಕಾಸದ ಹಾದಿಯಲ್ಲಿ ಬಡವ-ಬಲ್ಲಿದರ ನಡುವಿನ ಅಂತರ ಕಡಿಮೆಯಾಗುತ್ತಾ ಹೋಗದಿದ್ದರೆ ಅದು ವಿಕಾಸ ಹೇಗಾಗುತ್ತದೆ ಎಂದು ಪ್ರಶ್ನಿಸುವ ಪಿಆರ್‌ಬಿ ''ನಮ್ಮ ರಾಜ್ಯದಲ್ಲಿ ಇನ್ನೂ ಸಾಮಾಜಿಕ ಹಿಂದುಳಿಕೆ, ಯಾಜಮಾನ್ಯ- ಊಳಿಗಮಾನ್ಯ ಸಂಪ್ರದಾಯಗಳು ಮುಂದುವರಿಯುತ್ತಲೇ ಇವೆಯಲ್ಲ? ಮುಲಾಯಂ ಸಿಂಗ್ - ಮಾಯಾವತಿ ನೋಡಿ, ತಮ್ಮ ಜನತೆಯ ಅಜ್ಞಾನವನ್ನು ಹೋಗಲಾಡಿಸುವ ಕೆಲಸ ಮಾಡುವುದಿಲ್ಲ. ಬರೇ ರಾಜ್ಯಯಂತ್ರ ಕೈಗೆ ಸಿಕ್ಕಿಬಿಟ್ಟರೆ ಈ ಕೆಲಸ ಸಿದ್ಧಿಸುವುದಿಲ್ಲ. ಸಮಾಜದಲ್ಲಿ ಎಣಿಕೆಗೆ ಸಿಗದಷ್ಟು ಬದಲಾವಣೆಯ ಪ್ರೇರಕಶಕ್ತಿಗಳು ಅಡಗಿವೆ. ಅವುಗಳ ಬಿಡುಗಡೆಯಾಗಬೇಕು. ಗಾಂಧೀ ಮಾರ್ಗ ಈ ಪರಿವರ್ತನೆಯ ಪ್ರಕ್ರಿಯೆಯೇ ಆಗಿದ್ದು ಮಾರ್ಕ್ಸ್ ಬಯಸುವುದೂ ಅದನ್ನೇ. ಅಭಿವೃದ್ಧಿಯ ಪ್ರಯೋಜನ ಪಡೆದುಕೊಂಡ ನಮ್ಮ ಮಧ್ಯಮ ವರ್ಗದವರನ್ನು ನೋಡಿ... ಅವರಿಗೆ ಸಂವೇದನೆ, ಅನುಕಂಪವೇ ಇಲ್ಲವಲ್ಲ.. ಪರಿವರ್ತನೆ ಆಗೇ ಆಗುತ್ತೆ. ನಾವು ಪ್ರಯತ್ನ ಮುಂದುವರಿಸಲೇಬೇಕು. ಅದೇನ್ಮಾಡಬೇಕೋ, ಅದ್ಹೇಗೆ ಮಾಡ್ಬೇಕೋ ನನಗೆ ತಿಳಿಯದು.. ಅಂತೂ ಆಗ್ಬೇಕು. ಇದು ಬಲವಂತವಾಗಿ ಆಗೋದಲ್ಲ... ನಿಧಾನವಾಗಿ ಆಗುವಂಥದು... ಗಾಂಧಿ ಮುಖ್ಯ..'' ಎಂದು ಹೇಳುತ್ತ ಹೇಳುತ್ತಾ ಅಂತರ್ಮುಖಿಯಾಗಿಬಿಡುವ ಇವರ ಪರಿದರ್ಶನೀಯ. ಸಾಧಾರಣ ಜನರಲ್ಲಿನ ಅವರ ಈ ಕಟಿಬದ್ಧ ನಂಬಿಕೆ, ಆಶಾವಾದ ಬರುವ ಪೀಳಿಗೆಗೆ ಧೈರ್ಯ ಕೊಡುವಂಥದು.

''ಜೆ. ಕೆ. ಮೆಹ್ತಾ ನಮ್ಮ ಒಬ್ಬ ಹಿರಿಯ ಅರ್ಥಶಾಸ್ತ್ರಜ್ಞರು. ಅವರು ಒಂದುಕಡೆ, ಆಸೆ ರಹಿತ ಪರಿಸ್ಥಿತಿಯನ್ನು ನಿಧಾನವಾಗಿ, ಕ್ರಮಕ್ರಮವಾಗಿ ತಲಪಬೇಕು ಎನ್ನುತ್ತಾರೆ. ಅದೊಂದು ವೈಯಕ್ತಿಕ ಹೊಣೆಗಾರಿಕೆಯ ಅಂತಿಮ ತಾಟಸ್ಥ್ಯ ಸ್ಥಿತಿ. ಉತ್ಪಾದಕ ಸಾಧನ ಸಂಪತ್ತುಗಳನ್ನು ಒಂದು ಮಿತಿಗೆ ಮೀರಿ ಶೋಷಿಸಬಾರದು. ವೈಯಕ್ತಿಕ ನೆಲೆಯಲ್ಲಿ, ಎಷ್ಟು ಸಂಪಾದಿಸಿದರೂ ಸಾಲದು ಎಂಬುದು ಸಮಾಜ ಕಂಟಕ ಪ್ರವೃತ್ತಿ. ಯಾವುದೋ ಹಂತವನ್ನು ತಲುಪಿದಾಗ ಅದು ಸಾಧಾರಣ ನೆಮ್ಮದಿಯ ಜೀವನಕ್ಕೆ ಸಾಕು... ನೋಡಿ ನಾನ್ಹೇಳ್ತೀನಿ, ಆಸೆಗಳನ್ನು ನಿರಂತರ ಬೆಳೆಸಿಕೊಂಡೇ ಹೋಗುವ ಪಾಶ್ಚಾತ್ಯ ಮಾರ್ಗ ನಮಗೆ ಸಲ್ಲದು. ನಮ್ಮಲ್ಲಿರುವ ಸಂಪನ್ಮೂಲಗಳು ಕಡಿಮೆ. ಜನ ಜಾಸ್ತಿ. ನಮ್ಮದೇ ಮಾದರಿ ಮಾಡ್ಕೋ ಬೇಕು... ಗಾಂಧಿ ಅಲ್ಲೇ ಮುಖ್ಯ ಆಗೋದು...'' ಹೀಗೆ ಸಾಗುತ್ತದೆ ಅವರ ವಿಚಾರಧಾರೆ. ನಿಕೋಲಾಸ್ ಜಾರ್ಜೆಸ್ಕ್ಯು- ರೋಎಜೆನ್ ಎಂಬ ಷಂಪಿಟರ್‌ನ ಶಿಷ್ಯನ ಎಂಟ್ರೊಪಿ ನಿಯಮ ಇವರಿಗೆ ಇಷ್ಟ. ಪ್ರಾಕೃತಿಕ ಮೂಲ ವಸ್ತುಗಳು ಮತ್ತು ಭೌತಿಕ ವಸ್ತುಗಳ ಪರಸ್ಪರ ಪ್ರಕ್ರಿಯೆಯ ಸಂಬಂಧದ ವಿವರಣೆ – ಇದರಂತೆ ಪ್ರಕೃತಿಯ ಸಂಪತ್ತನ್ನು ನೂರಕ್ಕೆ ನೂರು ಬಳಸಿ ಅದರಿಂದ ಉತ್ಪಾದನೆ ತೆಗೆಯಲಾಗದು. ಅದನ್ನು ಮತ್ತೆ ಮತ್ತೆ ಮರುಬಳಕೆ ಮಾಡಿದಾಗಲೂ ನೂರಕ್ಕೆ ನೂರು ಫಲಿತಾಂಶ ಬರುವುದಿಲ್ಲ. ಕ್ರಮೇಣ ಅದರಲ್ಲಿ ಪ್ರಕೃತಿಯ ಮೂಲ ವಸ್ತುವಿನ ನಷ್ಟವಾಗುತ್ತಾ ಹೋಗುತ್ತದೆ. ಅದೇ ಕಾರಣ ಅರ್ಥಶಾಸ್ತ್ರಜ್ಞರು ಉತ್ಪಾದನೆಯ ಮಾರ್ಗದಲ್ಲಿ ಪರಿಸರವನ್ನೂ ಸಂರಕ್ಷಿಸಿಕೊಂಡು ಹೋಗುವ ಹಾದಿಯನ್ನು ಹಿಡಿಯಬೇಕಾಗಿದೆ. ಪರಿಸರದ ಸಂಪೂರ್ಣ ಶೋಷಣೆ ವಿನಾಶದ ಹಾದಿಯಾಗುತ್ತದೆ. ಭೌಗೋಳಿಕ ಶಾಖ ಹೆಚ್ಚುವುದು, ಹಸಿರು ಅನಿಲದ

ವರ್ತನೆ ಇವೆಲ್ಲಕ್ಕೂ ಈ ಮಿತಿಮೀರಿದ ಶೋಷಣೆಯೇ ಕಾರಣ, ಎಂಬುದು ಇವರ ಕಳವಳ.

'ಗೋಲ್ಡ್-ಮನಿ ರಿಫ್ಟ್' ಎಂಬ ತಮ್ಮ ಪುಸ್ತಕದಲ್ಲಿ ಅಮೆರಿಕ ತನ್ನ ವಾಣಿಜ್ಯ ವ್ಯವಹಾರದ ಕೊರತೆಯನ್ನು ನೀಗಿಕೊಳ್ಳಲು ಹಿಂದುಳಿದ ಅರ್ಥ ವ್ಯವಸ್ಥೆ ಮಾಡುವಂತೆ, ಆಂತರಿಕವಾಗಿ ತಾನು ಉತ್ಪಾದಿಸಿದ ಸರಕುಗಳನ್ನು ನಿರ್ಯಾತ ಮಾಡುವ ಬದಲು ಡಾಲರನ್ನು ನೀಡಿ ಕೈ ತೊಳೆದುಕೊಳ್ಳುತ್ತದೆ. ನೇರ ಡಾಲರ್ ಸಾಲದ ಹೊರೆಯೂ ಇಂಥದೇ. ಇವು ಸಾಲಗಾರ ದೇಶದ ಮೂಲ ಸರಕುಗಳನ್ನು ನಿರಂತರ ಹೊರಕ್ಕೆ ಸಾಗಹಾಕುವುದರಲ್ಲಿ ಪರ್ಯವಸಾನವಾಗುತ್ತವೆ. ಮೂಲ ಸಂಪತ್ತುಗಳ ಸಂವಹನೆಯ ದೃಷ್ಟಿಯಲ್ಲಿ, ಇದು ಸಾಲಗಾರ ಇನ್ನೂ ಹೆಚ್ಚು ಸಾಲಗಾರನಾಗುತ್ತ ಹೋಗುವುದನ್ನು ಸಿದ್ಧಾಂತವಾಗಿಸುತ್ತದೆ. ಇಂದು ನಾವು ಕಾಣುತ್ತಿರುವಂತೆ ಡಾಲರ್ - ರೂಪಾಯಿಯ ವಾಸ್ತವದ ವಿನಿಮಯ ಬೆಲೆ ಕಡಿಮೆಯಾಗುತ್ತಾ ಹೋಗುತ್ತದೆ. ನಾವು ರಫ್ತು ಮಾಡಿ ಡಾಲರ್ ಸಂಪಾದಿಸಿದರೂ ಅದು ಉಪಯೋಗವಾಗದೆ ಹೋಗುತ್ತದೆ. ಅದನ್ನು ಪುನಃ ಅಮೆರಿಕದಲ್ಲೇ ಅದರ ಕಡಿಮೆ ಬಡ್ಡಿಯ ಸರ್ಕಾರಿ ಪತ್ರಗಳಲ್ಲಿ ಹೂಡಬೇಕಾಗುತ್ತದೆ. ನಿಜವಾದ ಸರಕುಗಳ ರಫ್ತು-ಆಮದು ನಡೆಯದ ವ್ಯಾಪಾರ ದುರ್ಬಲ ದೇಶಕ್ಕೆ ಮಾರಕವಾಗುತ್ತದೆ. ಹೀಗೆ ನಮ್ಮ ಇಂದಿನ ಪರಿಸ್ಥಿತಿಯ ಸರಳ ವ್ಯಾಖ್ಯಾನವನ್ನು ದಶಕಗಳ ಮುಂಚೆಯೇ ಮನಗಂಡಿದ್ದರು ಬ್ರಹ್ಮಾನಂದ. ಇವರ ಸರಳ ಗ್ರಹಿಕೆಯೆಂದರೆ, ನಮ್ಮ ಸರಕುಗಳು ಅಮೆರಿಕಕ್ಕೆ ಹೋಗುವ ಪ್ರಮಾಣದಲ್ಲಿ ಅವರಲ್ಲಿ ಉತ್ಪಾದಿತವಾದ ಸರಕುಗಳು ನಮ್ಮ ಕಡೆ ಹರಿಯುವುದಿಲ್ಲ. ಬಂದರೆ ಮಿಲಿಟರಿ ಸರಕು ಬರಬೇಕು, ಅಷ್ಟೆ. ಇದರಿಂದಾಗಿ ನಾವು ಸಂಪಾದಿಸುವ ಡಾಲರುಗಳು ಅಲ್ಲೇ ಉಳಿದು ನಮ್ಮ ಆರ್ಥಿಕತೆಗೆ ಪುಷ್ಟಿ ನೀಡುವುದಿಲ್ಲ. ಜಾಗತೀಕರಣದ ಪ್ರಕ್ರಿಯೆಯಲ್ಲಿ ಇದು ಇನ್ನೂ ತೀವ್ರವಾಗುವುದು ಅನಿವಾರ್ಯ. ಅಧಿಕಾರಾರೂಢ ಅರ್ಥಶಾಸ್ತ್ರಜ್ಞರು ಈ ವಾಸ್ತವವನ್ನು ಮರೆಮಾಚುತ್ತಿಲ್ಲವೇ ?



ನವಕರ್ನಾಟಕ ಪ್ರಕಾಶನ, ಭಾರತೀಯ ವಿದ್ಯಾಭವನ ಮತ್ತು ಕರ್ನಾಟಕ ಇತಿಹಾಸ ಅಕಾಡೆಮಿ - ಇವು ಜನವರಿ ೨೬ ರಂದು ಶ್ರೀ ಕೋಚೆ ಅವರ 'ಬೇಡಿ ಕಳಚಿತು - ದೇಶ ಒಡೆಯಿತು' - ಕಾದಂಬರಿ ಕುರಿತ ವಿಚಾರಗೋಷ್ಠಿ ಏರ್ಪಡಿಸಿದ್ದವು. ಭಾರತೀಯ ವಿದ್ಯಾಭವನದಲ್ಲಿ ನಡೆದ ಈ ವಿಚಾರಗೋಷ್ಠಿಯಲ್ಲಿ ಡಾ|| ಕೆ. ಮರುಳಸಿದ್ದಪ್ಪ, ಪ್ರೊ|| ಬಿ. ಟಿ. ಪಾರ್ಥಸಾರಥಿ, ಶ್ರೀಮತಿ ಹೇಮಲತಾ ಮಹಿಷಿ, ಡಾ|| ಗುರುಲಿಂಗ ಕಾಪಸೆ, ಶ್ರೀ ಮತ್ತೂರು ಕೃಷ್ಣಮೂರ್ತಿ, ಡಾ|| ಸೂರ್ಯನಾಥ ಕಾಮತ್, ಶ್ರೀ ಎನ್. ಪಿ. ಶಂಕರನಾರಾಯಣರಾವ್, ಡಾ|| ಎಸ್. ಚಂದ್ರಶೇಖರ್, ಡಾ|| ಸಿದ್ದನಗೌಡ ಪಾಟೀಲ, ಶ್ರೀ ಕೋಚೆ, ಶ್ರೀ ಕೆ. ಎಸ್. ಪಾರ್ಥಸಾರಥಿ, ಡಾ|| ವಿಜಯಾ ಹಾಗೂ ಭಾರಿ ಸಂಖ್ಯೆಯ ಓದುಗರು ಭಾಗವಹಿಸಿದ್ದರು.

ಅವರ ಮಾತಿನಲ್ಲಿಯೇ ಹೇಳುವುದಾದರೆ ಉಳಿತಾಯ ಮಾಡದ ಸಮಾಜ ಮುಂದೆ ಬರಲಾರದು. ವಿಶ್ವದಾದ್ಯಂತ (ಭಾರತವೂ ಸೇರಿದಂತೆ) ಸಮಾಜದ ಉಳಿತಾಯವನ್ನು ಲಪಟಾಯಿಸುವ ಪ್ರವೃತ್ತಿ ಒಂದುಕಡೆ. ಉಳಿತಾಯವನ್ನು ಪ್ರೋತ್ಸಾಹಿಸದ, ತೀರ ಕಡಿಮೆ ಬಡ್ಡಿ ನೀಡುವ, ನೀಡದೆಯೇ ಇರುವ, ನಂಬಲರ್ಹವಾದ, ಉಳಿತಾಯ ಮಾರ್ಗವನ್ನು ನಿರ್ಮಿಸದೇ ಇರುವ ಪ್ರವೃತ್ತಿ ಹೆಚ್ಚಾಗುತ್ತಿರುವುದು ತೀರಾ ಅಪಾಯಕಾರಿ. ''ಭಾರತದಂಥ ವ್ಯವಸ್ಥೆಯಲ್ಲಿ ಷೇರು ಮಾರ್ಕೆಟ್ ವಿನಿವೇಶ ಉಳಿತಾಯ ಅಲ್ಲ. ಈ ಕ್ಷೇತ್ರಗಳಲ್ಲಿ ತೀರಾ ಅನ್ಯಾಯ ಆಗ್ತಿದೆ. ಆರ್ಥಿಕ ಕ್ಷೇತ್ರವನ್ನು ತತ್ವಾಧಾರದ ಮೇಲೆ ನಡೆಸದೆ ಕೇವಲ ರಾಜಕೀಯ ನೀತಿ ನಿರೂಪಣೆಯ ಮಾರ್ಗದಲ್ಲಿ ನಿಯಂತ್ರಿಸಿ ನಡೆಸುವ ವ್ಯವಸ್ಥೆಗಳಲ್ಲಿ ಆಳುವವರು ಅರ್ಥಶಾಸ್ತ್ರಜ್ಞರನ್ನು ಕೊಂಡುಕೊಂಡು ಬಿಡುತ್ತಾರೆ. ಯಾವ ಸಮಾಜ ಉಳಿತಾಯಕ್ಕೆ, ಸವಕಲು ನಿಧಿಗೆ, ಬೆಲೆ ಕಳೆದುಕೊಂಡದ್ದನ್ನು ಬಿಸಾಕುವ ನೀತಿಗೆ ಅವಕಾಶ ಮಾಡಿಕೊಡುವುದಿಲ್ಲವೋ ಅದು ಬರುವ ದಿನಗಳಲ್ಲಿ ಸಮಾಜಕ್ಕೆ ಅಗತ್ಯವಾದ ಬಂಡವಾಳವನ್ನು ಸಂಘಟಿಸದೆ, ಕೂಡುಹಾಕದೆ, ವರ್ತಮಾನದಲ್ಲೇ ಎಲ್ಲ ಸಂಪತ್ತನ್ನು ಉಪಭೋಗಿಸಿ, ವ್ಯವಸ್ಥೆಯ ಹಾಳಾಗಲು, ಏರು-ಪೇರಾಗಲು ಕಾರಣವಾಗುತ್ತದೆ''. ಇಂದಿನ ಉಳಿತಾಯವಿರೋಧೀ ಪರಿಸರದಲ್ಲಿ, ಪಿಆರ್‌ಬಿಯವರ ಈ ಭವಿಷ್ಯವಾಣಿಗೆ ಏನಾದರೂ ಬೆಲೆ ಸಿಕ್ಕೀತೇ ?

''ಸ್ಯಾಮ್ಯುಯಲ್‌ಸನ್ ''ಕೇಂಬ್ರಿಡ್ಜ್ ಅರ್ಥಶಾಸ್ತ್ರ'' ವೆಂಬ ಸಾಂಸ್ಥಿಕ ಪ್ರಭಾವದಿಂದ ಬಿಡಿಸಿಕೊಂಡ. ''ಅಮೆರಿಕದ ಅರ್ಥಶಾಸ್ತ್ರ''ವೆಂಬ ಒಂದು ವಿಶಿಷ್ಟ, ಸಾಂಸ್ಥಿಕ ಮಾರ್ಗವನ್ನೇ ಬೆಳೆಸಲು ಸಹಾಯ ಮಾಡಿದ. ಅವನೊಡನೆ ಷಂಪಿಟರ್, ಹ್ಯಾನ್‌ಸನ್, ಹೆಬೆರ್ಲರ್, ವೈನರ್ ಮುಂತಾದ ಮಹಾನ್ ಅರ್ಥಶಾಸ್ತ್ರಜ್ಞರು ಸಹಕರಿಸಿದರು. ದುರದೃಷ್ಟವೆಂದರೆ ಭಾರತದ ಅರ್ಥಶಾಸ್ತ್ರಜ್ಞರು ಮೊದಮೊದಲು ಎಲ್ಲದಕ್ಕೂ ಕೇಂಬ್ರಿಜ್ ಕಡೆ ನೋಡುತ್ತಿದ್ದವರು ಈಗ ಅಮೆರಿಕದತ್ತ ನೋಡಲು ಪ್ರಾರಂಭಿಸಿದ್ದಾರೆ. ಭಾರತದ ಬಗ್ಗೆ ತಿಳಿಯಲು ಇಲ್ಲಿಯ ಅರ್ಥಶಾಸ್ತ್ರಜ್ಞರನ್ನು ಅವಲಂಬಿಸುವ ಬದಲು ಅಮೆರಿಕೆಯಲ್ಲೇ ಇರುವ ಭಾರತೀಯ ತಜ್ಞರನ್ನು ಆ ದೇಶದ ಸರ್ಕಾರ ಅವಲಂಬಿಸುತ್ತದೆ. ಪರಿಣತ ''ಭಾರತೀಯ'' ಅರ್ಥಶಾಸ್ತ್ರಜ್ಞರು ಎಲ್ಲಿ ಎಂದು ಹುಡುಕಬೇಕಾಗಿದೆ ! ವಿಶ್ವ ಹಣಕಾಸು ಸಂಸ್ಥೆ ಮತ್ತು ವಿಶ್ವ ಬ್ಯಾಂಕು ಆಂತರಿಕವಾಗಿ ಈ ವಿಷಯ ತಾವೇ ಪ್ರತ್ಯೇಕ ಅಭ್ಯಾಸಮಾಡಿಕೊಳ್ಳುವ ಸಾಮರ್ಥ್ಯವುಳ್ಳವರಾಗಿದ್ದಾರೆ. ಆದರೆ ಭಾರತದಲ್ಲೇ ಉಳಿದು ಕೆಲಸ ಮಾಡುತ್ತಿರುವ ಅರ್ಥಶಾಸ್ತ್ರಜ್ಞರು ಭಾರತದ ಸಮಸ್ಯೆಯ ಬಗ್ಗೆ ಆಳವಾದ ತಿಳಿವಳಿಕೆ ಪಡೆಯಲು ಪ್ರಯತ್ನಿಸುವುದೂ ಇಲ್ಲ. ಹೀಗಾಗಿ ''ಭಾರತೀಯ ಅರ್ಥಶಾಸ್ತ್ರ''ವೆಂಬ ಒಂದು ಸಾಂಸ್ಥಿಕ ಶಿಸ್ತು ಬೆಳೆಯಲು ಸಾಧ್ಯವಾಗದೇ ಇರುವುದು ವಿಷಾದಕರ. ಇಲ್ಲಿಯ ಅಧಿಕಾರಾರೂಢ ಅರ್ಥತಜ್ಞರ ನಿರ್ಲಕ್ಷ್ಯವೂ ಇದಕ್ಕೆ ಕಾರಣವೆನ್ನಬಹುದು. ಇದೇ ಗುಂಗಿನಲ್ಲಿ ಮುಂದುವರಿದು ಭಾರತದಲ್ಲಿ ಮೂಲಭೂತ ಸಂಶೋಧನೆಗೆ ಒತ್ತಿಲ್ಲದಿರುವುದು ಭವಿಷ್ಯದಲ್ಲಿ ಆತಂಕಕ್ಕೆ ಎಡೆಮಾಡಿಕೊಡುತ್ತದೆ,'' ಎಂದು ಮರುಗುತ್ತಾರೆ. ''ನಮ್ಮದೇ ಆದ ಸೈದ್ಧಾಂತಿಕ ಮತ್ತು ಅರ್ಥನೀತಿಯ ವ್ಯಾಸಂಗದ ಶಿಸ್ತನ್ನು ಸೃಷ್ಟಿಸಿಕೊಂಡು ಹೊರಗಿನಿಂದ ಕೇವಲ ಪರಿಕಲ್ಪನೆಗಳನ್ನು ಅಗತ್ಯವಿದ್ದಷ್ಟು ಮಾತ್ರ ಎರವಲು ಪಡೆಯಬೇಕು. ಅಧಿಕಾರದಲ್ಲಿರುವ ಅರ್ಥಶಾಸ್ತ್ರ ಪರಿಣತರು ವಿಶ್ವವಿದ್ಯಾಲಯದ ಪಂಡಿತರೊಡನೆ ಸತತ ಸಂಪರ್ಕವಿಟ್ಟುಕೊಳ್ಳಬೇಕು. ಅವರಿಗೆ ಬೇಕಾದ ಪುಸ್ತಕ ಭಂಡಾರ, ಇತರ ಸಲಕರಣೆಗಳನ್ನು ಒದಗಿಸಬೇಕು. ಹೀಗಾದಾಗ ಒಂದು ಭಾರತೀಯ ಅರ್ಥಶಾಸ್ತ್ರ ಪದ್ಧತಿ ಬೆಳೆಯುವುದು ಸಾಧ್ಯ''. ಅದು ಅಗತ್ಯ. ಇಷ್ಟನ್ನಾದರೂ ಅವರ ಶಿಷ್ಯವರ್ಗ ಸಾಧಿಸಿ ಅವರ ನೆನಪಿಗೆ ತಮ್ಮ ಕೊಡುಗೆ ನೀಡಲು ಮುಂದಾಗುವರೆಂದು ಆಶಿಸೋಣ.

ಪಿಆರ್‌ಬಿಯವರೊಡನೆ ಕಳೆದ ಆ ಸುಂದರ ಮೂರು ಗಂಟೆಗಳು ! ಅವರ ಅಪಾರ ಪಾಂಡಿತ್ಯ, ಸರಳ ವ್ಯಾಖ್ಯೆ, ಸಾಮಾಜಿಕ ಕಳಕಳಿ, ತಾನಿನ್ನೂ ನೂರು ವರ್ಷವಿರುವಂತೆ ಭಾವಿಸಿಕೊಂಡ ಅವರ ಜೀವನೋತ್ಸಾಹ ಇವುಗಳ ಅನುಭವದಿಂದ ಒಂದು ಮಾತು ಹೇಳಬಹುದು. ಯಾವುದೇ ವಿಷಯವಿರಲಿ, ಅವರ ಪಾಂಡಿತ್ಯದಲ್ಲಿ ಪರಾಕಾಷ್ಠೆಯನ್ನು ತಲಪಿದಾಗ ಅದು ಶುಷ್ಕ ಜ್ಞಾನವಾಗುವುದಿಲ್ಲ. ಆ ಜ್ಞಾನದ ಸಂಬಂಧ ಇತರ ವಿಷಯಕ ಜ್ಞಾನದೊಡನೆ ಗಂಟುಬೀಳುತ್ತದೆ. ಈ ಎಲ್ಲಾ ಜ್ಞಾನಕ್ಕೂ ಆಕರವೂ, ಸ್ಫೂರ್ತಿಯೂ ಆದ ಜನಸಮುದಾಯದ ಹೃದಯವನ್ನು ಅದು ತಟ್ಟುತ್ತದೆ. ಆ ವ್ಯಕ್ತಿ ಕೇವಲ ಅರ್ಥಶಾಸ್ತ್ರಜ್ಞನೋ, ಸಿದ್ಧಾಂತಿಯೋ, ವಿಜ್ಞಾನಿಯೋ ಆಗಿ ಉಳಿಯುವುದಿಲ್ಲ. ಆತ ಒಬ್ಬ ದಾರ್ಶನಿಕ ಹಿರಿಯ ಮಾನವತಾವಾದಿಯಾಗಿ ಬೆಳೆಯುತ್ತಾನೆ. ನಮ್ಮನ್ನಗಲಿದ ಶ್ರೀ ಪಿ. ಆರ್. ಬ್ರಹ್ಮಾನಂದ ಇಂಥ ವಿಕಸಿತ ವ್ಯಕ್ತಿತ್ವದ ಒಂದು ಮಹಾನ್ ನಿದರ್ಶನ.

ಕೆ. ಎಸ್. ಪಾರ್ಥಸಾರಥಿ
ಸಿ-೧, ನಾಗಾರ್ಜುನ ಎನ್‌ಕ್ಲೇವ್, ೭೬/ಎ, ೧೪ನೇ ಕ್ರಾಸ್, ೧ನೇ ಹಂತ, ಜೆ.ಪಿ.ನಗರ, ಬೆಂಗಳೂರು-೭೮

# ಶಬರಿಮಲೆಯ ಮಕರ ಜ್ಯೋತಿಯ ಬೆಳಕಿನ ರಹಸ್ಯ

ಸಿದ್ಧರಾಜು

ಪ್ರತೀ ವರ್ಷ ನವೆಂಬರ್ ಮತ್ತು ಡಿಸೆಂಬರ್ ತಿಂಗಳುಗಳಲ್ಲಿ ದೇಶದ ನಾನಾ ಮೂಲೆಗಳಿಂದ ಯಾತ್ರಿಕರು ಲಕ್ಷೋಪಲಕ್ಷ ಸಂಖ್ಯೆಯಲ್ಲಿ ಕೇರಳದ ಪತಾನಮ್ ತಿಟ್ಟ ಜಿಲ್ಲೆಯ ಶಬರಿ ಮಲೆಗೆ ಧಾವಿಸಿಬರುತ್ತಾರೆ. ಅಲ್ಲಿ ನಡೆಯುವ ಎರಡು ಹಂತಗಳ ಪೂಜಾ ವಿಧಿಗಳಾದ ಮಂಡಲ ಪೂಜೆ (ನವೆಂಬರ್ ೧೪ರಿಂದ ಡಿಸೆಂಬರ್ ೨೬) ಹಾಗೂ ಮಕರ ಜ್ಯೋತಿ (ಜನವರಿ ೧೪) ಗಳಲ್ಲಿ ಭಕ್ತಿ ಭಾವುಕತೆಗಳಿಂದ ಪಾಲ್ಗೊಳ್ಳುತ್ತಾರೆ. ಎಷ್ಟು ಜನ ಈ ಉತ್ಸವಗಳಲ್ಲಿ ಪಾಲ್ಗೊಳ್ಳುತ್ತಾರೆಂದರೆ ಈ ಎರಡೇ ತಿಂಗಳುಗಳಲ್ಲಿ ಶಬರಿಮಲೆ ದೇವಸ್ಥಾನ ದಲ್ಲಿ ಸಂಗ್ರಹವಾಗುವ ಕಾಣಿಕೆಯ ಮೊತ್ತ ಸುಮಾರು ೩೦ ರಿಂದ ೪೦ ಕೋಟಿ ರೂಪಾಯಿಗಳು. ಈ ಯಾತ್ರೆಯನ್ನು ಕೈಗೊಳ್ಳುವುದಕ್ಕೆ ಮುಂಚೆ ೪೧ ದಿವಸಗಳ 'ಬ್ರಹ್ಮಚರ್ಯೆ'ಯ ವ್ರತವನ್ನು ಪಾಲಿಸಿ ಇರುಮುಡಿ ಕಟ್ಟಿಕೊಂಡು ಅಯ್ಯಪ್ಪನ ಸ್ಮರಣೆ ಮಾಡುತ್ತಾ ಶಬರಿಮಲೆಗೆ ಬರುವ ಭಕ್ತಾದಿಗಳು ತುಪ್ಪ ತುಂಬಿದ ತೆಂಗಿನಕಾಯಿಗಳನ್ನು ದೇವರಿಗೆ ಅರ್ಪಿಸುತ್ತಾರೆ. ಹತ್ತಿರದ ಪಂಪಾನದಿಯಲ್ಲಿ ಸ್ನಾನ ಮಾಡಿ ದೈವ ಸನ್ನಿಧಿ ತಲುಪಲು ಹದಿನೆಂಟು ಮೆಟ್ಟಿಲುಗಳನ್ನು ಹತ್ತುತ್ತಾ ಭಕ್ತಿಯ ಪರಾಕಾಷ್ಠೆಯನ್ನೇ ಅನುಭವಿಸುತ್ತಾರೆ. ಶಬರಿಮಲೆಯಲ್ಲಿ ಜರುಗುವ ಎರಡು ಹಂತದ ಪೂಜಾ ವಿಧಿಗಳಲ್ಲಿ ವಿವಾದಸದೃಶವಾದ ಮಕರ ಜ್ಯೋತಿಗೆ ಅತ್ಯಂತ ಮಹತ್ವದ ಸ್ಥಾನ.

**ಏನಿದು ಮಕರ ಜ್ಯೋತಿ ?**

ಪ್ರತೀ ವರ್ಷ ಜನವರಿ ೧೪ರ ಮಕರ ಸಂಕ್ರಾಂತಿಯಂದು ಸಂಜೆ ೬.೩೦ರಿಂದ ೬.೪೦ರ ನಡುವೆ ಶಬರಿಮಲೆ ಬೆಟ್ಟಕ್ಕೆ ಈಶಾನ್ಯ ದಿಕ್ಕಿನಲ್ಲಿ ಸುಮಾರು ೧೦ ಕಿ.ಮೀ. ದೂರದಲ್ಲಿರುವ ಪೊನ್ನಂಬಲಮೇಡು ಬೆಟ್ಟದ ಮೇಲೆ ಪ್ರಕಾಶಮಾನವಾದ 'ದಿವ್ಯ' ಜ್ಯೋತಿಯೊಂದು ಕಾಣಿಸಿಕೊಳ್ಳುತ್ತದೆ. ಕಳೆದ ೫೦ ಅಥವಾ ಅದಕ್ಕೂ ಹೆಚ್ಚು ವರ್ಷಗಳಿಂದ ಈ ಜ್ಯೋತಿ ಅದೇ ದಿನಾಂಕ ಮತ್ತು ವೇಳೆಯಂದು ಅದೇ ಪ್ರದೇಶದಲ್ಲಿ ಕಾಣಿಸಿಕೊಳ್ಳುತ್ತಾ ಇರುವುದು ವಿಶೇಷ. ಮಕರ ಸಂಕ್ರಾಂತಿಯಂದೇ ಕಾಣಿಸಿಕೊಳ್ಳುವುದ ರಿಂದ ಮಕರ ಜ್ಯೋತಿಯೆಂದು ಕರೆಸಿಕೊಳ್ಳುವ ಈ 'ದಿವ್ಯ' ಜ್ಯೋತಿಯ ಬಗ್ಗೆ ಐತಿಹ್ಯಗಳಿಗೇನೂ ಕೊರತೆಯಿಲ್ಲ. ಪೊನ್ನಂಬಲಮೇಡು ದೇವತೆಗಳ ಆವಾಸಸ್ಥಾನ ವೆಂದೂ ದಿವ್ಯ ಜ್ಯೋತಿಯು ಅಯ್ಯಪ್ಪ ಸ್ವಾಮಿಗೆ ದೇವತೆಗಳು ಸಲ್ಲಿಸುವ ಪೂಜೆಯೆಂದೂ ಒಂದು ನಂಬಿಕೆಯಾದರೆ, ಇನ್ನೊಂದು ನಂಬಿಕೆಯ ಪ್ರಕಾರ ಅಯ್ಯಪ್ಪ ಸ್ವಾಮಿ ತನ್ನ ಸಾಕು ತಂದೆಗೆ ಮಾತು ಕೊಟ್ಟಿರುವ ಪ್ರಕಾರ ಮಕರ ಸಂಕ್ರಾಂತಿಯಂದು ಜ್ಯೋತಿ ಸ್ವರೂಪನಾಗಿ ಪ್ರಕಟಗೊಂಡು ತನ್ನ ಇರುವಿಕೆಯನ್ನು ಪ್ರಚುರಪಡಿಸಿ ಭಕ್ತಾದಿಗಳಿಗೆ ದರ್ಶನ ನೀಡುತ್ತಾನೆ. ಮಕರ ಜ್ಯೋತಿಯನ್ನು ಕಂಡ ಭಕ್ತಾದಿಗಳು ಹರುಷದಿಂದ ಭಾವಪರವಶರಾಗುತ್ತಾರೆ. ಈ ಮಕರ ಜ್ಯೋತಿ ದೈವಶಕ್ತಿಯ ದ್ಯೋತಕವೇ? ಅಥವಾ ಇದೊಂದು ಧಾರ್ಮಿಕ ವಂಚನೆಯೇ ಎಂಬ ವಿಷಯ ಇದುವರೆವಿಗೂ ನಿಗೂಢವೇ ಆಗಿತ್ತು.

**ಶಬರಿಮಲೆಯ ಐತಿಹ್ಯ**

ಕಳೆದ ಶತಮಾನದ ಉತ್ತರಾರ್ಧದಲ್ಲಿ ದಿಢೀರನೆ ಪ್ರಸಿದ್ಧ ಯಾತ್ರಾಸ್ಥಳವಾಗಿ ಪ್ರಚಾರ ಪಡೆದ ಶಬರಿಮಲೆಯ ಅಧಿದೈವ ಸ್ವಾಮಿ ಅಯ್ಯಪ್ಪ. ಈ ದೈವದ ಜನ್ಮ (ಅವತಾರ)ದ ಬಗೆಗೆ ದೊಡ್ಡ ಕತೆಯೇ ಇದೆ. ಮಹಿಷಾಸುರನನ್ನು ಚಂಡಿಕಾ ದೇವಿ (ಚಾಮುಂಡೇಶ್ವರಿ) ಸಂಹರಿಸಿದ ನಂತರ ಆತನ ಚಿಕ್ಕಪ್ಪನ ಮಗಳು ಮಹಿಷಿ ಅಣ್ಣನ ಸಾವಿಗೆ ಕಾರಣರಾದ ದೇವತೆಗಳ ಮೇಲೆ ಸೇಡು ತೀರಿಸಿಕೊಳ್ಳಲು ಬ್ರಹ್ಮನನ್ನು ಕುರಿತು ಘೋರ ತಪಸ್ಸು ಮಾಡಿ ತನಗೆ ಸಾವಿಲ್ಲದಂತೆ ವರ ನೀಡಲು ಕೋರುತ್ತಾಳೆ. ಆದರೆ ಅದೊಂದನ್ನು ಬಿಟ್ಟು ಬೇರೆ ವರ ಕೇಳುವಂತೆ ಬ್ರಹ್ಮದೇವರು ಹೇಳಿದಾಗ ಬಹಳ ತರ್ಕ ಮಾಡಿದ ಮಹಿಷಿ ಇಬ್ಬರು ಗಂಡಸರ ಸಂಭೋಗದಿಂದ ಮಗು ಹುಟ್ಟುವುದು ಅಸಾಧ್ಯವಾದುದರಿಂದ ತನಗೆ ಮರಣ ವಾಗುವುದಾದರೆ ಹರಿಹರರಿಂದ ಜನಿಸಿದ ಮಗುವಿನಿಂದ ಮಾತ್ರವೇ ಸಾವು ಸಂಭವಿಸಲಿ ಎಂದು ಕೇಳುತ್ತಾಳೆ. ಈ ರೀತಿಯ ವರ ಪಡೆದ ನಂತರ ಮಹಿಷಿ ಲೋಕಕಂಟಕಳಾಗಿ ಮೆರೆಯತೊಡಗುತ್ತಾಳೆ. ಈ ಮಧ್ಯೆ ದೇವಾಸುರರು ಸಮುದ್ರಮಥನ ಮಾಡಿ ಪಡೆದ ಅಮೃತವನ್ನು ಬಲಾಢ್ಯರಾದ ದಾನವರು ಕಸಿದುಕೊಂಡಾಗ ಮಹಾವಿಷ್ಣುವು ಮೋಹಿನಿಯ ವೇಷಧಾರಣೆ ಮಾಡಿ ರಕ್ಕಸರಿಂದ ಅದನ್ನು ಹಿಂದಕ್ಕೆ ಪಡೆದು ಅದು ಪುನಃ ದೇವತೆಗಳಿಗೆ ದಕ್ಕುವಂತೆ ಮಾಡುತ್ತಾನೆ. ಆ ಸಂದರ್ಭದಲ್ಲಿ ವಿಷ್ಣು ವನ್ನು ನೋಡಲು ಬಂದ ಶಿವ ಮೋಹಿನಿ ಅವತಾರದ ವಿಷ್ಣುವಿನ ರೂಪಕ್ಕೆ ಮರುಳಾಗಿ (ದೇವರಿಗೂ ವಿಷ್ಣುವಿನ ಮೋಹಿನಿ ರೂಪದ ಬಗ್ಗೆ ಅರಿವಿರಲಿಲ್ಲ) ಸಮಾಗಮಿಸಿದ ಫಲ ಅಯ್ಯಪ್ಪ ಸ್ವಾಮಿಯ ಜನನ. ವೈಚಾರಿಕವಾಗಿ ಚಿಂತಿಸಿದ ಮಹಿಷಿ ಯಾವುದು ಅಸಾಧ್ಯವೆಂದು ನಂಬಿದ್ದಳೋ ಅದು ಧಾರ್ಮಿಕ ನಂಬಿಕೆಗಳಲ್ಲಿ ಸಾಧ್ಯವಾಗಿ ಸಲಿಂಗರತಿಯಿಂದ ದೈವವೊಂದರ ಸೃಷ್ಟಿಯಾಯ್ತು.

ಈ ಮಗು ಸಂತಾನಹೀನನಾದ ತನ್ನ ಭಕ್ತ ಈಗ್ಗೆ ೮೦೦ ವರ್ಷಗಳ ಹಿಂದೆ ಪಂಡಾಲಮ್ ದೇಶದ ಪರಿಪಾಲಕನಾಗಿದ್ದ ಪಾಂಡ್ಯ ರಾಜ ರಾಜಶೇಖರ ನಿಗೆ ಸೇರಬೇಕೆಂಬ ಇಚ್ಛೆ ಶಿವನದ್ದು. ವಿಜಯ ನಗರ ಕಾಲದವನಾದ ರಾಜಾ ರಾಜಶೇಖರ ಪಂಪಾ ನದಿಯ ದಂಡೆಯ ಅರಣ್ಯಗಳಲ್ಲಿ ಬೇಟೆಯಾಡುತ್ತಾ ಬಂದಾಗ ಎಲ್ಲಿಂದಲೋ ಕೇಳಿಬಂದ ಮಗುವಿನ ಅಳುವಿನ ಸದ್ದನ್ನು ಆಲಿಸಿ ಅರಸಿ ಹೋದಾಗ ಕಂಡದ್ದು ಅಪೂರ್ವ ತೇಜಸ್ಸಿನ ಮಗುವೊಂದನ್ನು. ಮಕ್ಕಳಿಲ್ಲದ ರಾಜನಿಗೆ ಅಪೂರ್ವ ನಿಧಿಯೇ ದೊರೆತಂತಾಗಿ ಮಗುವನ್ನು ಶಿವನ ಅನುಗ್ರಹವೆಂದು ಬಗೆದು ಅದನ್ನು ಎತ್ತಿಕೊಂಡು ತನ್ನ ರಾಜ್ಯಕ್ಕೆ ಮರಳುತ್ತಾನೆ. ಮಗುವಿನ ಕೊರಳಿನಲ್ಲಿ ಮಣಿಸರವಿದ್ದುದರಿಂದ ಅದಕ್ಕೆ ಮಣಿಕಂಠನೆಂದು ನಾಮಕರಣ ಮಾಡಿ ಒಲುಮೆಯಿಂದ ಸಾಕತೊಡಗುತ್ತಾನೆ. ಈ ಮಧ್ಯೆ ರಾಣಿಯು ರಾಜರಾಜನ್ ಎಂಬ ಮಗುವಿಗೆ ಜನ್ಮ ನೀಡುತ್ತಾಳೆ. ಮುಂದಿನದ್ದು ರಾಮಾಯಣವನ್ನು ಹೋಲುವ ಕತೆ. ಮಣಿಕಂಠ ವಯಸ್ಕನಾದಾಗ ರಾಜಾ ರಾಜಶೇಖರ ಆತನಿಗೆ ಪಟ್ಟ ಕಟ್ಟುವ ಪ್ರಯತ್ನ ಮಾಡುತ್ತಾನಾದರೂ ಅದನ್ನು ಇಷ್ಟಪಡದ ಮಂತ್ರಿ ನಾನಾ ತಂತ್ರಗಳಿಂದ ಮಣಿಕಂಠನನ್ನು ಕೊಲ್ಲಲು ವಿಫಲನಾಗಿ ಕೊನೆಯಲ್ಲಿ ರಾಣಿಗೆ ಆಕೆಯ ಹೊಟ್ಟೆಯಲ್ಲಿ ಹುಟ್ಟಿದ ಪುತ್ರನಿಗೆ ರಾಜ್ಯಾಧಿಕಾರ ತಪ್ಪಿಹೋಗುವ ಆತಂಕ ಹುಟ್ಟಿಸಿ ಮತ್ತೊಂದು ಷಡ್ಯಂತ್ರವನ್ನು ರೂಪಿಸುತ್ತಾನೆ. ಪರಿಣಾಮವಾಗಿ ರಾಣಿ ತಲೆನೋವಿನ ನಾಟಕವಾಡು ತ್ತಾಳೆ. ಮಂತ್ರಿಯಿಂದ ಪ್ರಚೋದಿತನಾದ ವೈದ್ಯ ರಾಣಿಯ ತಲೆ ನೋವು ನಿವಾರಣೆಗೆ ಹುಲಿಯ ಹಾಲಿನ ಅಗತ್ಯವಿದೆಯೆಂದು ಹೇಳಿದಾಗ ಈ ಕಾರ್ಯಸಾಧನೆಗಾಗಿ ಬಾಲಕ ಮಣಿಕಂಠ ಕಾಡಿಗೆ ತೆರಳುತ್ತಾನೆ. ಅಲ್ಲಿ ಮಹಿಷಿಯೊಡನೆ ನಡೆಯುವ ದ್ವಂದ್ವ ಯುದ್ಧದಲ್ಲಿ ಮಹಿಷಿಯನ್ನು ಕೊಂದು ತನ್ನ ಅವತಾರದ ಉದ್ದೇಶವನ್ನು ಪೂರೈಸುತ್ತಾನೆ.

ಮಹಿಷಿಯ ಸಂಹಾರದಿಂದ ಸಂತಸಗೊಂಡ ದೇವತೆಗಳೇ ಹುಲಿಯ ರೂಪ ತಾಳಿ ಮಣಿಕಂಠನೊಡನೆ ರಾಜಧಾನಿಗೆ ತೆರಳುತ್ತಾರೆ. ಹೀಗೆ ಹುಲಿಗಳ ಹಿಂಡಿನೊಡನೆಯೇ ಮರಳಿಬಂದ ಮಣಿಕಂಠನನ್ನು ಕಂಡು ಪಟ್ಟಣದ ನಾಗರಿಕರು ಹೌಹಾರಿ ಓಡತೊಡಗಿದಾಗ ಅಚ್ಚರಿಯಿಂದ ನಿಂತ ರಾಜನಿಗೆ ಅರಮನೆಯಲ್ಲಿ ಸನ್ಯಾಸಿಯೋರ್ವನು ಕಾಣಿಸಿಕೊಂಡು ಮಣಿಕಂಠನ ಜನ್ಮ ವೃತ್ತಾಂತವನ್ನು ಅರುಹುತ್ತಾನೆ. ಈ ವಿಷಯವನ್ನು ಕೇಳಿ ಆಶ್ಚರ್ಯಗೊಂಡ ರಾಜ ಸದ್ದೇ ಹೊರಡದೆ ದಿಙ್ಮೂಢನಾಗುತ್ತಾನೆ. ಹುಲಿಯ ಬೆನ್ನಿನಿಂದ ಇಳಿದ ಮಣಿಕಂಠನ ಪಾದಗಳಿಗೆರಗಿದ ರಾಜ ಅರಿಯದೇ ಆದ ಪ್ರಮಾದವನ್ನು ಮನ್ನಿಸುವಂತೆ ಕೇಳಿದಾಗ ನಡೆದುದೆಲ್ಲಾ ದೈವೇಚ್ಛೆಯಂತೆ ಸಂಭವಿಸಿರುವುದಾಗಿ ಹಾಗೂ ತನ್ನ ಅವತಾರದ ಉದ್ದೇಶ ಪೂರೈಸಿರುವುದರಿಂದ ತಾನೀಗ ದೇವಲೋಕಕ್ಕೆ ಹೋಗಬೇಕಾಗಿದೆಯೆಂದೂ ತಿಳಿಸಿ ರಾಜನ ಅಗಾಧವಾದ ಭಕ್ತಿಗೆ ಮೆಚ್ಚಿರುವುದರಿಂದ ತನಗೆ ಬೇಕಾದ ವರ ಕೇಳುವಂತೆ ಹೇಳುತ್ತಾನೆ. ಕೂಡಲೇ ರಾಜನು ಮಣಿಕಂಠನ ಸ್ಮರಣೆಗೆ ದೇವಾಲಯವೊಂದನ್ನು ಕಟ್ಟಿಸುವ ಅಭಿಲಾಷೆ ವ್ಯಕ್ತಪಡಿಸಿ ಸೂಕ್ತ ಸ್ಥಳವೊಂದನ್ನು ತಿಳಿಸುವಂತೆ ಕೋರುತ್ತಾನೆ. ಮಣಿಕಂಠನು ಬಾಣವೊಂದನ್ನು ಸೆಳೆದು ಬಿಟ್ಟಾಗ ಅದು ತ್ರೇತಾಯುಗದಲ್ಲಿ ಶಬರಿಯು ರಾಮನನ್ನು ಸತ್ಕರಿಸಿದ ಸ್ಥಳವಾದ ಶಬರಿಮಲೆಯಲ್ಲಿ ಬೀಳುತ್ತದೆ. ಆ ಪ್ರದೇಶದಲ್ಲಿ ದೇವಾಲಯ ನಿರ್ಮಿಸುವಂತೆ ಹಾಗೂ ದೈವ ಸನ್ನಿಧಿಗೆ ಹದಿನೆಂಟು ಮೆಟ್ಟಿಲು ಏರಿ ಬರಬೇಕೆಂದು ಆಜ್ಞಾಪಿಸಿದ ಮಣಿಕಂಠ ಶಬರಿಮಲೆ ಕಾಶಿಯಷ್ಟೇ ಪುಣ್ಯಸ್ಥಳವೆಂದೂ ಹಾಗೂ ಹತ್ತಿರದ ಪಂಪಾ ನದಿ ಗಂಗೆಯಷ್ಟು ಪವಿತ್ರವಾದುದೆಂದೂ ತಿಳಿಸುತ್ತಾನೆ. ಅಗಸ್ತ್ಯ ಮಹರ್ಷಿಗಳ ನೇತೃತ್ವದಲ್ಲಿ ದೇವಸ್ಥಾನ ನಿರ್ಮಿಸಿದ ನಂತರ ಮಣಿಕಂಠ (ಅಯ್ಯಪ್ಪ)ನಿಂದ ಆಜ್ಞಾಪಿತನಾದ ಪರಶುರಾಮ ದೈವದ ಮೂರ್ತಿಯನ್ನು ಕಡೆದು ಮಕರಸಂಕ್ರಾಂತಿಯಂದು ಪ್ರತಿಷ್ಠಾಪಿಸಿದುದಾಗಿ ಐತಿಹ್ಯವಿದೆ.

ಅಯ್ಯಪ್ಪನು ತಾನು ಅರಮನೆಯಲ್ಲಿದ್ದಾಗ ವಾವಾರ್ ಎಂಬ ಮುಸ್ಲಿಂ ಡಕಾಯಿತನನ್ನು ಸೋಲಿಸಿ ಅವನನ್ನು ತನ್ನ ಆಪ್ತನನ್ನಾಗಿಸಿಕೊಂಡಿದ್ದುದರಿಂದ ಶಬರಿಮಲೆ ಯಾತ್ರೆಗೆ ಬರುವ ಭಕ್ತಾದಿಗಳು ಮೊದಲು ಅಲ್ಲಿರುವ ವಾವಾರ್‌ನನ್ನು ಪೂಜಿಸಿ ನಂತರ ದೇವರ ದರ್ಶನ ಮಾಡಬೇಕೆಂಬ ಕಟ್ಟಳೆಯಿದೆ.

**ಬಯಲಾದ ಬೆಳಕಿನ ಬಣ್ಣ**

ಶಬರಿಮಲೆಯ ಮಕರ ಜ್ಯೋತಿಯ ನಿಗೂಢ ರಹಸ್ಯದ ಬಗ್ಗೆ ಜನವರಿ ೨೦೦೨ರ ಸೆಕ್ಯುಲರ್ ಹ್ಯೂಮನಿಸ್ಟ್‌ನಲ್ಲಿ ಪ್ರಕಟವಾಗಿರುವ ದಿವಂಗತ ಪ್ರೊ. ಕರಿಯಮ್ ರಾಮಚಂದ್ರರವರ ಲೇಖನ ಬೆಳಕು ಚೆಲ್ಲುತ್ತದೆ. ಸತ್ಯಶೋಧನಾ ತಂಡದ ಅನುಭವಗಳನ್ನು ಇಲ್ಲಿ ಅವರ ಮಾತುಗಳಲ್ಲೇ ದಾಖಲಿಸಿದೆ.

ಕೇರಳ ಯುಕ್ತಿವಾದಿ ಸಂಘದ ಸದಸ್ಯರುಗಳು ಮಕರ ಜ್ಯೋತಿಯ ಬಗ್ಗೆ ಗುಪ್ತ ತನಿಖೆ ಮಾಡಿ ಸತ್ಯಾಸತ್ಯತೆಯನ್ನು ಅರಿಯಲು ಮಕರ ಜ್ಯೋತಿ ಕಾಣಿಸಿಕೊಳ್ಳುವ ಸ್ಥಳಕ್ಕೇ ಭೇಟಿ ಕೊಡುವುದೆಂದು ತೀರ್ಮಾನಿಸಿದರು. ೧೯೮೦ರ ಜನವರಿ ೧೪ರಂದು ಉತ್ಸಾಹಿ ಯುವಕರ ಗುಂಪೊಂದು ಗುಪ್ತ ತನಿಖೆಗಾಗಿ ಪೊನ್ನಂಬಲಮೇಡುವಿಗೆ ಹೊರಟಿತು. ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಬಸ್ಸಿನಲ್ಲಿ ಕೊಚುಪಂಬ ತಲುಪಿದಾಗ ಮುಂದೆ ಕಂಡದ್ದು ದಟ್ಟಾರಣ್ಯ. ತನಿಖಾ ತಂಡದವರು ದಟ್ಟಾರಣ್ಯದಲ್ಲಿ ನಡೆಯುತ್ತಾ ಹೋದಾಗ ಜೀಪು ಚಲಿಸಿದ ಮಾರ್ಗವೊಂದು ಕಣ್ಣಿಗೆ ಬಿತ್ತು. ಈ ಮಾರ್ಗದಲ್ಲಿ ಸುಮಾರು ೫ ಕಿ.ಮೀ. ಕ್ರಮಿಸಿದಾಗ ಕಣ್ಣಿಗೆ ಬಿದ್ದದ್ದು ಮೂರು ಜೀಪುಗಳು. ಅವುಗಳಲ್ಲಿ ಒಂದು ಕೇರಳದ ಮುಖ್ಯ ದೇವಸ್ಥಾನಗಳ ಆಡಳಿತ ನಿಯಂತ್ರಣ ಹೊಂದಿರುವ ದೇವಸ್ವಂ ಮಂಡಳಿಯ ಕೆ.ಆರ್.ಟಿ. ೭೫೫೧ ಸಂಖ್ಯೆಯದ್ದು ಇನ್ನೊಂದು ಕೆ.ಎಲ್.ಎಫ್. ೨೬೭೨ ಸಂಖ್ಯೆಯ ಪೊಲೀಸ್ ಜೀಪು ಹಾಗೂ ಮತ್ತೊಂದು ಕೇರಳ ವಿದ್ಯುತ್ ಮಂಡಳಿಗೆ ಸೇರಿದ ವಾಹನ. ಅಲ್ಲಿ ಪೊಲೀಸರು ಹಾಗೂ ಇತರರು ಮಪ್ತಿಯಲ್ಲಿದ್ದುದು ಕಂಡುಬಂತು. ಆ ದಿನ ಸಂಜೆ ಸುಮಾರು ೫.೩೦ರ ಸಮಯದಲ್ಲಿ ಅವರುಗಳು ಒಂದು ದೊಡ್ಡ ಚೀಲ ಹಾಗೂ ಭಾರೀ ಗಾತ್ರದ ಅಲ್ಯೂಮಿನಿಯಂ ಪಾತ್ರೆಯನ್ನು ಹೊರಗೆ ತೆಗೆದರು. ಅಲ್ಯೂಮಿನಿಯಂ ಪಾತ್ರೆಯಲ್ಲಿ ಅರ್ಧದಷ್ಟು ಮರಳನ್ನು ತುಂಬಿಕೊಂಡು ಇತರೆ ಸಾಮಗ್ರಿಗಳೊಡನೆ ಅವರು ಅಗಲವಾದ ಹಾಗೂ ಎತ್ತರವಾದ ಬಂಡೆಯೊಂದನ್ನು ಏರಿನಿಂತರು. ಅಲ್ಲಿ ಅವರು ಚೀಲದಿಂದ ಸುಮಾರು ೧೦ ಕಿಲೋಗ್ರಾಂ ಕರ್ಪೂರವನ್ನು ತೆಗೆದು ಪಾತ್ರೆಯೊಳಗೆ ಹಾಕಿದರು. ಸಂಜೆ ೬.೩೪ ಗಂಟೆಗೆ ಸರಿಯಾಗಿ ಒಬ್ಬ ದಪ್ಪನೆಯ ಮನುಷ್ಯ (ಶ್ರೀ ಗೋಪಿನಾಥ್ ಎಂಬ ಕೇರಳ ವಿದ್ಯುತ್ ಮಂಡಳಿಗೆ ಸೇರಿದ ವಾಹನದ ಚಾಲಕ)ದೂರದ ಶಬರಿಮಲೆಯಿಂದ ಬೆಳಕಿನ ಸೂಚನೆಯೊಂದನ್ನು ಕಂಡ ತಕ್ಷಣ ಕರ್ಪೂರಕ್ಕೆ ಬೆಂಕಿ ಹಚ್ಚಿ ಪಾತ್ರೆಯನ್ನು ಮೂರು ಸಲ ಮೇಲೆತ್ತಿ ತೋರಿಸಿದ. ನಂತರ ಆತ ಪಾತ್ರೆಯನ್ನು ಕೆಳಗಿಳಿಸಿ ಬೆಂಕಿಯನ್ನು ಆರಿಸಿದ. ಆ ಸಂದರ್ಭದಲ್ಲಿ ಮಕರ ಜ್ಯೋತಿಯ ಬಗ್ಗೆ ಆಕಾಶವಾಣಿಯಿಂದ ವೀಕ್ಷಕ ವಿವರಣೆ ಬಿತ್ತರಗೊಳ್ಳುತ್ತಿತ್ತು. ಇದೇ ದೇಶಾದ್ಯಂತ ಪ್ರಸಿದ್ಧವಾದ ಮಕರ ಜ್ಯೋತಿ. ೨೦ನೆಯ ಶತಮಾನದ **ಬಹುದೊಡ್ಡ ಸಮೂಹವನ್ನು ಸಾಮೂಹಿಕವಾಗಿ ಮೂರ್ಖರನ್ನಾಗಿಸುವ ಮಹಾ ವಂಚನೆ !?**

ಪುನಃ ೧೯೮೧ರ ಜನವರಿ ೧೪ರಂದು ಸುಮಾರು ೧೫೦ ವಿಚಾರವಾದಿಗಳ ಗುಂಪು ಪೊನ್ನಂಬಲಮೇಡುವಿನತ್ತ ಹೊರಟಿತು. ಈ ಬಾರಿ ಅವರು ಕ್ಯಾಮರಾ ಸಹಿತ ಎಲ್ಲಾ ಸಿದ್ಧತೆಗಳನ್ನು ಮಾಡಿಕೊಂಡು ಹೋಗಿದ್ದರು. ಕಳೆದ ವರ್ಷದಂತೆ ಅದೇ ಮಕರ ಜ್ಯೋತಿಯ ಅದೇ ನಾಟಕ ಪುನರಾವರ್ತನೆಯಾಯಿತು. ತನಿಖಾ ತಂಡದವರು ವಂಚಕ ಘಟನೆಯ ಅನೇಕ ಫೋಟೋಗಳನ್ನು ತೆಗೆದರು. ಇಂತಹ ಸದೃಢ ಆಧಾರಗಳೊಂದಿಗೆ ಕೇರಳ ಯುಕ್ತಿವಾದಿ ಸಂಘವು ಮಾಧ್ಯಮಗಳು ಹಾಗೂ ಸಾರ್ವಜನಿಕರೆಡೆಗೆ ನಡೆಯಿತು. ೧೯೮೧ರಲ್ಲಿ ತಿರುವನಂತಪುರದಲ್ಲಿ ನಡೆದ ಅಖಿಲ ಭಾರತ ವಸ್ತು ಪ್ರದರ್ಶನದಲ್ಲಿ ಮಳಿಗೆಯೊಂದನ್ನು ಬಾಡಿಗೆಗೆ ತೆಗೆದುಕೊಂಡು ಮಳಿಗೆಯಲ್ಲಿ ಎಲ್ಲಾ ಫೋಟೋಗಳನ್ನು ಪ್ರದರ್ಶಿಸಿದ್ದಲ್ಲದೆ, ಈ ಬಗ್ಗೆ ಸಾಕಷ್ಟು ಸಂಖ್ಯೆಯಲ್ಲಿ ಕಿರುಹೊತ್ತಿಗೆಗಳನ್ನು ಸಾರ್ವಜನಿಕರಿಗೆ ಹಂಚಲಾಯಿತು. ೧೯೮೩ರಲ್ಲಿ ಮತ್ತೆ ಸುಮಾರು ೧೦೦ ಜನ ಸ್ವಯಂ ಸೇವಕರು ಪುನಃ ಪೊನ್ನಂಬಲಮೇಡು ಪ್ರದೇಶವನ್ನು ತಲುಪಿದರು. ಆದರೆ ಈ ಬಗ್ಗೆ ವ್ಯಾಪಕ ಪ್ರಚಾರ ನೀಡಿದ್ದರಿಂದಾಗಿ ಅದು ಯಾತ್ರೆಯ ಮೇಲೆ ಪ್ರತಿಕೂಲ ಪರಿಣಾಮವನ್ನು ಬೀರಿತು. ಅರಣ್ಯ ಇಲಾಖಾ ಅಧಿಕಾರಿಗಳನ್ನೊಳಗೊಂಡ ಶಸ್ತ್ರಸನ್ನದ್ಧರಾದ ಪೊಲೀಸ್ ಪಡೆ ಯಾವುದೇ ಪರಿಸ್ಥಿತಿಯನ್ನೆದುರಿಸಲು ಅಲ್ಲಿ ಸನ್ನದ್ಧವಾಗಿತ್ತು. ಎಲ್ಲಾ ಸ್ವಯಂಸೇವಕರನ್ನು ತಡೆಹಿಡಿದ ಅವರುಗಳು ಸ್ವಯಂಸೇವಕರ ಮೇಲೆ ಆಕ್ರಮಣ ಮಾಡಿ ಅಮಾನುಷವಾಗಿ ಚಚ್ಚಿದರು. ಹೀಗಾಗಿ ಸ್ವಯಂಸೇವಕರಲ್ಲನೇಕರು ಆಸ್ಪತ್ರೆಗೆ ದಾಖಲಾಗಬೇಕಾಯಿತು.

**ಮುಖ್ಯಮಂತ್ರಿ / ನ್ಯಾಯಾಲಯಗಳಿಗೆ ದೂರು**

೧೯೮೧ರಲ್ಲಿ ಕೇರಳದ ಆಗಿನ ಎಡಪಂಥೀಯ ಸರಕಾರದ ಮುಖ್ಯಮಂತ್ರಿಗಳಾಗಿದ್ದ ಶ್ರೀ ಇ. ಕೆ. ನಾಯನಾರ್ ಅವರಿಗೆ ಕೇರಳ ಯುಕ್ತಿವಾದಿ ಸಂಘವು ದೂರೊಂದನ್ನು ಸಲ್ಲಿಸಿ ಶಬರಿಮಲೆ ಯಾತ್ರೆಗೆ ಸಂಬಂಧಿಸಿದಂತೆ ಮಕರ ಜ್ಯೋತಿಯಂತಹ ಮೂರ್ಖ ಚಟುವಟಿಕೆಗಳನ್ನು ತಡೆಯಲು ಕ್ರಮ ಜರುಗಿಸುವಂತೆ ಕೋರಿತು. ಸಚಿವಾಲಯದ ಗೊಂದಲವಾದಿಗಳ ಕೈಯಲ್ಲಿ ಈ ದೂರು ಸ್ವಾಭಾವಿಕವಾಗಿಯೇ ಜೀವ [illegible] ಕೊಂಡಿತು. ೧೯೮೩ರಲ್ಲಿ ನಮ್ಮ ಸ್ವಯಂಸೇವಕರ ಮೇಲೆ ಅಕ್ರಮವಾಗಿ ಬರ್ಬರ ದಾಳಿ ನಡೆಸಿದ ಪೊಲೀಸ್ ಅಧಿಕಾರಿಗಳ ಮೇಲೆ ಕ್ರಮ ಜರುಗಿಸುವಂತೆ ಅಂದಿನ ಬಲಪಂಥೀಯ ಸರ್ಕಾರದ ಮುಖ್ಯ ಮಂತ್ರಿಗಳಾದ ಶ್ರೀ ಕೆ. ಕರುಣಾಕರನ್ ಅವರಿಗೆ ದೂರು ಸಲ್ಲಿಸಿದಾಗ್ಯೂ ಸರ್ಕಾರ ಯಾವುದೇ ಕ್ರಮ ಕೈಗೊಳ್ಳಲಿಲ್ಲ.

ಇದಾದನಂತರ ಕೇರಳ ಯುಕ್ತಿವಾದಿ ಸಂಘವು ಕೇರಳದ ಘನತೆವೆತ್ತ ಉಚ್ಚ ನ್ಯಾಯಾಲಯದಲ್ಲಿ ಅಪೀಲು ಸಲ್ಲಿಸಿ ಮಕರ ಜ್ಯೋತಿಯಂತಹ ಮೂರ್ಖ ಚಟುವಟಿಕೆಗಳನ್ನು ನಿಲ್ಲಿಸಲು ದೇವಸ್ವಂ ಮಂಡಳಿಗೆ ನಿರ್ದೇಶನ ನೀಡುವಂತೆ ಪ್ರಾರ್ಥಿಸಿತು. ಅಲ್ಲದೆ ಪವಿತ್ರ ಮಕರ ಜ್ಯೋತಿಯ ದರ್ಶನದಂದು ನಡೆಯುವ ನೂಕು ನುಗ್ಗಲಿನಲ್ಲಿ ಸುಮಾರು



ಜ್ಯೋತಿಯತ್ತ ಹಾಯುವಾಗ

೫೩ ಜನ ಭಕ್ತಾದಿಗಳು ಸಾವನ್ನಪ್ಪಿರುವ ಅಂಶವನ್ನೂ ಘನ ನ್ಯಾಯಾಲಯದ ಗಮನಕ್ಕೆ ತರಲಾಯಿತು. ಆದರೆ ಈ ವಿಷಯ ಧಾರ್ಮಿಕ ಸ್ವರೂಪದ್ದಾಗಿದ್ದು ಇದರಲ್ಲಿ ನ್ಯಾಯಾಲಯ ಮಧ್ಯ ಪ್ರವೇಶಿಸುವಂತಿಲ್ಲವೆಂದು ಹೇಳಿದ ಗೌರವಾನ್ವಿತ ನ್ಯಾಯಾಲಯ ಅರ್ಜಿ ವಜಾ ಮಾಡಿತು.

**ಮುಂದುವರಿದ ವಂಚನೆಯ ನಾಟಕ**

ಪ್ರಸ್ತುತ ಕೇರಳದ ಜನತೆಗೆ ಮಕರ ಜ್ಯೋತಿಯ ವಂಚನೆಯ ತಂತ್ರದ ಬಗ್ಗೆ ಅರಿವಾಗಿದ್ದು ಈಗ ಶಬರಿಮಲೆಗೆ ಬರುವ ಮಲೆಯಾಳಿ ಭಕ್ತಾದಿಗಳ ಸಂಖ್ಯೆ ಗಣನೀಯವಾಗಿ ಇಳಿಮುಖವಾಗಿದೆ. ಆದರೆ ಅನಕ್ಷರತೆ ಹಾಗೂ ಮೌಢ್ಯದಿಂದಾಗಿ ನೆರೆಯ ರಾಜ್ಯಗಳಾದ ತಮಿಳುನಾಡು, ಕರ್ನಾಟಕ ಹಾಗೂ ಆಂಧ್ರಪ್ರದೇಶಗಳಿಂದ ಈಗಲೂ ಜನ ಪ್ರವಾಹದೋಪಾದಿಯಲ್ಲಿ ಈ ಧಾರ್ಮಿಕ ವಂಚನೆಯ ಸಂತೆಯಲ್ಲಿ ನೆರೆಯುತ್ತಾರೆ. ಮೋಸವನ್ನು ಸತ್ಯದ ಸಾಕ್ಷಾತ್ಕಾರವೆಂಬಂತೆ ಭ್ರಮಿಸಿ ಪದೇ ಪದೇ [illegible] ಇದ್ದಾರೆ. ಈ ಯಾತ್ರೆಯಲ್ಲಿ ಗುಪ್ತವಾಗಿ ಗಾಂಜಾ ಕಳ್ಳ ಸಾಗಾಣಿಕೆ [illegible] ಕೂಡಾ ವದಂತಿಯಿದೆ. ಮರುಳು ಜನಕ್ಕೆ ಮತ್ತಿನ [illegible] ಪೂರಕವಲ್ಲವೇ? ವಿಚಾರವಾದಿ ಸಂಘಟನೆಗಳು ಈ ಧಾರ್ಮಿಕ [illegible] ಬಗ್ಗೆ ಸಾಮೂಹಿಕ ಅರಿವು ಮೂಡಿಸುವ ಕೆಲಸವನ್ನು ತುರ್ತಾಗಿ ಕೈಗೊಳ್ಳದಿದ್ದರೆ [illegible] ಮಕರ ಜ್ಯೋತಿಯ [illegible] ನಿರಾತಂಕವಾಗಿ ಮುಂದುವರಿಯುತ್ತಲೇ ಹೋಗುತ್ತದೆ.

[illegible]

[illegible]



ಶ್ರೀಮತಿ ಮಾಣಿಕ್ ಪಟವರ್ಧನ್

# ಮೃತ್ಯುಪತ್ರ

ಶ್ಯಾಮರಾಯರ ಮನಸ್ಸು ಇಂದೇಕೋ ಸರಿ ಇರಲಿಲ್ಲ. ಅಂತಹ ವಿಪರೀತ ಘಟನೆ ಏನು ಘಟಿಸಿರಲಿಲ್ಲ. ಆದರೆ, ಬೆಳಿಗ್ಗೆ ಮಗ ಸಮೀರನೊಡನೆ ಆದ ಸಂಭಾಷಣೆಯಿಂದ ಮನಸ್ಸು ಅಸ್ವಸ್ಥಗೊಂಡದ್ದು ನಿಜ. ಸುಮನ, ಅವರ ಹೆಂಡತಿ ಮಾತ್ರ ಏನು ಆಗಿಲ್ಲದ ಹಾಗೆ ಎಂದಿನಂತೆ ಸುಮ್ಮನಿದ್ದಳು. ಹಾಗೆ ನೋಡಿದರೆ ಶ್ಯಾಮರಾಯರು ಅವಳ ಚಿಂತೆಯಿಂದಲೆ ಅಸ್ವಸ್ಥರಾಗಿದ್ದರು. ಅವರ ಜೀವನದಲ್ಲಿ ಚಿಂತೆ ಮಾಡುವಂತಹುದೇನು ಇರಲಿಲ್ಲ. ಒಬ್ಬ ಮಗ, ಒಬ್ಬ ಮಗಳು. ಮಗಳ ಮದುವೆಯಾಗಿ, ಅವಳು ತನ್ನ ಸಂಸಾರದಲ್ಲಿ ಸುಖವಾಗಿದ್ದಳು. ಮಗ ವಿದ್ಯಾಭ್ಯಾಸದಲ್ಲಿ ಹೆಚ್ಚು ಮುಂದುವರಿಯದಿದ್ದರೂ, ಡಿಪ್ಲೋಮಾ ಮುಗಿಸಿ ಒಂದು ಖಾಸಗಿ ಕಂಪನಿಯೊಳಗೆ ನೌಕರಿ ಮಾಡುತ್ತಿದ್ದ. ಅವನಿಗೆ ಒಳ್ಳೆಯ ಹೆಂಡತಿಯೂ ಸಿಕ್ಕಿದ್ದಳು. ಶ್ಯಾಮರಾಯರು ಕೂಡ, ಪ್ರೈವೇಟ್ ಕಂಪನಿಯಿಂದ ನಿವೃತ್ತರಾಗಿ ಎರಡು ವರ್ಷಗಳಾಗಿದ್ದವು. ಅವರಿಗೆ ಪೆನ್‌ಶನ್ ಇರದಿದ್ದರೂ, ಫಂಡಿನ ಹಣ ಸಾಕಷ್ಟು ದೊರೆತಿತ್ತು. ಅದರ ಬಡ್ಡಿ ಹಾಗೂ ಸಮೀರನ ಸಂಬಳದಿಂದ, ಮನೆಯ ಖರ್ಚು ಸಾಗಿತ್ತು. ಇವತ್ತು ಒಮ್ಮೆಲೇ ಸಮೀರನ ತಲೆಯಲ್ಲಿ ಏನು ಸೇರಿತೋ ಎಂದು ಅವರಿಗೆ ಅನಿಸುತ್ತಿತ್ತು. ಬೆಳಿಗ್ಗೆ, ದಿನ-ನಿತ್ಯದಂತೆ ಶ್ಯಾಮರಾಯರು ತಿರುಗಾಡಿ ಬಂದರು. ಹೊರಗಿನ ಸೋಫಾದಲ್ಲಿ ಚಹಾ ಕುಡಿಯುತ್ತ ಕುಳಿತಿದ್ದರು. ಸಮೀರ ಕೆಲಸಕ್ಕೆ ಹೋಗುವ ತಯಾರಿ ನಡೆಸಿದ್ದ. ಹಾಗೆ ನೋಡಿದರೆ ಸಮೀರನು, ತಾಯಿಯಂತೆ ಮಿತಭಾಷಿ ಆದುದರಿಂದ ಹೆಚ್ಚು ಮಾತನಾಡುತ್ತಿರಲಿಲ್ಲ. ಆದರೆ, ಆ ಕ್ಷಣಕ್ಕೆ ಅವನು, ಮನಸ್ಸಿನಲ್ಲಿ ಶಬ್ದಗಳ ಹೊಂದಾಣಿಕೆ ಮಾಡುತ್ತಿದ್ದಾನೇನೋ ಎಂದು ಶ್ಯಾಮರಾಯರಿಗೆ ಅವನ ಮುಖಭಾವದಿಂದ ತೋರಿತು. ಅಷ್ಟರಲ್ಲಿ ಅವರಿಬ್ಬರ ಸಂಭಾಷಣೆ ಹೀಗೆ ಸಾಗಿತು. ಅವನೇ ಎದುರಿಗೆ ಬಂದು ಕುಳಿತ.

''ಅಪ್ಪಾ, ನಾನು ನಿಮ್ಮ ಜೊತೆ ಸ್ವಲ್ಪ ಮಾತಾಡಬೇಕು. ನಾನು ಈ ಕೆಲಸವನ್ನು ಬಿಟ್ಟು, ಸ್ವಂತ ಉದ್ಯೋಗ ಮಾಡಬೇಕು ಅಂತಾ ಆಲೋಚಿಸ್ತಾ ಇದೀನಿ.''

''ಕೈಲಿರೊ ಕೆಲಸ ಬಿಟ್ಟು ನೀನೆಂಥ ಉದ್ಯೋಗ ಮಾಡತಿ ?''

''ಸ್ವಂತದ ಶೆಡ್ ತೆಗೆದುಕೊಂಡು ಲೇಥ್ ಮಶಿನ್ ಹಾಕಿ, ಸ್ಪೇರ್ ಪಾರ್ಟ್‌ಗಳನ್ನು ತಯಾರಿಸಬೇಕು ಅಂತಾ ನನ್ನ ಆಲೋಚನೆ !''

''ಹಾಗಾದರೆ ಮಾಡು.''

''ಅದಕ್ಕೆ ಹಣ ಬೇಕು.''

ಹಣದ ಮಾತು ಬರುತ್ತಲೇ ಶ್ಯಾಮರಾಯರು ಸ್ವಲ್ಪ ವಿಚಾರಮಗ್ನರಾದರು. ರಿಟಾಯರಮೆಂಟ್ ನಂತರ ಬಂದ ಫಂಡನ್ನು, ಅವರು ಬಡ್ಡಿಗೆ ಹಾಕಿದ್ದರು. ಅದೇ ಅವರ ಹತ್ತಿರವಿದ್ದ ಆಸ್ತಿ. ಹಳ್ಳಿಯೊಳಗೆ, ಹೊಲದಲ್ಲಿ, ಮನೆಯಲ್ಲಿ ಅವರ ಪಾಲು ಇತ್ತು. ಆದರೆ ಅದು ಸಿಕ್ಕಾಗ ತಾನೆ !

''ಎಷ್ಟು ಬೇಕಾಗಬಹುದು ?'' ಎಂದು ಕೇಳಿದರು ರಾಯರು.

''ಹಾಗೆ ನನ್ನ ಪ್ರಾಜೆಕ್ಟ್ ಐದಾರು ಲಕ್ಷಗಳದ್ದಿದೆ. ಆದರೆ ನಾನು ಬ್ಯಾಂಕಿನಿಂದ ಸಾಲ ತೆಗೆದುಕೊಂಡು, ಎರಡು ಲಕ್ಷ ರೂಪಾಯಿ ಸ್ವಂತದ್ದು ಹಾಕಬೇಕು ಎಂದು ನನ್ನ ಆಲೋಚನೆ.''

ಸಮೀರನು ಉಚ್ಚರಿಸಿದ 'ಸ್ವಂತದ' ಎಂಬ ಶಬ್ದ ಶ್ಯಾಮರಾಯರಿಗೆ ಅಸಮಾಧಾನ ನೀಡಿತು. ''ನನ್ನ ಹತ್ತಿರ ಅಷ್ಟೊಂದು ಇದ್ದರೆ, ನಾನು ಯಾಕೆ ಕೊಡಲಿ ?''

ಸಮೀರನಿಗೆ ತನ್ನ ತಪ್ಪಿನ ಅರಿವಾಯಿತು. ಅವನು ಅದನ್ನು ಸುಧಾರಿಸಲು ''ಸ್ವಂತದ್ದು ಅಂದರೆ ನಿಮ್ಮ ಕಡೆಯಿಂದ ತೆಗೆದುಕೊಳ್ಳುವುದು,'' ಎಂದ.

''ಮತ್ತೆ ಮನೆ ಖರ್ಚು ಹೇಗೆ ಸಾಗಿಸೋದು ? ನಿನ್ನ ಮೂರು ಸಾವಿರ ರೂಪಾಯಿ ಸಂಬಳದಲ್ಲಿ ಮನೆ ಖರ್ಚು ಪೂರೈಸಲ್ಲ. ನನ್ನ ಫಂಡಿನ ಬಡ್ಡಿಯಲ್ಲಿ ಸಾಕಷ್ಟು ಖರ್ಚು ಪೂರೈಸುತ್ತೆ. ಅದಕ್ಕ ನಾನೇನು ಅದನ್ನು ಮುಟ್ಟಲ್ಲ.''

''ಆದರೆ ನಾನು ಸಂಪಾದಿಸಿ ನಿಮ್ಮ ಹಣಾನು ವಾಪಸ್ಸು ಮಾಡುತ್ತೇನೆ ಎಂಬ ಭರವಸೆ ನನಗಿದೆ''. ಸಮೀರ, ಶ್ಯಾಮರಾಯರ ಮನಸ್ಸು ಒಲಿಸಲು ಪ್ರಯತ್ನಿಸುತ್ತಿದ್ದ.

''ಆದರೆ ನನಗೆ ಅದರ ಬಗ್ಗೆ ಭರವಸೆ ಇಲ್ಲ. ನಿನ್ನ ಉದ್ಯೋಗ ಸರಿಯಾಗಿ ಸಾಗದಿದ್ದರೆ, ಅನ್ನೋದರ ಬಗ್ಗೆ ಆಲೋಚನೆ ಮಾಡಿದಿ ಏನು?''

ಈ ವಾಕ್ಯವನ್ನು ಕೇಳುತ್ತಲೇ ಸಮೀರನಿಗೆ ತಲೆ ಬಿಸಿ ಆಯಿತು.

''ನೀವು ಬಹಳ ಪೆಸಿಮಿಸ್ಟಿಕ್. ನೀವು ಹೇಗೆ ಇಡೀ ಜೀವಮಾನ, ನೌಕರಿ ಮಾಡತಾ ಕಳೆದರೋ ಹಾಗೇ ನಾನು ಈ ಚಿಕ್ಕ ಕೆಲಸ ಮಾಡ್ತಾ ಕಳೀಬೇಕೇನು ?'' ಎಂದ ಸಮೀರ ಕೋಪದಿಂದ.

''ಚಿಕ್ಕ ಕೆಲಸ ಮಾಡಲಿಕ್ಕೆ ಇಷ್ಟವಿಲ್ಲದಿದ್ದರೆ ಚೆನ್ನಾಗಿ ಓದಬೇಕಿತ್ತು. ಚೆನ್ನಾಗಿ ಕಲಿತಿದ್ದರೆ ಒಳ್ಳೇ ಮಾರ್ಕ್ ಸಿಗತಿತ್ತು. ಒಳ್ಳೆ ಕರಿಯರ್ ಆಗ್ತಿತ್ತು. ಈಗ ಬೇಜಾರು ಮಾಡಕೊಂಡು ಏನು ಪ್ರಯೋಜನ ?'' ಶ್ಯಾಮರಾಯರ ಈ ಮಾತು ಸಮೀರನಿಗೆ ನಾಟಿತು.

''ನಿಮಗೆ ದುಡ್ಡು ಕೊಡಲಿಕ್ಕೆ ಇಷ್ಟವಿಲ್ಲದಿದ್ದರೆ ಕೊಡಬೇಡಿ. ನಾನೇನು ಭಿಕ್ಷೆ ಬೇಡತಾ ಇಲ್ಲಾ. ಏನಾದರು ಹೊಸ ಉದ್ಯೋಗ ಆರಂಭಿಸಬೇಕು, ಮುಂದುವರಿಯಬೇಕು ಅಂತಾ ಅನಿಸ್ತು, ಅದಕ್ಕೆ ಕೇಳಿದೆ,'' ಎಂದು ಸಮೀರ ತಕ್ಷಣ ಮನೆಯಿಂದ ಹೊರಗೆ ನಡೆದ.

ಸಮೀರನೇನೋ ಹೊರಗೆ ಹೋದ. ಆದರೆ ಶ್ಯಾಮರಾಯರು ಯೋಚನೆಗೀಡಾದರು. ಚಿಂತಾಕ್ರಾಂತ

ರಾದರು. ತಾವು ಸ್ವಲ್ಪ ಹೆಚ್ಚಿಗೆ ಮಾತನಾಡಿಬಿಟ್ಟನೇನೋ ಎಂದು – ಅವರಿಗೆ ಅನಿಸಿತು. ಆದರೆ ಫಂಡ್ ಹಣವನ್ನು, ಅವರು ಕೊನೆಯವರೆಗೂ ಪೂರೈಸ ಬೇಕಿತ್ತು. ಅವರ ನಂತರ, ಹೆಂಡತಿ ಸುಮನಳಿಗೂ ವ್ಯವಸ್ಥೆ ಮಾಡಬೇಕಿತ್ತು. ಅವಳು ಯಾರ ಹತ್ತಿರವೂ, ದುಡ್ಡಿಗಾಗಿ ಕೈ ಚಾಚುವ ಪರಿಸ್ಥಿತಿ ಬರಬಾರದೆಂದು, ಶ್ಯಾಮರಾಯರ ಭಾವನೆಯಾಗಿತ್ತು. ಈ ಬಗ್ಗೆ ಸುಮನ ಳೊಟ್ಟಿಗೆ ಚರ್ಚೆ ಮಾಡಬೇಕು ಎಂದು ಅವರಿಗೆ ಅನಿಸಿತು. ಸುಮನ ಅಡುಗೆ ಮನೆಯಲ್ಲಿದ್ದಳು. ಆದರೆ, ಅವಳ ಜೊತೆ ಸೊಸೆ ರಜನಿಯೂ ಇದ್ದಳು. ಅವಳ ಮುಂದೆ ಈ ವಿಷಯದ ಪ್ರಸ್ತಾಪ ಬೇಡವೆಂದು ಶ್ಯಾಮರಾಯರಿಗೆ ಅನಿಸಿತು. ಅವರು ಸುಮ್ಮನೆ ಹೊರಗೆ ಕುಳಿತರು. ಆದರೆ ಆ ಯೋಚನೆ ಅವರನ್ನು ಬಿಡದಾಯಿತು.

ಏನು ಮಾಡಬೇಕೆಂದು ಅವರಿಗೆ ತೋಚಲಿಲ್ಲ. ಅಷ್ಟರಲ್ಲಿ, ಸಾರಿಕಾಳನ್ನು ಶಾಲೆಗೆ ಕಳುಹಿಸುವ ಸಮಯವಾಯಿತು. ಅವಳನ್ನು ಶಾಲೆಗೆ ಕರೆದುಕೊಂಡು ಹೋಗುವ ಕೆಲಸ ಶ್ಯಾಮರಾಯರದೇ. ಅವರು ಸಾರಿಕಾಳೊಡನೆ ಹೊರಟರು. ದಿನವೂ ಅವಳೊಡನೆ ಏನಾದರೂ ಮಾತನಾಡುತ್ತ ಹೋಗುವುದು ರೂಢಿ. ಆದರೆ ಇಂದು ಅವರ ಮನಸ್ಸು ಹಿಡಿತದಲ್ಲಿರಲಿಲ್ಲ. ಸಾರಿಕಾ ಏನೇನೋ ಪ್ರಶ್ನೆಗಳನ್ನು ಕೇಳುತ್ತಿದ್ದಳು. ಆದರೆ ಅವಳ ಮಾತಿನತ್ತ ಶ್ಯಾಮರಾಯರಿಗೆ ಎಳ್ಳಷ್ಟು ಗಮನವಿರಲಿಲ್ಲ. ಸಾರಿಕಾಳನ್ನು ಶಾಲೆಗೆ ಬಿಟ್ಟರು. ಪ್ರತಿದಿನ ಅವಳನ್ನು ಬಿಟ್ಟ ಕೂಡಲೆ ಅವರು ಮನೆಗೆ ಬರುತ್ತಿದ್ದರು. ನಂತರ ಮೂರು ಘಂಟೆಗಳಾದ ಮೇಲೆ, ಅವಳನ್ನು ಕರೆತರಲು ಹೋಗುತ್ತಿದ್ದರು. ಆದರೆ ಅವರು ಅಂದು ಮನೆಗೆ ಬರಲಿಲ್ಲ. ಹತ್ತಿರದಲ್ಲೇ ಇದ್ದ ಗಣಪತಿ ಗುಡಿಯ ಕಟ್ಟೆಯ ಮೇಲೆ ಹೋಗಿ ಕುಳಿತರು.

ಸಮೀರನಿಗೆ ಹೇಗೆ ತಿಳಿಸಿ ಹೇಳಬೇಕು ? ಇದೇ ದೊಡ್ಡ ಪ್ರಶ್ನೆ ಅವರನ್ನು ಕಾಡುತ್ತಿತ್ತು. ತಮ್ಮ ಹತ್ತಿರ ಇರೋ ದುಡ್ಡನ್ನ ಅವನಿಗೆ ಕೊಟ್ಟ ಮೇಲೆ, ಉದ್ಯೋಗ ಸರಿಯಾಗಿ ನಡೆಯದಿದ್ದರೆ ? ಸಂಸಾರವಂತು ಸರಿಯಾಗಿ ನಡೆದಿದೆ. ಆದರೆ ಹೆಚ್ಚು ಹಣವನ್ನು ಶೇಖರಿಸಲಿಕ್ಕಾಗಲಿಲ್ಲ. ಊರಿನ ಹೊಲದೊಳಗೆ, ಮನೆಯೊಳಗೆ ಪಾಲು ಸಿಗುತ್ತದೆಂಬ ಆಸೆಯಿಂದ ಸ್ವಂತ ಮನೆಯನ್ನು ಕಟ್ಟಿಸಲಿಲ್ಲ. ನಿವೃತ್ತಿ ತೆಗೆದುಕೊಂಡ ಮೇಲೆ ಹಳ್ಳಿಗೆ ಹೋಗಿರುವ ಆಶೆಯೇನೋ ಆಯಿತು. ಆದರೆ ಆಗ ಸ್ವಾಭಿಮಾನ ಅಡ್ಡ ಬಂತು. ಅಪ್ಪಾ ಬದುಕಿರುವವರೆಗೂ ಹಳ್ಳಿಗೆ ಹೋಗುವುದಿಲ್ಲವೆಂಬ ಪಣ ತೊಟ್ಟಿದ್ದರು. ಅಕಸ್ಮಾತ್ತಾಗಿ ತನಗೇನಾದರೂ ಆದರೆ ಸುಮನಳಿಗೆ ಯಾವುದಕ್ಕೂ ಕಡಿಮೆಯಾಗಬಾರದು, ಯಾರ ಬಳಿಯೂ ಹಣಕ್ಕಾಗಿ ಕೈ ಚಾಚುವ ಪ್ರಸಂಗ ಬರಬಾರದು ಎಂದೆಲ್ಲಾ ಆಲೋಚಿಸಿ, ನಾಳೆ ಸಮೀರನಿಗೆ, ಏನೇ ಆದರೂ ಹಣ ಕೊಡುವುದಿಲ್ಲ ವೆಂದು ಹೇಳಿಬಿಡುವದೆಂದು ತೀರ್ಮಾನಿಸಿದರು.

''ಏನು ಶ್ಯಾಮರಾಯರೆ ? ಇವತ್ತು ಇಲ್ಲಿ ಹೇಗೆ ?'' ರಾಯರಿಗೆ ದೇಶಪಾಂಡೆ ಅವರ ಪ್ರಶ್ನೆ.

''ಸುಮ್ಮನೆ ಕುಳಿತಿದ್ದೆ'' ಎಂದರು ರಾಯರು.

''ನೀವು ಎಂದೂ ದೇವಸ್ಥಾನದ ಮೆಟ್ಟಲೇರದ ವರು,'' ಎಂದು ದೇಶಪಾಂಡೆಯವರು ನಕ್ಕಾಗ,

''ಎಲ್ಲೊ ಒಂದು ಕಡೆ ಕುಳಿತುಕೊಳ್ಳೋದು ಅಂತಾ ಇಲ್ಲಿ ಕೂತ್ಕೊಂಡೆ''. ಎಂದರು ಶ್ಯಾಮರಾಯರು.

ದೇಶಪಾಂಡೆಯವರು ಶ್ಯಾಮರಾಯರ ಒಳ್ಳೆಯ ಸ್ನೇಹಿತರು. ಬೆಳಿಗ್ಗಿನಿಂದ, ಮನಸ್ಸಿಗೆ ಇರಿತವಾಗುತ್ತಿದ್ದ ವಿಚಾರವನ್ನು ಯಾರ ಮುಂದೆಯಾದರು ತೋಡಿಕೊಳ್ಳ ಬೇಕೆನಿಸುತ್ತಿತ್ತು. ಆಗಲೇ ದೇಶಪಾಂಡೆಯವರು ಭೇಟಿ ಯಾದ ಕಾರಣ, ಶ್ಯಾಮರಾಯರು ನಡೆದದ್ದೆಲ್ಲವನ್ನು ದೇಶಪಾಂಡೆಯವರಿಗೆ ಹೇಳಿದರು. ಅವರ ಅಭಿಪ್ರಾಯ ವನ್ನು ಕೇಳಿದರು.

ದೇಶಪಾಂಡೆಯವರು ಎಲ್ಲವನ್ನು ಆಲಿಸಿ, ''ಪ್ರತಿಯೊಬ್ಬ ಮನುಷ್ಯನ ಜೀವನದಲ್ಲಿ ಇಂತಹ ಸಮಯ ಬಂದೇ ಬರುತ್ತದೆ. ಅದಕ್ಕೆ ನೀವು ಒಂದು ಮೃತ್ಯುಪತ್ರ ಬರೆದಿಡಿ. ಇಲ್ಲವಾದರೆ ಆಮೇಲೆ ಬಹಳ ತೊಂದರೆ ಆಗತ್ತೆ. ನೀವು ಯಾವುದೇ ತೀರ್ಮಾನ ಮಾಡಿದರೂ ಅದನ್ನು ಮೃತ್ಯುಪತ್ರದಲ್ಲಿ ಬರೆದಿಡಿ'' ಎಂದು ಸಲಹೆ ಇತ್ತರು.

ಬಹಳ ಹೊತ್ತು ಮಾತನಾಡಿ ದೇಶಪಾಂಡೆ ಎದ್ದರು. ಶ್ಯಾಮರಾಯರು ಮತ್ತೆ ಆಲೋಚನೆಯಲ್ಲಿ ಮುಳುಗಿ ದರು. ಬಹಳ ಹೊತ್ತಿನ ನಂತರ ಅವರ ಗಮನ ಗಡಿಯಾರದತ್ತ ಹೋಯಿತು. ಸಾರಿಕಾಳನ್ನು ಶಾಲೆ ಯಿಂದ ಕರೆತರುವ ಸಮಯ ಮೀರಿಹೋಗಿತ್ತು. ಹಿಂದಿರುಗಿ ಬರುತ್ತಿದ್ದಾಗ ಶ್ಯಾಮರಾಯರು ಸಮೀರನಿಗೆ ಹಣವನ್ನು ಕೊಡಬಾರದೆಂಬ ತೀರ್ಮಾನ ತೆಗೆದು ಕೊಂಡರು. ಆದರೂ ಈ ಬಗ್ಗೆ, ಒಮ್ಮೆ ಹೆಂಡತಿ ಸುಮನಳೊಡನೆ ಮಾತನಾಡಬೇಕಿತ್ತು.

ಮಧ್ಯಾನ್ಹದ ಊಟವಾಯಿತು. ಸುಮನ ಕೈಯೊಳಗೆ ದಿನಪತ್ರಿಕೆ ಹಿಡಿದು ಕೋಣೆಗೆ ಬಂದಳು. ಶ್ಯಾಮರಾಯರು ಅವಳಿಗೆ ಬೆಳಿಗಿನಿಂದ ನಡೆದ ಎಲ್ಲ ಘಟನೆಗಳನ್ನು ತಿಳಿಸಿದರು. ಸುಮನ ಎಲ್ಲವನ್ನು ಕೇಳಿಸಿಕೊಂಡಳು. ಆಮೇಲೆ ಒಂದೇ ವಾಕ್ಯದಲ್ಲಿ ಪ್ರತಿಕ್ರಿಯೆ ವ್ಯಕ್ತಪಡಿಸಿದಳು, ''ನಿಮಗೆ ಹೇಗೆ ಸರಿ ತೋರುತ್ತದೋ ಹಾಗೆ ಮಾಡಿ''. ಶ್ಯಾಮರಾಯರು ಹೆಂಡತಿಯಿಂದ ಇದೇ ಉತ್ತರವನ್ನು ನಿರೀಕ್ಷಿಸಿದ್ದರು.

ಸುಮನಳ ಈ ನಿರ್ಲಿಪ್ತ ಸ್ವಭಾವದ ಪರಿಚಯ ಶ್ಯಾಮರಾಯರಿಗೆ ಸಾಕಷ್ಟಿತ್ತು. ತೀರ್ಮಾನವನ್ನು ತಾನೇ ಮಾಡಬೇಕಿದೆ ಎಂಬುದು ಅವರಿಗೆ ಚೆನ್ನಾಗಿ ತಿಳಿದಿತ್ತು. ಅವರು ತಕ್ಷಣ, ತಮ್ಮ ಪರಿಚಯದ ಒಬ್ಬ ವಕೀಲರಿಗೆ ಫೋನು ಮಾಡಿದರು. ತಾವು ಒಂದು ಮೃತ್ಯುಪತ್ರವನ್ನು ಬರೆಯಬೇಕಿದೆ ಎಂಬುದನ್ನು ಹೇಳಿದರು. ವಕೀಲರು ಸಂಜೆ ಐದಕ್ಕೆ ಭೇಟಿಯಾಗಲು ಕರೆದರು.

'ಮೃತ್ಯುಪತ್ರ' ಶ್ಯಾಮರಾಯರ ಇಚ್ಛೆಯಂತೆ ಸಿದ್ಧವಾಯಿತು. ಸಾಕ್ಷಿದಾರರ ಸಹಿಗಳಾದವು. ಎಲ್ಲವನ್ನು ಮುಗಿಸಿ ಶ್ಯಾಮರಾಯರು ಮನೆಗೆ ಬಂದಾಗ ಎಂಟು ಗಂಟೆಯಾಗಿತ್ತು. ಸಮೀರ ಮನೆಗೆ ಬಂದ ಕೂಡಲೆ ಶ್ಯಾಮರಾಯರು, ಸುಮನ ಸಮೀರ ಹಾಗೂ ರಜನಿಗೆ ಹಜಾರದಲ್ಲಿ ಕರೆದರು. ಅವರಿಗೆ ತಮ್ಮ ಆರ್ಥಿಕ ಸ್ಥಿತಿಯ ಬಗ್ಗೆ ತಿಳಿಸಿ, ತಾನು ಮೃತ್ಯುಪತ್ರವನ್ನು ತಯಾರಿಸಿರುವು ದಾಗಿ ಹೇಳಿದರು. ಆ ಮೃತ್ಯುಪತ್ರದಂತೆ, ತನ್ನ ಮರಣದ ನಂತರ, ಇರುವ ಎಲ್ಲಾ ಆಸ್ತಿಯು ಹೆಂಡತಿ ಸುಮನಳಿಗೆ ಸಿಗುವುದು. ನಂತರ ಅವಳ ಇಚ್ಛೆಯಂತೆ ಅವಳು ಅದನ್ನು

ಉಪಯೋಗಿಸಬಹುದು. [illegible] ಇದೆಲ್ಲವನ್ನು ಅಪ್ಪಾ ತನ್ನ ಮುಂದೆ ಯಾವ ಕಾರಣಕ್ಕಾಗಿ ಹೇಳುತ್ತಿರುವರೆಂದು ಸಮೀರನಿಗೆ ಅರ್ಥವಾಯಿತು. ಅವನು ಒಂದು ಅಕ್ಷರವನ್ನೂ ಮಾತನಾಡದೆ ಕೋಪದಿಂದ ಒಳಗೆ ಹೊರಟುಹೋದ. ಅವನನ್ನು ರಜನಿ ಹಿಂಬಾಲಿಸಿದಳು.

''ನಿಮಗೆ ಇಲ್ಲದ ಅವಸರ'' ಎಂದಷ್ಟೇ ಹೇಳಿ ಸುಮನ ಸಹ ಎದ್ದುಹೋದಳು.

ಶ್ಯಾಮರಾಯರು ಒಳಗೆ ಬಂದು ಬಟ್ಟೆ ಬದಲಾಯಿಸುತ್ತಿದ್ದರು. ಅಷ್ಟರಲ್ಲಿ ಫೋನಿನ ಗಂಟೆ ಬಾರಿಸಿತು. ಅವರ ಅಣ್ಣ ಫೋನಿನಲ್ಲಿ ಮಾತನಾಡುತ್ತಿದ್ದರು.

''ಅಪ್ಪಾ ಬಹಳ ಸೀರಿಯಸ್ ಆಗಿದ್ದಾರೆ. ನೀನು ತಕ್ಷಣ ಹೊರಟು ಬಾ. ಶರದನಿಗೂ ತಿಳಿಸಿದ್ದೀನಿ. ಅವನೂ ಹೊರಟಿದ್ದಾನೆ.''

ಶ್ಯಾಮರಾಯರು ಹಾಗೂ ಸುಮನ ಹಳ್ಳಿಗೆ ಹೋಗಲು ಸಿದ್ಧರಾದರು. ಪ್ರವಾಸದಲ್ಲಿ ಶ್ಯಾಮ ರಾಯರು ತಮ್ಮ ಅಪ್ಪನ ಬಗ್ಗೆಯೇ ಆಲೋಚಿಸುತ್ತಿದ್ದರು. ಗಟ್ಟಿಮುಟ್ಟಾದ, ತೊಂಭತ್ತು ವರ್ಷದ ಅಪ್ಪಾ ಸ್ವತಂತ್ರ ಜೀವನ ನಡೆಸುತ್ತಿದ್ದರು. ಯಾರ ಬಳಿಯೂ ಒಂದು ಬಿಡಿಗಾಸನ್ನು ಬೇಡಿರಲಿಲ್ಲ. ಯಾರಿಂದ ಯಾವ ಸಹಾಯವನ್ನು ಪಡೆದಿರಲಿಲ್ಲ. ಅತ್ಯಂತ ಸ್ವಾಭಿಮಾನದ ಬದುಕನ್ನು ಬದುಕಿದವರು.

ಶ್ಯಾಮರಾಯರು ಹಾಗೂ ಸುಮನ ಬೆಳಿಗ್ಗೆ ಹಳ್ಳಿಗೆ ತಲುಪಿದರು. ಹಿಂದಿನ ರಾತ್ರಿಯೇ ಅಪ್ಪಾ ತೀರಿಕೊಂಡ ಸಮಾಚಾರ ತಿಳಿಯಿತು. ಮನೆಯಲ್ಲಿ ಊರಿನ ಜನರೆಲ್ಲಾ ನೆರೆದಿದ್ದರು. ಅಪ್ಪನ ಅಂತ್ಯಯಾತ್ರೆಯು ಮುಗಿಯಿತು. ಸುದ್ದಿ ತಿಳಿದಾಗ ಸಮೀರ, ರಜನಿ, ಸಾರಿಕಾ ಇಬ್ಬರನ್ನೂ ಕರೆದುಕೊಂಡು ಬಂದ. ಅವನಿಗೆ ಹತ್ತು ಹನ್ನೆರಡು ದಿವಸ ರಜೆ ಸಿಗಲು ಸಾಧ್ಯವಿಲ್ಲದ ಕಾರಣ ಅವನು ಕೇವಲ ಒಂದೇ ದಿವಸ ಉಳಿದು ಹೊರಟುಹೋದ. ಸಮೀರನೊಡನೆ ಯಾವ ಮಾತುಕತೆಯು ಆಗಲಿಲ್ಲ. ಅವನೂ ಕೂಡ, ಕೇವಲ ಕರ್ತವ್ಯವನ್ನು ಪೂರೈಸ ಬೇಕೆಂಬಂತೆ ಬಂದು ಹೋದ. ಇತರ ನೆಂಟರು, ಬಂಧು ಬಳಗದವರು ಬಂದು ಭೇಟಿಯಾಗಿ ಹೋಗುತ್ತಿದ್ದರು. ಒಂದು ದಿನ ಊರಿನಲ್ಲಿ ಇದ್ದ ಜೋಶಿ ವಕೀಲರು ಬಂದರು. ಶ್ಯಾಮರಾಯರಿಗೆ, ಅಣ್ಣನಿಗೆ ಹಾಗೂ ಶರದನಿಗೆ ಕರೆದು ಒಂದು ಮಹತ್ವದ ಸುದ್ದಿಯನ್ನು ಹೇಳಿದರು.

ಅದೇನೆಂದರೆ, 'ಅಪ್ಪನ ಮೃತ್ಯುಪತ್ರ !'

ಹದಿನಾಲ್ಕು ದಿನ ವಿಧಿಗಳೆಲ್ಲಾ ಮುಗಿದ ಮೇಲೆ ನೆಂಟರೆಲ್ಲಾ ತಮ್ಮ ತಮ್ಮ ಊರಿಗೆ ಹೋದರು. ಶ್ಯಾಮರಾಯರು ಹಾಗೂ ಸುಮನ ಕೂಡ ಮಾರನೆಯ ದಿನ ಹೊರಡುವವರಿದ್ದರು.

ಅಂದು ಬೆಳಿಗ್ಗೆ ಒಂಭತ್ತು ಘಂಟೆಗೆ ಜೋಶಿ ವಕೀಲರು ಮನೆಗೆ ಬಂದರು. ಮನೆಯಲ್ಲಿದ್ದವರನ್ನೆಲ್ಲಾ ಹಜಾರಕ್ಕೆ ಕರೆದರು. ಜೋಶಿ ವಕೀಲರು ಅಪ್ಪನ ಮೃತ್ಯುಪತ್ರವನ್ನು ಓದಿ ತೋರಿಸಿದರು. ಅದರಂತೆ ಹೊಲದಲ್ಲಿ ಮೂರು ಪಾಲು ಮಾಡಲಾಗಿತ್ತು. ಇಪ್ಪತ್ತೈದು ಸಾವಿರ ರೂಪಾಯಿ ನಗದನ್ನು ಊರಿನ ಗಣಪತಿ ಗುಡಿಗೆ

ದಾನ ಮಾಡಿದ್ದರು. ಉಳಿದ ಒಂದು ಲಕ್ಷ ಐದು ಸಾವಿರ ರೂಪಾಯಿಯನ್ನು ಮೂರು ಜನರಿಗೆ ಹಂಚಲಾಗಿತ್ತು. ಶ್ಯಾಮರಾಯರ ದೊಡ್ಡಣ್ಣ ರಿಟಾಯರ್ ಆದ ಮೇಲೆ ಊರೊಳಗೆ ಒಂದು ನೆಲೆಸಿದ್ದರು. ಪುಣೆಯಲ್ಲಿರುವ ಶ್ಯಾಮರಾಯರಿಗೆ ಹಾಗೂ ಮುಂಬೈಯಲ್ಲಿದ್ದ ಶರದನಿಗೆ, ಊರೊಳಗಿನ ಮನೆಯಲ್ಲಿ ಹೆಚ್ಚು ಆಸಕ್ತಿ ಇರದ ಕಾರಣ ಆ ಮನೆಯ ಬೆಲೆ ಕಟ್ಟುವುದು, ಹಣವನ್ನು ಅಣ್ಣನಿಗೆ ಮತ್ತು ಉಳಿದ ಎರಡು ತಮ್ಮಂದಿರಿಗೆ ಹಂಚುವುದು ಎಂದು ತೀರ್ಮಾನಿಸಿದರು. ಹೊಲದಲ್ಲಿಯೂ ಹಾಗೆ ಮಾಡುವುದೆಂದು ಎಲ್ಲರ ಅನುಮತಿಯಿಂದ ತೀರ್ಮಾನ ವಾಯಿತು. ಬ್ಯಾಂಕಿನಲ್ಲಿಟ್ಟಿದ್ದ ನಗದು ಹಣವನ್ನು ಮೂರು ಜನರು ಹಂಚಿಕೊಂಡಾಗ, ಪ್ರತಿಯೊಬ್ಬರಿಗೂ ಮೂವತ್ತೈದು ಸಾವಿರ ರೂಪಾಯಿ ಸಿಕ್ಕಿತು. ಮಾರನೆಯ ದಿನ ಶ್ಯಾಮರಾಯರು ಹಾಗೂ ಸುಮನ ಊರಿಗೆ ಹೊರಟರು.

ಬಸ್ಸು ರಭಸವಾಗಿ ಸಾಗಿತ್ತು. ಅದೇ ವೇಗದಲ್ಲಿ ಶ್ಯಾಮರಾಯರ ವಿಚಾರ ತರಂಗಗಳೂ ಓಡುತ್ತಿದ್ದವು. ತಾವು ಮೃತ್ಯುಪತ್ರವನ್ನು ಬರೆದಿಡುವ ತೀರ್ಮಾನ ತೆಗೆದುಕೊಂಡದ್ದು ಸರಿಯೇ, ಇಲ್ಲವೇ? ಅದು ಸರಿ ಯಾದರೂ ಅದರಲ್ಲಿ ಬರೆದದ್ದು ಸರಿಯಾಗಿದೆಯೇ, ಇಲ್ಲವೇ ಅಥವಾ ತಾನು ಗಡಿಬಿಡಿಯಿಂದ ನಿರ್ಣಯ ವನ್ನು ತೆಗೆದುಕೊಂಡೆನೇನು? ಹೀಗೆ ಏನೇನೋ ಪ್ರಶ್ನೆಗಳು ಅವರನ್ನು ಕಾಡತೊಡಗಿದವು.

ಅವರ ಮನಸ್ಸು ಮೂವತ್ತು ವರ್ಷ ಹಿಂದಕ್ಕೆ ಓಡುತ್ತಿತ್ತು. ಆಗ ಅವರಿಗೆ ಮೂವತ್ತೇ ವರ್ಷ. ಆಗ ಅವರಿಗೆ ನೌಕರಿಯಲ್ಲಿ ಸಂಬಳ ಕಡಿಮೆ. ಹಳ್ಳಿಗೆ ಹೋಗಿ ಹೊಲ ಮಾಡುವ ಇಚ್ಛೆಯು ಇರಲಿಲ್ಲ. ಸ್ವಂತ ತಾವೇ ಯಾವುದಾದರೂ ಉದ್ಯೋಗ ಆರಂಭಿಸಬೇಕು ಎಂದೆನಿಸುತ್ತಿತ್ತು. ಅದೇ ಸುಮಾರಿಗೆ ಒಂದು ಯೋಗ್ಯ ಸಂಧಿಯು ಒದಗಿ ಬಂತು. ಕೇರಳದ, ಒಬ್ಬ ಚಹಾ ತೋಟಗಾರನಿಗೆ ಪುಣೆಯಲ್ಲಿ ಏಜಂಟನನ್ನು ನೇಮಿಸುವು ದಿತ್ತು. ಅದಕ್ಕಾಗಿ ಸ್ವಲ್ಪ ಹಣವನ್ನು ತುಂಬಬೇಕಿತ್ತು. ಈ ದಂಧೆ ಚೆನ್ನಾಗಿ ನಡೆಯುವುದೆಂದು ಶ್ಯಾಮರಾಯರಿಗೆ ಅನಿಸುತ್ತಿತ್ತು. ಆದರೆ ಹಣವನ್ನು ಎಲ್ಲಿಂದ ತರುವುದು ಎಂಬ ಪ್ರಶ್ನೆ ಇತ್ತು. ಕಡೆಗೆ ಹಳ್ಳಿಗೆ ಹೋಗಿ ಅಪ್ಪನಿಗೆ ಭೇಟಿಯಾಗಿ ತಮ್ಮ ಆಲೋಚನೆಯನ್ನು ಅವರಿಗೆ ಹೇಳಿ ಹಣವನ್ನು ಕೇಳಿದರು.

ಅಪ್ಪಾ ಸ್ವಲ್ಪ ಹೊತ್ತು ಸುಮ್ಮನೆ ಕುಳಿತರು. ನಂತರ, ''ನೋಡು ಶ್ಯಾಮ, ಇಂದು ನೀನು ಹಣ ಕೇಳುತ್ತಿದ್ದೀಯ. ನಾಳೆ ನಿನ್ನ ಅಣ್ಣಾ ಹಣ ಕೇಳಬಹುದು, ಆಮೇಲೆ ಶರದನ ಸರದಿ ಬರಬಹುದು. ಹೀಗೆ ನಾನು ಎಲ್ಲರಿಗೂ ಹಣವನ್ನು ಕೊಟ್ಟುಬಿಟ್ರೆ ನನ್ನ ಗತಿ ಏನು? ನಾನು ಒಬ್ಬನೇ ಇದ್ದರೂ, ವಯಸ್ಸಾದ ಮೇಲೆ ನನ್ನ ಜವಾಬ್ದಾರಿಯನ್ನು ಯಾರ ಮೇಲೂ ಹೇರಲು ನನಗೆ ಇಷ್ಟವಿಲ್ಲ.''

''ಹಾಗಾದರೆ, ನನಗೆ ನನ್ನ ಪಾಲಿನ ಹಣವನ್ನಾದರು ಕೊಡಿ'', ಶ್ಯಾಮರಾಯರು ಬೇಡಿದ್ದರು.

''ಅದು ಈಗ ಸಿಗುವದಿಲ್ಲ. ಏನೇ ಇದ್ದರೂ ನನ್ನ ಮರಣದ ನಂತರ ನಿಮಗೆಲ್ಲರಿಗೆ ಸೇರುತ್ತೆ. ಅದರ ಬಗ್ಗೆ ಹೆಚ್ಚಿನ ಚರ್ಚೆ ಬೇಡ'', ಎಂದು ಅವರು ಆ ವಿಷಯವನ್ನು ಅಲ್ಲಿಗೆ ನಿಲ್ಲಿಸಿದ್ದರು.

ಶ್ಯಾಮರಾಯರು ಬರಿಗೈಯಲ್ಲಿ ಹಾಗೂ ಕೋಪದಿಂದ ಹಿಂತಿರುಗಿದ್ದರು. ಅವರು ಸ್ವಯಂ ಉದ್ಯೋಗ ಮಾಡುವ ಅವರ ಕನಸು ಕನಸಾಗೇ ಉಳಿದಿತ್ತು. ಆ ಕೋಪದ ಕಾರಣವೇ ಅವರು ರಿಟಾಯರ್ ಆದ ಮೇಲೂ, ಹಳ್ಳಿಗೆ ಹೋಗಿ ನೆಲೆಸಲು ಇಷ್ಟಪಡಲಿಲ್ಲ.

ಹಿಂದಿನ ನೆನಪುಗಳನ್ನು ಕೆದರುತ್ತಿದ್ದಾಗಲೇ ಅವರ ಮನಸ್ಸಿನಲ್ಲಿ ಒಂದು ಸಂಶಯ ಮೂಡಿತು. ಅವರು ಸುಮನಳತ್ತ ನೋಡಿದರು. ಆಕೆ ಕಣ್ಣು ಮುಚ್ಚಿ ಮಲಗಿದ್ದಳು. ಅವಳನ್ನು ಎಚ್ಚಿಸುವುದು ಅವರಿಗೆ ಸೂಕ್ತವೆನಿಸಲಿಲ್ಲ. ಅವರು ತಕ್ಷಣ ಕಾಲಿನ ಹತ್ತಿರವಿಟ್ಟಿದ್ದ ಬ್ಯಾಗನ್ನು ಎದುರಿಗೆ ಎಳೆದುಕೊಂಡರು. ಅದರೊಳಗಿಂದ ಅಪ್ಪನ ಮೃತ್ಯುಪತ್ರದ ಪ್ರತಿಯನ್ನು ಹೊರ ತೆಗೆದರು. ಅದರ ಮೇಲಿನ ತಾರೀಖನ್ನು ನೋಡಿದರು. ಜೂನ್ ೧೨, ೧೯೭೦ ಎಂದಿತ್ತು.

ಶ್ಯಾಮರಾಯರು ಮತ್ತೆ ಮತ್ತೆ ತಾರೀಖನ್ನು ನೋಡುತ್ತಿದ್ದರು. ಸ್ವಂತ ಉದ್ಯೋಗ ಮಾಡಲು, ಅಪ್ಪನಿಂದ ಹಣ ಕೇಳಲು, ತಾವು ಮೂವತ್ತು ವರ್ಷಗಳ ಹಿಂದೆ ಎಂದರೆ, ಯಾವಾಗ ಹೋಗಿದ್ದೆ? ಎಂದು ಜ್ಞಾಪಿಸಿಕೊಳ್ಳಲು ಶ್ಯಾಮರಾಯರು ಪ್ರಯತ್ನ ಮಾಡಿದರು. ಇಂಥದೇ ತಾರೀಖು ಎಂದು ಜ್ಞಾಪಕಕ್ಕೆ ಬರದಿದ್ದರೂ, ಮಳೆಗಾಲದ ಆರಂಭವಾಗಿದ್ದು, ತಾವು ಹಳ್ಳಿಯ ಮನೆಗೆ ತಲುಪಿದಾಗ ಸಂಪೂರ್ಣ ಒದ್ದೆಯಾದದ್ದು ಅವರಿಗೆ ಚೆನ್ನಾಗಿ ಜ್ಞಾಪಕಕ್ಕೆ ಬಂದಿತು. ಆಗ ಅವರಿಗೆ ಆಶ್ಚರ್ಯವಾಯಿತು. ಅಂದರೆ ತಾವು ಅಪ್ಪನಿಗೆ ಹಣವನ್ನು ಕೇಳಿದಾದ ನಂತರ, ತಕ್ಷಣವೇ ಮೃತ್ಯುಪತ್ರ ಬರೆದಿದ್ದಾರೆ. ಮೂವತ್ತು ವರ್ಷಗಳ ನಂತರ ಇತಿಹಾಸದ ಪುನರಾವರ್ತಿ ಆಗಿತ್ತು. ತಾವು ದಂಧೆ ಮಾಡಲೆಂದು ಅಪ್ಪನಿಗೆ ಹಣ ಕೇಳಿದೆವು. ಅದನ್ನು ಅವರು ಕೊಡಲಿಲ್ಲ. ಆದರೆ ತಕ್ಷಣ ಮೃತ್ಯುಪತ್ರವನ್ನು ಮಾಡಿಟ್ಟರು. ಈಗ ತನ್ನ ಮಗ ನನಗೆ ಹಣವನ್ನು ಕೇಳಿದಾಗ ಅವನಿಗೆ ಹಣವನ್ನು ಕೊಡದೆ, ಮೃತ್ಯುಪತ್ರವನ್ನು ಮಾಡಿಟ್ಟೆ. ಮೂವತ್ತು ವರ್ಷಗಳ ಹಿಂದೆ ಅಪ್ಪ ಬೇರೆಯ ತೀರ್ಮಾನ ತೆಗೆದುಕೊಂಡಿದ್ದರೆ ಏನಾಗುತ್ತಿತ್ತು? ಹಾಗಾಗಿದ್ದರೆ, ಒಂದು ವೇಳೆ ತಮ್ಮ

## ಸುದ್ದಿ-ಸ್ವಾರ(ಹ)ಸ್ಯ !

ರೈಲು ದುರಂತಕ್ಕೆ ವಿಧ್ವಂಸಕ ಕೃತ್ಯ ಕಾರಣ!
- ರೈಲು ಮಂತ್ರಿ




ಜೀವನವೇ ಬೇರೆ ರೀತಿಯದಾಗುತ್ತಿತ್ತೇನೊ? ಅಪ್ಪ ಮೃತ್ಯುಪತ್ರವನ್ನು ಬರೆದಾಗ ಅರವತ್ತು ವರ್ಷದವರಿ ದ್ದರು. ಮುಂದೆ, ಮೂವತ್ತು ವರ್ಷ ತಾವು ಬದುಕುವೆವು ಎಂದು ಅವರಿಗೆಲ್ಲಿ ಗೊತ್ತಿತ್ತು? ಅವರು ಎಪ್ಪತ್ತು ವಯಸ್ಸಿಗೆ, ಅಂದರೆ ಮೃತ್ಯುಪತ್ರ ಬರೆದ ಹತ್ತು ವರ್ಷದ ನಂತರ, ತೀರಿಕೊಂಡಿದ್ದರೂ ತಮ್ಮ ಜೀವನದಲ್ಲಿ ಮಾರ್ಪಾಡಾಗುತ್ತಿತ್ತು. ಏಕೆಂದರೆ, ಇಪ್ಪತ್ತು ವರ್ಷಗಳ ಹಿಂದೆಯೂ, ತಮಗೆ ಏನಾದರೂ ಮಾಡುವ ಹುಮ್ಮಸ್ಸಿತ್ತು. ಅಂದರೆ ಅಪ್ಪನ ಮರಣ, ತಮ್ಮ ಭಾಗ್ಯೋದಯಕ್ಕೆ ದಾರಿ ತೋರುತ್ತಿತ್ತು! ಈ ವಿಚಾರ ದಿಂದ ಅವರು ಬೆಚ್ಚಿಬಿದ್ದರು. ನಾಳೆ ಇದೇ ರೀತಿಯ ಆಲೋಚನೆ ಸಮೀರನ ಮನಸ್ಸಿನಲ್ಲಿ ಬಂದರೆ?

ಆದರೆ ಈಗ ತಾನೇನು ಮಾಡುವನಿದ್ದೇನೆ! ತಾನು ಅಪ್ಪನ ಹಾದಿಯನ್ನು ತುಳಿಯುತ್ತಿಲ್ಲವೆ? ತಾನು ಅಪ್ಪನ ಹಾಗೆ ತೊಂಭತ್ತು ವರ್ಷ ಬದುಕಿದರೆ? ಸಮೀರನಿಗೆ ಈಗ ಉತ್ಸಾಹವಿದೆ. ಹುಮ್ಮಸ್ಸಿದೆ, ಏನಾದರು ಮಾಡ ಬೇಕೆಂಬ ಇಚ್ಛೆ ಇದೆ. ಅದಕ್ಕೆ ತಾವು ನೀರೆರೆದು ಪೋಷಿಸಬೇಕು, ಅಥವಾ ಬೇರಿನ ಸಮೇತ ಕಿತ್ತೆಸೆಯು ವುದೇ? ಎಂಬುದನ್ನು ತಾವೇ ನಿರ್ಧರಿಸಬೇಕು. ಸಮೀರನು, ತಮ್ಮ ಮೃತ್ಯುವಿನ ದಾರಿ ಕಾಯುವ ಪರಿಸ್ಥಿತಿ ಬರಕೂಡದು, ಎಂಬೆಲ್ಲ ವಿಚಾರದ ಅಲೆಗಳಲ್ಲಿ ಸಿಕ್ಕಿಕೊಂಡಿದ್ದ ಶಾಮರಾಯರಿಗೆ ಪುಣೆ ತಲುಪಿದಾಗಲೇ ವಾಸ್ತವದ ಅರಿವಾಯಿತು. ಬೆಳಗಾದದ್ದು ಗೊತ್ತಾಯಿತು.

ಶ್ಯಾಮರಾಯರು ಹಾಗೂ ಸುಮನ ಮನೆಗೆ ಬಂದರು. ಸಮೀರ ಕೆಲಸಕ್ಕೆ ಹೊರಡುವ ತಯಾರಿಯಲ್ಲಿದ್ದ. ಅವನೇನು ಮಾತನಾಡಲಿಲ್ಲ. ತಾವು ಅವನಿಗೆ ಹಣ ಕೊಡುವುದಿಲ್ಲವೆಂದು ಹೇಳಿದ ಕಾರಣ, ಅವನು ತಮ್ಮ ಮೇಲೆ ಕೋಪಿಸಿಕೊಂಡಿದ್ದಾನೆ ಎಂದು ಅವರಿಗೆ ಅನಿಸಿತು. ಸಮೀರ ಹೊರಟುಹೋದ ತಕ್ಷಣ ಶ್ಯಾಮರಾಯರು ವಕೀಲರ ನಂಬರನ್ನು ತಿರುಗಿಸಿ ಅವರಿಂದ ಸಮಯ ಪಡೆದುಕೊಂಡರು.

ಮೃತ್ಯುಪತ್ರವನ್ನು ರದ್ದುಗೊಳಿಸಿ ಶ್ಯಾಮರಾಯರು ಮನೆಗೆ ಬಂದಾಗ ಸಮೀರ ಆಗಷ್ಟೇ ಕೆಲಸ ಮುಗಿಸಿ ಮನೆಗೆ ಬಂದಿದ್ದ. ಶ್ಯಾಮರಾಯರು ಅವನನ್ನು ಕರೆದರು.

ಅವನು ಎದುರಿಗೆ ಬಂದು ಸುಮ್ಮನೆ ನಿಂತ. ಶ್ಯಾಮರಾಯರೇ ಮಾತಿಗೆ ಆರಂಭಿಸಿದರು.

''ನೀನು ಸ್ವಂತ ಉದ್ಯೋಗ ಮಾಡಬೇಕಂತಿ ಯಲ್ಲ? ನಿನಗೆ ಎಷ್ಟು ಹಣ ಬೇಕಿದೆ? ಸರಿಯಾಗಿ ಲೆಕ್ಕ ಮಾಡಿ ಹೇಳು. ನಾನೇನಾದರು ವ್ಯವಸ್ಥೆ ಮಾಡುತ್ತೇನೆ''. ಈ ಮಾತನ್ನು ಕೇಳುತ್ತಿದ್ದ ಸಮೀರನ ಮುಖಭಾವ ಬದಲಾಯಿತು. ಒಮ್ಮೆಲೆ ತನ್ನ ಅಪ್ಪನ ವಿಚಾರ ಹೇಗೆ ಬದಲಾಯಿಸಿತು ಎಂಬ ಪ್ರಶ್ನೆಗೆ ಉತ್ತರ ಹುಡುಕುವುದರಲ್ಲಿ ಸಮೀರ ಮಗ್ನನಾದ. ಆದರೆ ಶ್ಯಾಮರಾಯರು ಮಾತ್ರ ಒಳಗೊಳಗೆ ಆನಂದಿಸುತ್ತಿದ್ದರು.

**ಶ್ರೀಮತಿ ಮಾಣಿಕ್ ಪಟವರ್ಧನ್**
'ಶ್ರೀ', ನಂ.೩, ಗುಲ್‌ಮೊಹರ್ ಕಾಲೋನಿ
ಅನಗೋಳ್- ವಡಗಾವ್ ರಸ್ತೆ
ಭಾಗ್ಯನಗರ, ಬೆಳಗಾಂ-೫೯೦ ೦೦೬

ಪ್ರಿಯ ಪ್ರವೀಣ್,

''ಜೀವನ ಎಂದರೆ ಒಂದು ಚೇತನ. ತನ್ನನ್ನು ನುಂಗಿ ನೊಣೆಯಲು ಪ್ರಯತ್ನಿಸುತ್ತಿರುವ ವಾತಾವರಣ ದೊಂದಿಗೆ ಹೋರಾಡಿ ತನ್ನಲ್ಲಿ ಸುಪ್ತವಾಗಿರುವ ಸ್ವಭಾವವನ್ನು ವ್ಯಕ್ತಪಡಿಸುವುದು.''

-ಸ್ವಾಮಿ ವಿವೇಕಾನಂದ.

ನಿನಗೆ 'ವಂದನೆಗಳು' ಎಂದು ಔಪಚಾರಿಕವಾಗಿ ಅಥವಾ ಸಾಂಪ್ರದಾಯಿಕವಾಗಿ ಪತ್ರದಂತೆ 'ಈಗ ಪತ್ರ ಬರೆಯಲು ಕಾರಣವೇನೆಂದರೆ....' ಎಂದು ಬರೆಯಲು ನನ್ನ ಮನಸ್ಸು ಒಪ್ಪುತ್ತಿಲ್ಲ. ನಮ್ಮ ಹದಿನಾರು ವರ್ಷಗಳ ಸ್ನೇಹದಲ್ಲಿ ಒಮ್ಮೆಯಾದರೂ ಊರಲ್ಲಿದ್ದಾಗ ನಾನಾಗಲಿ, ನೀನಾಗಲಿ ವಂದನೆಗಳನ್ನು ಪರಸ್ಪರ ಸಲ್ಲಿಸಿಕೊಂಡಿದ್ದು ನಿನಗೆ ನೆನಪಿದೆಯೇ? ಅಂದಿಲ್ಲದ ವಂದನೆ ಇಂದಿಗ್ಯಾಕೋ ಗೆಳೆಯನೆ ? (ಈ ವಾಕ್ಯವನ್ನು ಸ್ವಲ್ಪ ರಾಗವಾಗಿ ಓದಿಕೋ.)

■ ಗಣೇಶ ಗಾಯತ್ರಿನಂದನ

ಅದೆಷ್ಟೋ ದಿನಗಳ ನಂತರ ಇಲ್ಲದ ಬಿಡುವು ಮಾಡಿಕೊಂಡು ನಿನಗೆ ಪತ್ರ ಬರೆಯಲು ಕುಳಿತಿರುವೆ. ನಿನ್ನ ಪತ್ರಗಳನ್ನೋದಿದಾಗ ನೀನಿನ್ನೂ ಅದೇ ಹಿಂದಿನ ಭಾವುಕತೆಯನ್ನು ಉಳಿಸಿಕೊಂಡಿರುವೆ ಎಂದೆಣಿಸಿದಾಗ ನನಗೆ ಆಶ್ಚರ್ಯವಾಗುತ್ತದೆ. ಮರೀ, ನಿನ್ನ ವಿಶ್ವ ತುಂಬಾ ಚಿಕ್ಕದು, ಸರಳವಾದುದು. ಅದೇ ಮಂಚ, ಅದರ ಮೇಲೊಂದು ದಿಂಬು, ಗೋಡೆ ತುಂಬಾ ದೇವರ ಪಟಗಳು, ಮೇಜಿನ ಮೇಲೆ ಸ್ವಾಮಿ ವಿವೇಕಾನಂದರ ಪುಸ್ತಕ, ಬೀರುವಿನಲ್ಲಿ ನಾರ್ಮಲ್ ವಿನ್ಸೆಂಟ್ ಪೀಲೆ, ಬರ್ನಾರ್ಡ್ ಷಾ, ರೀಡರ್ಸ್ ಡೈಜೆಸ್ಟ್‌ಗಳು ಮತ್ತು ನಮ್ಮ




# ಗೆಳೆಯಾ! ನನ್ನ ಹುಡುಕಿಕೊಡುವೆಯಾ?!

ಕುವೆಂಪು, ಬೇಂದ್ರೆ, ಭೈರಪ್ಪ, ಅನಂತಮೂರ್ತಿಯವರ ಪುಸ್ತಕಗಳು. ನರಸಿಂಹಸ್ವಾಮಿಯವರ ಕಾವ್ಯದ ಸುಲಲಿತೆಗೆ ತಲೆದೂಗಿ ನಡುವೆ 'ಆಹಾ!' ಎಂದು ಉದ್ಗರಿಸುವ ನೀನು.

ನಾನು ?!!..... ಹೀಗೆ ಇದ್ದೆ ಅಲ್ಲವೇ ?!

ಎರಡು ವರ್ಷಗಳ ಹಿಂದೆ ನಾನು ನಿನ್ನ ಜೊತೆ ಇದ್ದಾಗ ನನ್ನ ಭವಿಷ್ಯವನ್ನು ನೆನೆಸಿಕೊಂಡು ತಲ್ಲಣಗೊಳ್ಳುತ್ತಿದ್ದೆ. ಆದರೆ ಇಂದು ಮುಂಬೈನಲ್ಲಿ ವರ್ತಮಾನವೇ ನನ್ನನ್ನು ತಲ್ಲಣಗೊಳಿಸುತ್ತಿದೆ. ನನ್ನ ಜೀವನವನ್ನೇ ಪಲ್ಲಟಗೊಳಿಸುತ್ತಿದೆ. ಊರಲ್ಲಿದ್ದಾಗ ಎದೆ ಬೇಗುದಿ ತಡೆಯದಾದಾಗ ಕಾಳಿ ದೇವಿಯ ಗುಡಿಗೆ ಹೋಗಿ ಮುಳುಗುವ ನೇಸರನಿಗೆ ಎದುರಾಗಿ ಆಲದ ಮರದ ಕೊಂಬೆಯ ಮೇಲೆ ಒರಗಿಕೊಂಡು ಎದೆಯ ಮೇಲೆ ತಾಳ ಹಾಕಿಕೊಂಡು ಹಾಡುವಾಗ ಶ್ರೀ ರಾಮಕೃಷ್ಣರೆನ್ನುತ್ತಿದ್ದಂತೆ ಒಳಗಿನ ಚಿಂತೆಯ ಹಕ್ಕಿಗಳೆಲ್ಲ ಹಾರಿ ಹೋಗುತ್ತಿದ್ದವು. ಅಂದು ನನ್ನ ಹೃದಯ ಹಾಡುತ್ತಿತ್ತು, ಇಂದು ಬರೀ ಎಲುಬಿಲ್ಲದ ನಾಲಗೆ ಮಾತ್ರ ಹೊರಳುತ್ತಿದೆ. ಹೃದಯ ಸತ್ತು ಹೋಗಿದೆ, ಮುಂಬೈನ ಲೋಕಲ್ ಟ್ರೇನ್‌ಗಳಲ್ಲಿ, ದಾರಿ ಮೇಲೆ ಅರಚುವ ಮಾದರ್‌ಚೋದ್, ಬೈಂಚೋದ್‌ಗಳಲ್ಲಿ, ಗಬ್ಬಿಡುವ ಚಾಳ್‌ಗಳಲ್ಲಿ, ಬಾಸ್‌ನ ಬೂಟಿನಡಿಯಲ್ಲಿ.

ಎದುರಿಗೆ ಭೋರ್ಗರೆಯುತ್ತಿರುವ ಬಾಂದ್ರಾದ ಅಲೆಗಳಿಗೆ ಪ್ರತಿಸ್ಪರ್ಧಿಯಾಗಿ ನನ್ನೆದೆಯೊಳಗೂ ಭಾವನೆಗಳು ಭೋರ್ಗರೆಯುತ್ತಿವೆ. ಇವುಗಳ ನಡುವೆ ಜೀವನ ನೌಕೆ ವಿಹ್ವಲಗೊಂಡಿದೆ. ಮುಂಬೈ ನನಗೆ ನೌಕರಿ ಕೊಟ್ಟಿದೆ, ಹಣ ಕೊಟ್ಟಿದೆ. ಆದರೆ ನಿರ್ದಯವಾಗಿ ನನ್ನೊಳಗಿನ ಮಾನವೀಯತೆಯನ್ನು ಕಿತ್ತುಕೊಳ್ಳುತ್ತಿದೆ. ಪ್ರತಿಯೊಬ್ಬರಿಗೂ ಇಲ್ಲಿ ಹಣ ಗಳಿಸುವ ಧಾವಂತ. ಶ್ರೀಮಂತರಾಗುವ ಆಸೆಯಿಂದ ಎಲ್ಲರೂ ಜೀವಂತ ಯಂತ್ರಗಳಾಗಿ ಬಿಟ್ಟಿದ್ದಾರೆ. ಮುಂಬೈ ನನಗೆ ತಾಯಿಯಂತೆ, ಗೆಳೆಯನಂತೆ, ಹಿತೈಷಿಯಂತೆ, ನವತರುಣಿಯಂತೆ, ಶತ್ರುವಿನಂತೆ ಒಮ್ಮೊಮ್ಮೆ ಏಡ್ಸ್ ರೋಗಿಯಂತೆ ಕಾಣುತ್ತದೆ. ನೀನು ಅಷ್ಟೊಂದ ಮಾತು ಗಳನ್ನು ಪೋಣಿಸಿ ಒಳ್ಳೆಯತನ, ಶಾಂತಿ, ಸಹೋದರತೆ ಎಂದೆಲ್ಲಾ ಕೋಮಲವಾಗಿ ಬರೆದ ಪತ್ರಗಳನ್ನೋದಿದಾಗ ಅವನ್ನು ಅಸಹನೆಯಿಂದ ಹರಿದು ಒಗೆಯ ಬೇಕೆನ್ನಿಸುತ್ತದೆ. ನನ್ನ ಎದೆ ತಂದೂರಿಯಂತೆ ಸದಾ ನಿಗಿನಿಗಿಯೆನ್ನುತ್ತಿರುತ್ತದೆ. ಮೊನ್ನೆ ಕಾಂದಿವಲಿಯಿಂದ ಬಾಂದ್ರಾಕ್ಕೆ ಬರುವ ಲೋಕಲ್ ಟ್ರೇನಿನಲ್ಲಿ ಕುಳಿತಿದ್ದೆ. ಮೂವತ್ತು ಸೆಕೆಂಡ್ ನಿಂತ ಟ್ರೇನ್ ಚಲಿಸಲು ಪ್ರಾರಂಭಿಸಿತು. ಎಲ್ಲರಿಗೂ ಹತ್ತುವ ಅವಸರ. ಒಬ್ಬರನ್ನೊಬ್ಬರು ತುಳಿದೇ ಹತ್ತುತ್ತಾರೆ. ''ಅರೆ, ಭಾಯಿ ಜರಾ ಸಂಭಾಲ್ ಕೆ'' ಎಂದರೆ ''ಅಬೇ ದುನಿಯಾಕೆ ಉಪರ್ ಚಾಲ್ ಹೈ'' ಎಂದು ಮುಖಕ್ಕೆ ಹೊಡೆದವರಂತೆ ಉತ್ತರಿಸುತ್ತಾರೆ. ಅರವತ್ತು ವರ್ಷದ ಒಬ್ಬ ಮುದುಕ ಟ್ರೇನಿನಲ್ಲಿ ಹತ್ತಲು ಪ್ರಯಾಸಪಡುತ್ತಿದ್ದ. ಕೂಡಲೇ ಅವನ ಸಹಾಯಕ್ಕೆಂದು ಹತ್ತಾರು ಪ್ರೀತಿ ಕೈಗಳು ಮುಂದಕ್ಕೆ ಬಂದವು. ಆಸರೆಗಾಗಿ ಕೈಗಳನ್ನು ಹಿಡಿದುಕೊಂಡವನ ಚೀಲ ಹತ್ತಬೇಕೆನ್ನುವಷ್ಟರಲ್ಲಿ ಅದು ವೇಗ ಪಡೆದುಕೊಂಡಿತು. ಆಗ ಆ ಹಿಡಿದ ಕೈಗಳು ಮುದುಕನನ್ನು ಬೇಕೆಂತಲೇ ಹೊರಗೆ ನೂಕಿಬಿಟ್ಟವು.

ಓಡುವ ರೈಲಿನಿಂದ ಮುದುಕ ಧಡಾರನೆ ಕೆಳಗೆ ಬಿದ್ದಾಗ ಎರಡು ಬೋಗಿಗಳು ಗಹಗಹಿಸಿದವ್ವು. ಇಲ್ಲಿ ಮಾನವೀಯತೆಯ ಅಸ್ಥಿಪಂಜರವೂ ಉಳಿದಿಲ್ಲ. ಅಂಧೇರಿ ಸ್ಟೇಷನ್ನಿನಲ್ಲಿ ಇಪ್ಪತ್ತೈದು ವರ್ಷದ ಯುವಕನೊಬ್ಬ ಹತ್ತಿದ. ಮೊಣಕಾಲಿಗೆ ಬಟ್ಟೆ ಸುತ್ತಿಕೊಂಡಿದ್ದ. ಮಾಸಿದ ಅಂಗಿ, ಹರಿದ ಪ್ಯಾಂಟ್, ಕುರುಚಲು ಗಡ್ಡ ಅವನ ಮೊಣಕಾಲಿನಿಂದ ಹರಿಯುತ್ತಿದ್ದ ಕೆಂಪು ದ್ರವ ನನಗೆ ಸುಮ್ಮನಿರಗೊಡಲಿಲ್ಲ. ಹರ ಸಾಹಸದಿಂದ ಗಿಟ್ಟಿಸಿಕೊಂಡಿದ್ದ ಸೀಟನ್ನು ಅವನಿಗೆ ಬಿಟ್ಟುಕೊಟ್ಟೆ. ಕಣ್ಣಲ್ಲೇ ಕೃತಜ್ಞತೆ ಅರ್ಪಿಸಿ ಕುಳಿತುಕೊಂಡ. ಬಾಂದ್ರಾ ಬಂದ ಕೂಡಲೇ ಇಳಿಯುವ ಜನರ ಅವಸರದೊಡನೆ ಕಾಲು ಬೆರೆಸಿದೆ. ಕೆಳಗೆ ಇಳಿದವನಿಗೆ ಮತ್ತವನೇ ಎದುರಾದ. ''ಸಾಬ್ ಎರಡು ದಿನದಿಂದ ಏನೂ ತಿಂದಿಲ್ಲ'' ಎನ್ನುವಷ್ಟರಲ್ಲಿ ಆತನ ಕಣ್ಣು ತುಂಬಿ ಬಂದಿದ್ದವು. ಅವನ ಕೈಗೆ ಐದು ರೂಪಾಯಿ ತುರುಕಿದೆ. ನನ್ನ ಕೈಗಳು ಕಣ್ಣಿಗೆ ಒತ್ತಿಕೊಂಡ. ದೀನ ನಾನು ಸಮಸ್ತ ಲೋಕಕೆ ಎಂಬಂತೆ ಕುಂಟುತ್ತಾ ಹೊರಟುಹೋದ. ಒಂದೈದು ನಿಮಿಷಗಳ ನಂತರ ನಾನು ಬ್ಯಾಂಡ್‌ಸ್ಟ್ಯಾಂಡ್‌ಗೆ ಹೋಗಬೇಕೆಂದು ರೈಲ್ವೇ ಬ್ರಿಡ್ಜ್ ಹತ್ತುತ್ತಿರುವಾಗ ಮತ್ತೆ ಆತ ಎದುರಾದ! ಮೊಣಕಾಲಿಗೆ ಕಟ್ಟಿಕೊಂಡಿದ್ದ ಬಟ್ಟೆಯನ್ನು ಸ್ಟೈಲಾಗಿ ತಿರುಗಿಸುತ್ತ 'ದಿಲ್ ತೋ ಪಾಗಲ್ ಹೈ' ಎನ್ನುತ್ತಾ ಹೊರಟಿದ್ದ. ನನ್ನನ್ನು ನೋಡಿದವನೇ ತಟ್ಟನೆ ಜನರ ನಡುವೆ ಮರೆಯಾದ. ಮರೆಯಲ್ಲಿ ಯಾರೋ ಒಬ್ಬರು ನಿಂತು ನನ್ನನ್ನು ನೋಡಿ ಕಿಸಕ್ಕನೆ ನಕ್ಕಂತೆ ಭಾಸವಾಗಿ ಅಳುಕಿದೆ.

ಛಾಯಾ..... ಕುದಿಯುತ್ತಿದ್ದ ನಾನು ಶಾಂತಿಗಾಗಿ ಇವಳನ್ನು ಬಯಸಿದೆ. ನನಗೆ ಕೇವಲ ಕೆಲವು ತೊಟ್ಟು ಪ್ರೀತಿ ಸಾಕಾಗಿತ್ತು. ಆಕ್ಟೋಪಸ್‌ನಂತೆ ನನ್ನನ್ನು ಬಳಸಿದಳು. ನನ್ನ ಊಟ, ನಿದ್ರೆ, ವಿಹಾರ, ಹಾಡು, ಪುಸ್ತಕ, ಸಿನಿಮಾ ಎಲ್ಲದರ ಮೇಲೆ ನೋಡುನೋಡುತ್ತಲೇ ತನ್ನ ಹಕ್ಕು ಸ್ಥಾಪಿಸಿಬಿಟ್ಟಳು. ಅವಳಿಗಾಗಿ ಹುಚ್ಚನಾಗಿದ್ದೆ. ಇದೇ ಬಾಂದ್ರಾದ ಕರಿ ಹೆಬ್ಬಂಡೆಗಳ ಮೇಲೆ ಅವಳ ತೊಡೆಯ ಮೇಲಿದ್ದ ನನ್ನ ತಲೆಗೂದಲಲ್ಲಿ ಬೆರಳಾಡಿಸುತ್ತ ನುಡಿದಿದ್ದಳು. ''ನಾನೆಂದೂ ನಿನ್ನವಳು. ನೀನು ನನ್ನ ಮರೆಯಬಹುದು. ನಾನು ಮಾತ್ರ ನಿನ್ನ ಮರೆಯಲಾರೆ.'' ಎಷ್ಟು ಸುಲಭವಾಗಿ ಮರೆತಳು! ಬಟ್ಟೆ ಕಳಚುವಂತೆ ಕಳಚಿಬಿಟ್ಟಳು. ನನ್ನೊಳಗಿನ ಬೆಂಕಿಗೆ ಗಂಗಾ ಸಲಿಲವಾಗಿ ಸಂತೈಸುವಳೆಂದು ನಾನು ಬಗೆದರೆ ಅವಳು ಭಾರತದ ನೀರಾಗದೆ 'ಇರಾಕ್‌ನ ನೀರಾಗಿ' ನನ್ನನ್ನು ಮತ್ತಷ್ಟು ಉರಿಸಿದಳು. ಟೈಫಾಯಿಡ್ ಆಗಿ ಒಂದು ತಿಂಗಳು ಮನೆಯಲ್ಲೇ ನರಳಿದೆ. ನನ್ನ ರೂಮಿನ ಪಕ್ಕದಲ್ಲಿದ್ದ ಶಂಕರ ಅಪ್ಪೆ ಸ್ವಂತ ತಮ್ಮನಂತೆ ನನ್ನನ್ನು ನೋಡಿಕೊಂಡ. ಕಟ್ಟುಮಸ್ತಾಗಿದ್ದ ಈ ಶಂಕರ್ ಕೊಂಕಣದಿಂದ ಮುಂಬೈಗೆ ತನ್ನ ಸುಂದರ ಹೆಂಡತಿಯೊಡನೆ ದುಡ್ಡು ಗಳಿಸಿ ಶ್ರೀಮಂತನಾಗುವ ಆಸೆಯಿಂದ ಬಂದಿದ್ದ. ಒಂದು ವರ್ಷ ಎಲ್ಲ ಸರಿಯಾಗಿಯೇ ಇತ್ತು. ಒಂದು ದಿನ ಈತನ ಹೆಂಡತಿ ಪಕ್ಕದ ಮನೆಗೆ ಬಾಡಿಗೆಗೆ ಬಂದು ನಿಂತಿದ್ದ ಬಬಲೂ ಎಂಬ ಸ್ಫುರದ್ರೂಪಿಗೆ ಮರುಳಾಗಿ ಅವನ ಜೊತೆ ಓಡಿ ಹೋದಳು. ಬಬಲೂ ಅವಳಿಗೆ ಸಿನಿಮಾದಲ್ಲಿ ಪಾತ್ರ ಕೊಡಿಸುವ ಭರವಸೆ ನೀಡಿದ್ದ. ಈಗವಳು ಮುಂಬೈನ ಮೂಲೆಯೊಂದರಲ್ಲಿ ಎಂಥದೋ 'ದಂಧೆ' ಮಾಡುತ್ತಿದ್ದಾಳೆಂದು ಮಹೇಂದ್ರಾದಲ್ಲಿ ಕೆಲಸ ಮಾಡುವ ಪ್ರಕಾಶ್ ಪೂರ್ಪೆ ಹೇಳಿದ. ಶಂಕರ್ ದಿನಾಲು ಸಂಜೆ ನನ್ನ ರೂಮಿಗೆ ಬರುತ್ತಾನೆ. ''ಸಾಬ್ ಯೆ ಪ್ಯಾರ್, ಮೊಹಬ್ಬತ್ ಸಬ್ ಬೇಕಾರಕಿ ಚೀಜ್ ಹೈ. ಸಾಲೆ ಸಬ್ ನಾಟಕ್ ಕರ್‍ತೆ ಹೈ. ದುನಿಯಾಕಾ ಔರ್ ಏಕ್ ನಾವರ್ ಧೋಕಾ ಹೈ'' ಎಂದು ಹೇಳುತ್ತ ಅಳುತ್ತಾನೆ. ಅವನಿಗೆ ಎಲ್ಲರೂ ಮೋಸ ಮಾಡುತ್ತಿರುವಂತೆ ಭಾಸವಾಗುತ್ತದೆ. ಒಮ್ಮೊಮ್ಮೆ [illegible] ತನಗೆ ತಾನೆ ಮೋಸ ಮಾಡಿಕೊಳ್ಳುತ್ತಿದ್ದೇನೆಂದು ಅರಚಿಕೊಳ್ಳುತ್ತಾನೆ.



ಕುಡಿಯುವ ಶರಾಬಿನಿಂದಲೂ ಅಮಲೇರದಾದಾಗ 'ಇಸ್ಕಿ ಮಾಕಿ ಯೇ ಭಿ ಮುಝೆ ಧೋಕಾ ದೇ ರಹೆ ಹೈ'' ಎಂದು ಬಾಟಲನ್ನು ಗೋಡೆಗೆ ಛಳಾರನೆ ಬೀಸಿ ಒಗೆಯುತ್ತಾನೆ.

ಮುಂಬೈ ವಿಕ್ಷಿಪ್ತತೆ ವಿಶಿಷ್ಟತೆಗಳನ್ನು ತನ್ನ ಹೊಟ್ಟೆಯಲ್ಲಿ ತುಂಬಿಕೊಂಡಿರುವ ನಗರ. ಮುಂಬೈ ನಿಶ್ಚಿತವಾಗಿ ಎಂಥವರಿಗೂ ಬದುಕಲು ಕಲಿಸುತ್ತದೆ. ಹಾಗೆಯೇ ನಿಸ್ಸಂಶಯವಾಗಿ ಸಾಯಲು ಕೂಡಾ. ನಮ್ಮ ಮ್ಯಾನೇಜರ್ ಅಶೋಕ ಕುಡುಚೆ ಪಕ್ಕಾ ಸ್ಯಾಡಿಸ್ಟ್ ತಿಂಗಳಿಗೆ ಲಕ್ಷಕ್ಕಿಂತಲೂ ಹೆಚ್ಚು ಸಂಪಾದಿಸುತ್ತಾನೆ. (ಹೇಗೆಂದು ಕೇಳಬೇಡಿ). ಇನ್ನೊಬ್ಬರ ಲೂಪ್ ಹೋಲ್ಸ್‌ಗಳನ್ನು ಕಂಡುಹಿಡಿಯುವುದೇ ತನ್ನ ಜೀವನದ ಪರಮಧ್ಯೇಯವೆಂದು ಬದುಕುತ್ತಿದ್ದಾನೆ. ವಾರಕ್ಕೆ ನಾಲ್ಕು ದಿನ ಇವನ ರೂಮಿಗೆ ಸ್ಕ್ಯಾಂಡಿನೇವಿಯಾದವಳೊಬ್ಬಳು ಬರುತ್ತಾಳೆ. ಫೈಲ್‌ಗೆ ಸೈನ್ ಬೇಕೆಂದು ಪುಶ್‌ಡೋರ್ ತಳ್ಳಿಕೊಂಡು ನಾನು ಒಳಗೆ ಹೋದರೆ ಸರಕ್ಕನೆ ಹಿಂದೆ ಸರಿದು ತಮ್ಮ ಬಟ್ಟೆ ಸರಿಪಡಿಸಿಕೊಳ್ಳುತ್ತ ಕುಳಿತುಕೊಳ್ಳುತ್ತಾರೆ. ಅವನ ತೂತುಗಳು ಎಲ್ಲೆಲ್ಲಿವೆ ಎಂಬುದು ನನಗೆ ಗೊತ್ತಿದೆಯೆಂದು ಸಂಶಯಪಟ್ಟು ನನ್ನ ಮೇಲೆ ವಿನಾಕಾರಣ ಹಾರಾಡುತ್ತಾನೆ. ದಿನಕ್ಕೆ ಹತ್ತು ಗಂಟೆಗೂ ಹೆಚ್ಚು ದುಡಿದು ಕಂಗೆಟ್ಟಿದ್ದ ನನ್ನನ್ನು ಅವನ ಚೇಂಬರ್‌ಗೆ ಕರೆದು ''ತೂ ಏಕ್ ನಂಬರ್ ಕಾ ಕಾಮ್‌ಚೋರ್ ಹೈ'' ಎಂದು ಉಗಿದ. ನನ್ನ ಬದಿಯ ಟೇಬಲ್ ಮೇಲಿರುವ ಆತನ ಚೇಲಾ ಶೈಲೇಶ್ ಸಾಳ್ವೆ ಆಫೀಸಿನ ಸಮಯದಲ್ಲಿನ ಖಾಸಾ ಆರು ಗಂಟೆಗಳನ್ನು ಅಪೋಲೋ ಬಾರ್‌ನಲ್ಲಿಯೇ ಕಳೆಯುವುದು ನನ್ನ ನೆನಪಿಗೆ ಬಂದು ಅವನ ಮುಖದ ಮೇಲೆ ರಾಜಿನಾಮೆ ಬಿಸಾಕಿ ಹೊರಬರಬೇಕೆಂದುಕೊಂಡೆ. ಲಾಲ್‌ಚಂದ್‌ಗೆ ಕಟ್ಟಬೇಕಾಗಿರುವ ಮೂರು ಸಾವಿರದ ಐನೂರು ಬಾಕಿ ಹಣ ನೆನಪಿಗೆ ಬಂದು ಸುಮ್ಮನಾದೆ. ಹದಿನೈದು ದಿನಗಳ ಹಿಂದೆ ಶೈಲೇಶ್ ಸಾಳ್ವೆ ಪ್ರಮೋಷನ್ ಪಡೆದುಕೊಂಡ.

ಇಲ್ಲಿ ಬದುಕು ವಿಚಿತ್ರವಾಗಿ ತೆರೆದುಕೊಳ್ಳುತ್ತದೆ. ಬದುಕಬೇಕೆಂದುಕೊಂಡವನು ಸಾಯುತ್ತಾನೆ. ಸಾಯಬೇಕೆಂದುಕೊಂಡವನು ಬದುಕುತ್ತಾನೆ. ಇಲ್ಲಿ ಬದುಕಿ ಸತ್ತವರೂ ಇದ್ದಾರೆ. ಸತ್ತು ಬದುಕಿದವರೂ ಇದ್ದಾರೆ.

ರಾಜ್‌ಭಕ್ಷ್ ಮೊನ್ನೆ ರೂಮಿಗೆ ಬಂದು ಅವನ ಗುರುತಿರುವ ಒಂದು ಮನೆಗೆ ಕರೆದುಕೊಂಡು ಹೋದ. ಮೊದಲೇ ಹೇಳಿಬಿಟ್ಟಿದ್ದನೆಂದು ತೋರುತ್ತದೆ. ಮನೆಯಲ್ಲಿ ನನ್ನ ಬಿಟ್ಟವನೆ ಕೆಲಸವಿದೆಯೆಂದು ಹೊರಗೆ ಹೋದ. ರಾಜ್‌ಭಕ್ಷ್ ನನ್ನ ಪ್ರಕ್ಷುಬ್ಧತೆಯನ್ನು ಅರ್ಥಮಾಡಿಕೊಂಡವ. ನನ್ನ ಮಾಂಸಾಹಾರಿ ಗೆಳೆಯ. ಊಟ, ಜೋಕ್, ವಿಚಾರ ಎಲ್ಲದರಲ್ಲಿಯೂ ಪಕ್ಕಾ ಮಾಂಸಾಹಾರಿ. ಆದರೆ ಹೃದಯದಿಂದ ಶುದ್ಧ ಮನುಷ್ಯ. ಮಂದವಾದ ಬೆಳಕಿನ ರೂಮಿನಲ್ಲಿ ಒಬ್ಬನೆ ಕುಳಿತಿದ್ದೆ. ಅಲ್ಲಿನ ವಾತಾವರಣ ಉತ್ತೇಜಕವಾಗಿತ್ತು. ಬಳುಕುತ್ತಾ ಇಪ್ಪತ್ತರ ತರುಣಿ ಒಳಗೆ ಬಂದಳು. ಅವಳ ಬಿಸಿಯುಸಿರು ನನಗೆ ತಾಕುವಂತೆ ಕುಳಿತಳು. ಅವಳಿಂದ ಬರುತ್ತಿದ್ದ ಖೋರಾ ಮೈ ವಾಸನೆ ನನ್ನನ್ನು ಜಾರಿಸಿತು. ಎದ್ದು ಅವಳ ಸೊಂಟ ಬಳಸಿದೆ. ನಾನು ತಪ್ಪುತ್ತಿದ್ದೇನೆ ಎಂದೆನಿಸಿತು. ಮನಸ್ಸು ತಪ್ಪು ಎಂದರೇನು ಎಂದು ಕೇಳಿತು. ನಾವೆಲ್ಲ ಮನುಷ್ಯರಲ್ಲವೇ ? ಉಪ್ಪು, ಹುಳಿ, ಖಾರ ಎಂಬ ತ್ರಿವಿಧಗಳನ್ನು ಸವಿದ ಹುಲು ಮಾನವರು. ನಾವು ಎಡವುವುದು ಸಹಜ ಎಂದು ನಾನು ನನ್ನ (ಅ)ಕಾರ್ಯವನ್ನು ತಿಪ್ಪೆ ಸಾರಿಸಲು ಸರ್ವಥಾ ಪ್ರಯತ್ನಿಸುವುದಿಲ್ಲ. ವಿವೇಕ ಜಾಗ್ರತವಾಗಿದ್ದರೆ ಬದುಕು ಸಗಣಿಯಾಗುವುದಿಲ್ಲ. ಅವಳನ್ನು ಒತ್ತಿಕೊಂಡು ಮಂಚದ ಮೇಲೆ ಕೆಡವಿದೆ. ದಷ್ಟಪುಷ್ಟವಾದ ಹೆಣ್ಣು. ನಾನು ಹೇಳಬೇಕೆನ್ನುವಷ್ಟರಲ್ಲಿ ಮನಸು ರಾಜಭಕ್ಷನಿಗೆ ಸಾವಿರ ಬಾರಿ ಕೃತಜ್ಞತೆಗಳನ್ನು ಅರ್ಪಿಸಿ ಆಗಿತ್ತು. ತಡ ಮಾಡುವುದು ಹೇಡಿಗಳ ಲಕ್ಷಣವೆಂದರಿತು ಕಾರ್ಯೋನ್ಮುಖನಾಗಲು ತೀರ್ಮಾನಿಸಿದೆ. ಶರ್ಟ್ ಬಿಚ್ಚಿ ಮೊಳೆಗೆ ತೂಗುಹಾಕಿದೆ. ಸರಿಯಾಗಿ ಮೊಳೆಗೆ ತೂಗಿಸಿರಲಿಲ್ಲವಾದ್ದರಿಂದ ಶರ್ಟ್ ಕೆಳಗೆ ಬಿತ್ತು. ತೆಗೆದುಕೊಳ್ಳಲು ಕೆಳಗೆ ಬಾಗಿದಾಗ ಸಹಜವಾಗಿ ಮಂಚದ ಅಡಿಗೆ ದೃಷ್ಟಿ ಹೋಯಿತು. ಲಕ್ಷ್ಯವಿಟ್ಟು ನಿರೀಕ್ಷಿಸಿದೆ. ಭಯಗೊಂಡು ಎದ್ದವನೆ ಮಂಚದ ಮೇಲಿದ್ದವಳಿಗೆ ಪ್ರಶ್ನಿಸಿದೆ: ''ಮಂಚದ ಕೆಳಗಿರುವುದೇನು ?'' ''ಓಹ್ ! ನೋಡಿಬಿಟ್ಟೆಯಾ ? ಅದು ನನ್ನ ಮಗು.'' ''ಅದು ಅಲ್ಯಾಕೆ ? ಸತ್ತು ಹೋಗಿದೆಯೇನು ?!'' ಮತ್ತಷ್ಟು ಭಯಗೊಂಡು ಪ್ರಶ್ನಿಸಿದೆ. ''ಅರೆ ಬಾಬು ನೀನು ಬೇಕಾರ್ ಪ್ರಶ್ನೆಗಳನ್ನು ಕೇಳುತ್ತಿರುವೆ. ದಂಧೆಗೆ ಅಡಚಣೆಯಾಗಬಾರದೆಂದು ಹಾಲಿನಲ್ಲಿ ಮತ್ತಿನ ಔಷಧಿ ಬೆರೆಸಿ ಮಗುವಿಗೆ ಕುಡಿಸಿ ಮಲಗಿಸಿದ್ದೇನೆ'' ಉದ್ವಿಗ್ನವಿಲ್ಲದೆ ಉತ್ತರಿಸಿದಳು. ನಾನು ನಿಂತಲ್ಲಿಯೇ ಚಲಿಸಿ ಹೋದೆ. ಶರ್ಟ್ ಹಾಕಿಕೊಂಡವನೆ ಅವಳ ಕೈಗೆ ನೂರರ ಎರಡು ನೋಟುಗಳನ್ನು ತುರುಕಿ ಚಪ್ಪಲಿ ಮೆಟ್ಟಿಕೊಂಡು ಸರಸರನೆ ಬೀದಿಗಿಳಿದೆ. ಅವಳಿಗೆ ಆಶ್ಚರ್ಯವಾಗಿರಬೇಕು. ಕರೆಯುತ್ತಾ ಬಾಗಿಲ ತನಕ ಬಂದಿದ್ದಳು. ನಾನು ಹಿಂತಿರುಗಿ ನೋಡಲಿಲ್ಲ. ''ಕಮಾಲ್ ಕಿ ಚೀಜ್ ಹೈ'' ಎಂದು ಗಟ್ಟಿಯಾಗಿ ಗೊಣಗಿದ್ದು ಕೇಳಿಬಂತು. ರೂಮಿಗೆ ಬಂದು ಬಾಗಿಲು ಜಡಿದು ಇಡೀ ಮುಂಬಯಿಯೇ




ಕೇಳುತ್ತಿದೆಯೇನೋ ಎಂಬಂತೆ ಭೋರೆಂದು ಸಾಕಾಗುವ ತನಕ ಅತ್ತೆ.

ಹಣ ಇರದಿದ್ದವನು ಮುಂಬಯಿಯಲ್ಲಿ ಜೀವಂತ ಹೆಣದಂತೆಯೇ (ಸತ್ತ ಹೆಣವಾದರೆ ಮಹಾನಗರ ಪಾಲಿಕೆಯವರಾದರೂ ಎಳೆದು ಹಾಕುತ್ತಾರೆ). ಇಲ್ಲಿ ಮೈ ಮಾರುವವರಿಗೂ ಅವರದೇ ಆದ ಬೆಲೆಯಿದೆ, ಅಂತಸ್ತಿದೆ. ಹೋದ ತಿಂಗಳು ನನ್ನ ಭೋಟಾ ದೋಸ್ತ್ ರಾಮ್ ಬಿಹಾರಿಯ ತಂದೆ ತೀರಿಕೊಂಡಿದ್ದ. ರಾಮ್ ಬಿಹಾರಿ ರಸ್ತೆಗೆ ಜಲ್ಲಿ ಕಲ್ಲು ಹಾಕಲು ಹೋಗುತ್ತಾನೆ. ಆ ದಿನ ಆತ ಕಲ್ಲು ಕರಗುವಂತೆ ಅಳುತ್ತಿದ್ದ ಅವನ ಬಳಿಗೆ ಹೋಗಿ ನಾನು ''ಸಮಾಧಾನ ಮಾಡ್ಕೋ ರಾಮು. ಹೋದವರು ತಿರುಗಿ ಬರುತ್ತಾರೆಯೇ ? ಬಂದವರೆಲ್ಲ ಒಂದು ದಿನ ಹೋಗಲೇಬೇಕು ?'' ಎಂದು ವೇದಾಂತ ಉಸುರಿದೆ. ತಟಕ್ಕನೆ ತಿರುಗಿದ ರಾಮ್ ಬಿಹಾರಿ ''ದಾದಾ, ನಾನು ಅಳ್ತಾ ಇರೋದು ಅಪ್ಪ ಸತ್ತಿದ್ದಕ್ಕಲ್ಲ. ಅವನನ್ನು ಸುಡೋದಕ್ಕೆ ಹತ್ತಿರ ನಯಾ ಪೈಸೆ ಇಲ್ಲ. ಅದಕ್ಕೇನ್ಮಾಡಲಿ ?'' ಎಂದವನೆ ಅಳತೊಡಗಿದ. ಚಾಳ್‌ನ ಎಲ್ಲರೂ ವಂತಿಗೆ ತೆಗೆದು ಅವನ ತಂದೆಯ ಅಂತ್ಯ ಸಂಸ್ಕಾರ ನೆರವೇರಿಸಿದೆವು. ಮುಂಬಯಿಯಲ್ಲಿ ಸಂಜೆ ಬಾಂದ್ರಾ ಬೀಚಿನಲ್ಲಿ ಪ್ರೇಮಿಗಳನ್ನು ಸತಾಯಿಸಿ ಹಣ ಕೀಳುವ ಹಿಜಡಾಗಳ ದಿನದ ಕಮಾಯಿಯೇ ಎರಡು ನೂರನ್ನು ದಾಟುತ್ತದೆ. 'ಮುಂಬಯಿ ಮಾ' ತುಂಬಾ ಕರುಣಾಮಯಿ. ಇವಳ ಆಸರೆ ಬಯಸಿ ಬಂದಿರುವವರು ಎಂದಿಗೂ ತಿರುಗಿ ಹೋಗಿಲ್ಲ. ಇಲ್ಲಿ ರಾಜರಂತೆ ಬದುಕಲು ಒಳ ಹೊರ ದಾರಿಗಳಿವೆ. ಹಾಗೆಯೇ ಬೀದಿ ಹೆಣವಾಗಲೂ ಬೇಕಾದಷ್ಟು ದಾರಿಗಳಿವೆ. ರಾಜರಾಗಲು ಹೋದವರು ಬೀದಿ ಹೆಣಗಳಾಗಿ ಗಟಾರಿಗೆ ತಳ್ಳಿಸಿಕೊಂಡವರಿದ್ದಾರೆ. ಬೀದಿ ಹೆಣದಂತೆ ಫುಟ್‌ಪಾತಿನಲ್ಲಿ ಮಲಗಿದವರು ರಾಜರಾಗಿ ಮೆರೆದವರಿದ್ದಾರೆ.

ನಮ್ಮ ಸಂಸ್ಥೆಯ ವತಿಯಿಂದ ನಡೆದ ಕಲ್ಚರಲ್ ಸಮಾರಂಭದಲ್ಲೊಮ್ಮೆ ಶಂಕರ್ ಮಹದೇವನ್‌ನ 'ಬ್ರೆಥ್‌ಲೆಸ್' ಹಾಡಿದ್ದೆ. ಸಭಿಕರ ಮೆಚ್ಚುಗೆಯ ಮಳೆಯಲ್ಲಿ ತೋಯ್ದು ಹೋಗಿದ್ದೆ. ಆ ಪಾರ್ಟಿಯಲ್ಲಿ ಭೇಟಿಯಾದ ಸ್ಯಾಂಡ್ರಾ ಎರಡು ಗಂಟೆಗಳ ಕಾಲ ನನ್ನನ್ನು ಕೆಂಡದ ಮೇಲೆ ನಿಲ್ಲಿಸಿದ್ದಳು. ಈಗಲೋ ಆಗಲೋ ಕಳಚಿ ಬೀಳುವಂತಿದ್ದ ಪಾರದರ್ಶಕ ಉಡುಪಿನ ಸ್ಯಾಂಡ್ರಾ ''ಹಲೋ ಆಯಾಮ್ ಸ್ಯಾಂಡ್ರಾ ಫ್ರಾಮ್ ಬಾಂದ್ರಾ'' ಎನ್ನುತ್ತಾ ''ರಾಜ್ ಯುವರ್ ವಾಯ್ಸ್ ಈಜ್ ಗೋಲ್ಡನ್ ವಾಯ್ಸ್. ನಿಮ್ಮ ಹಾಡು ಕೇಳ್ತಾ ಇದ್ದರೆ ಎಸ್.ಪಿ. ಬಾಲಸುಬ್ರಹ್ಮಣ್ಯಂ ನೆನಪಾಗುತ್ತಾರೆ. ನಿಮ್ಮ ದನಿಯಲ್ಲಿ ಅವರ ದನಿಯ ಹೋಲಿಕೆ ಇದೆ. ನೀವೇಕೆ ಟಿ.ವಿ.ಎಸ್. ಸಾರೇಗಾಮಾಕ್ಕೆ ಟ್ರೈ ಮಾಡಬಾರದು, ಸಹಾಯ ಬೇಕಿದ್ದರೆ ಹೇಳಿ, ನಮ್ಮ ತಂದೆಯ ಗುರುತಿನವರು ಅಲ್ಲಿದ್ದಾರೆ. ನಿಮ್ಮ ಹಾಡು ಕೇಳಿದಾಗಿನಿಂದ ನಾನು ನಿಮ್ಮ ಫ್ಯಾನ್ ಆಗಿಬಿಟ್ಟಿದ್ದೇನೆ'' ಎನ್ನುತ್ತಾ ಮೋಹಕ ನಗೆ ಬೀರಿದಳು. ಈ ಹುಡುಗಿ ತುಂಬಾ ಚೆನ್ನಾಗಿ ಗಾಳ ಹಾಕುತ್ತಾಳೆ. ಛಾಯಾಳ ಗಾಳ ಗಂಟಲನ್ನು ಇರಿದು ಅದ್ಹೇಗೋ ಬದುಕಿದ್ದೆ. ಹಾಡಲಾರೆ ಎಂದುಕೊಂಡಿದ್ದವನನ್ನು ಎಸ್ಪಿ ಬಾಲು ಹಗಲಿರುಳು ಕಾಡಿದ, ಕೆಣಕಿದ. ಹಾಡು ನನ್ನ ಬದುಕು, ಹಾಡು ನನ್ನ ಜೀವ, ಹಾಡೊಂದಿದ್ದರೆ ಸಾಕು ಮರೆಯಲೆನ್ನ ನೋವ ಎಂಬಂತೆ ಮತ್ತೆ ಹಾಡುತ್ತಿದ್ದೆ. ಎದುರಿಗಿದ್ದ ಕೆಂಡ ಪಂಚೇಂದ್ರಿಯಗಳನ್ನು ಸುಡುತ್ತಿತ್ತು. ''ಸ್ಯಾಂಡ್ರಾ ನಿಮ್ಮಂತಹ ಸುಂದರ ಫ್ಯಾನ್ ನನಗಿರುವುದು ನನ್ನ ಭಾಗ್ಯ. ಆದರೆ ಬಹಳಷ್ಟು ಜನ ಫ್ಯಾನಿಗೇ ನೇಣು ಹಾಕಿಕೊಂಡು ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ. ನಾನಿನ್ನೂ ಬದುಕಬೇಕು'' ಎಂದು ಮನಸ್ಸಲ್ಲಂದು ಕೊಂಡು ಅಲ್ಲಿಂದ ಜಾರಿದೆ. ಕೆಲ ದಿನಗಳ ನಂತರ ಈ ಸ್ಯಾಂಡ್ರಾ ನಕಲಿ ಕ್ಯಾಸೆಟ್ ಜಾಲದಲ್ಲಿ ಸಿಲುಕಿ ಕೇರಾಫ್ ಪೊಲೀಸ್ ಸ್ಟೇಷನ್ ಆದಳು. ಇಂತಹ ಸಾರೇಗಾಮಾ ಸ್ಯಾಂಡ್ರಾಗಳು ಮುಂಬಯಿಯಲ್ಲಿ ಬೇಕಾದಷ್ಟು ಜನ ಇದ್ದಾರೆ.

ಮುಂಬಯಿ ನನ್ನನ್ನು ಬಹಳಷ್ಟು ಕಾಡಿಸಿದೆ. ಕಾಡಿಸುತ್ತಿದೆ. ಇದರ ನುಣುಪಾದ ರೋಡುಗಳು, ಗಗನದೆತ್ತರದ ಮನುಷ್ಯನೆಂಬ ಹದ್ದು ವಾಸಿಸುವ ಕಾಂಕ್ರೀಟು ಗಿಡಗಳು, ಕೆಳಗೆ ಕಳ್ಳಿಯಲಿ ನರಳುವ ಪಾರಿವಾಳಗಳು. ಕೆಲವೊಮ್ಮೆ ಈ ಹದ್ದುಗಳು ಮೇಲಿನಿಂದ ಕೆಳಗಿಳಿದು ಬಂದು ಫೋಟೋ ಫ್ಲ್ಯಾಷಿನಲ್ಲಿ ಕಳ್ಳಿಯಲ್ಲಿದ್ದ ಪಾರಿವಾಳಗಳನ್ನು ಹಿಡಿದು ಮೇಲೆ ಹಾರಿಬಿಡುತ್ತವೆ, ನೇರವಾಗಿ ತಮ್ಮ ಅಡುಗೆ ಮನೆಗೆ. ಮರುದಿನ ಪೇಪರಿನಲ್ಲಿ ದಪ್ಪಕ್ಷರದಲ್ಲಿ ಪಾರಿವಾಳಗಳನ್ನು ಹಾರಿಬಿಟ್ಟ ಕುರಿತಾದ ಸುದ್ದಿಯಿರುತ್ತದೆ. ದೇಶ ಮುಂದುವರಿಯುತ್ತಿದೆಯೆಂಬ ಭಾವನೆ ಎಲ್ಲರಿಗೂ ಬರುತ್ತದೆ. ಹರಕು ಚಡ್ಡಿ ಕಳಚುತ್ತಿರುವ ಬಾಲಕನನ್ನು ಅಪ್ಪಿಕೊಂಡು ಹಲ್ಲು ಕಿರಿದು ಬಾಲ ಕಾರ್ಮಿಕ ವೃತ್ತಿಯನ್ನು ವಿರೋಧಿಸಿ ಎಂದು ಪೋಜು ಕೊಡುವ ಸಿನಿಮಾ ನಟಿ, ದೇಶಭಕ್ತಿಯನ್ನು ಕಾಂಟ್ರ್ಯಾಕ್ಟ್ ತೆಗೆದುಕೊಂಡಿರುವ ರಾಜಕಾರಣಿ, ಇಂಡಿಯಾ ಈಸ್ ಗ್ರೇಟ್, ಈ ಮ್ಯಾಚ್ ಗೆದ್ದೇ ಗೆಲ್ಲುತ್ತೇವೆ ಎನ್ನುತ್ತ ಬ್ಯಾಟ್ ಬೀಸಿ ಮಣ್ಣು ಮುಕ್ಕುವ ನಮ್ಮ ಮಹಾನ್ ಕ್ರಿಕೆಟಿಗರು, ಕ್ರಿಯೆಟಿವಿಟಿ ! ಕ್ರಿಯೆಟಿವಿಟಿ ಎಂದು ಕನಸಲ್ಲೂ ಚೀರುತ್ತಾ ಕುರುಚಲು ಗಡ್ಡ ಬಿಟ್ಟು ಸಂಜೆ ಬಾರಿನಲ್ಲಿ ವಿಸ್ಕಿ ಜೊತೆ ಚಿಪ್ಸ್ ಕುರುಕುತ್ತಾ ಹೊಟ್ಟೆ ಬಿಟ್ಟಿರುವ ಪ್ರೊಫೆಸರ್ ಕಮ್ ಸಾಹಿತಿ, ಪರಿಸರ ಪ್ರಜ್ಞೆ ಬಗ್ಗೆ ಕೊರೆಯುವ ಸಮಾಜ ಸೇವಕಿ, ಇವರೆಲ್ಲರಿಗಿಂತ ನನಗೆ ನಮ್ಮ ಓಣಿಯಲ್ಲಿರುವ ಅಬಾ ಗ್ರೇಟ್ ಎನಿಸುತ್ತಾನೆ. ಅಬಾ ಎಲ್ಲಿಂದ ಬಂದ ಎಂದು ಯಾರಿಗೂ ಗೊತ್ತಿಲ್ಲ. ಸಡನ್ನಾಗಿ ಒಂದು ದಿನ ಓಣಿಯಲ್ಲಿ ಪ್ರತ್ಯಕ್ಷನಾದ. ಒಂದು ಕಣ್ಣು ಕುರುಡಿದೆ. ಯಾರ ಜೊತೆಗೂ ತಾನಾಗಿ ಮಾತನಾಡುವುದಿಲ್ಲ, ಮಾತನಾಡಿಸಿದರೆ ಸಂತ ಜ್ಞಾನೇಶ್ವರನ ಎರಡು ಓಹೆ (ನುಡಿ)ಗಳನ್ನು ರಾಗವಾಗಿ ಹೇಳುತ್ತಾನೆ. ಕೊಟ್ಟಿದ್ದನ್ನು ತಿನ್ನುತ್ತಾನೆ. ಸಾರ್ವಜನಿಕ ನಲ್ಲಿಯ ಪಕ್ಕದಲ್ಲಿರುವ ಹಾಳು ಬಿದ್ದ ಮನೆಯ ಜಗುಲಿಯಲ್ಲಿ ಇವನ ವಾಸ. ಬೆಳಿಗ್ಗೆ ಹಾಗೂ ಸಂಜೆಗೊಮ್ಮೆ ಓಣಿಯನ್ನೆಲ್ಲ ಸುತ್ತು ಹಾಕಿ ಭೇಲ್ ತಿಂದು ಒಗೆದಿರುವ ಕಾಗದ, ಕೋಕ್ ಡಬ್ಬಿ, ಹರಕು ಚಿಂದಿ, ಗುಟಕಾ ಪ್ಯಾಕ್‌ಗಳು, ವಿಸ್ಪರ್ ಪ್ಯಾಕ್, ಶಾಂಪೂ ಸ್ಯಾಷೆ ಮುಂತಾದವುಗಳನ್ನು ಒಟ್ಟುಮಾಡಿ ತಂದು ಕಸದ ತೊಟ್ಟಿಗೆ ಹಾಕುತ್ತಾನೆ. ನಂತರ ನಲ್ಲಿಯಿಂದ ಹರಿದು ಹೊಂಡವಾಗಿ ನಿಂತ ನೀರಿನಲ್ಲಿ ಮೈಯಿನ ಸಮಸ್ತ ಭಾಗಗಳನ್ನು ಚೆನ್ನಾಗಿ ತಿಕ್ಕಿ ತೊಳೆದು ಬಿಸಿಲು ಕಾಯಿಸುತ್ತಾ ಕುಳಿತುಕೊಳ್ಳುತ್ತಾನೆ. ಓಣಿಯ ಎಷ್ಟೋ ಜನ ಅಬಾನ ಕಡೆಯಿಂದ ಬಿಟ್ಟಿ ಕೆಲಸ ಮಾಡಿಸಿಕೊಳ್ಳುತ್ತಾರೆ. ಕೆಲಸ ಮುಗಿಯುವವರೆಗೂ ಅಬಾ ಬೇಕು. ಪೊಲೀಸರೆಂದರೆ ಚಡ್ಡಿಯಲ್ಲಿ ಉಚ್ಚೆ ಹೊಯ್ದು ಕೊಳ್ಳುವ ಅಬಾನಿಗೆ ಕೆಲಸ ಮಾಡಿದ ಕೂಡಲೇ ''ಅಬಾ ಪೊಲೀಸರು ಯಾಕೋ ನಿನ್ನನ್ನು ಕೇಳುತ್ತಿದ್ದರು'' ಎಂದರೆ ಸಾಕು ಕಿರುಚಿಕೊಂಡು ಓಡಿಹೋಗುತ್ತಾನೆ. ಸಮಾಜ ಅವನಿಗೆ ಕೊಟ್ಟಿದ್ದಕ್ಕಿಂತಲೂ ಸಮಾಜಕ್ಕೆ ಎಷ್ಟೋ ಪಟ್ಟು ಹೆಚ್ಚಿನದನ್ನು ಅಬಾ ಹಿಂತಿರುಗಿಸುತ್ತಿದ್ದಾನೆ.

ಶಾಲೆಯಲ್ಲಿದ್ದಾಗ ನನ್ನ ಪ್ರೀತಿಯ ಉಡುಪ ಗುರೂಜೀ ಒಂದು ಮಾತು ಹೇಳುತ್ತಿದ್ದರು, ''ಮಗು ಜಗತ್ತಿನಲ್ಲಿ ಕರುಣೆ ಬಹಳ ಅಮೂಲ್ಯವಾದುದು, ತುಂಬಾ ಬೆಲೆಯುಳ್ಳದ್ದು'' ಎಂದು. ಹೊಡೆತಕ್ಕೊಳಗಾದ ನನ್ನ ಮನಸ್ಸು ಅವರ ಮಾತನ್ನು ನೆನಪಿಸಿಕೊಂಡು ವಿಪರೀತವನ್ನು ಕಲ್ಪಿಸಿಕೊಳ್ಳುತ್ತದೆ. ಕಾಯಾ, ವಾಚಾ, ಮನಸಾ ನನ್ನ ಏಳ್ಗೆಯನ್ನು ಬಯಸಿದ್ದ ಉಡುಪ ಗುರೂಜಿಯವರನ್ನು ವಿನಾಕಾರಣ ದ್ವೇಷಿಸುತ್ತೇನೆ. ಅವರ ಮೇಲೆ ನಂಜು ಕಾರುತ್ತೇನೆ. ಒಂದೊಂದು ಸಲ ವ್ಯಾಖ್ಯೆಗಳನ್ನು ಅನುಭವಗಳು ಬದಲಾಯಿಸಿಬಿಡುತ್ತವೆ.

ನನ್ನ ಗುರುತಿನವರಾದ ರಾಮದಾಸ್ ಬುವಾ ಪಂಡರಾಪುರದ ಪಾಂಡುರಂಗನ ಭಕ್ತರು. ರಸವತ್ತಾಗಿ, ಕಣ್ಣೀರಿಳಿಯುವಂತೆ ಹರಿಕಥೆಗಳನ್ನು ಮಾಡುತ್ತಾರೆ. ಜೀವನ ಭಕ್ತಿ, ಮುಕ್ತಿ, ಕಾರುಣ್ಯ, ವೈರಾಗ್ಯ, ಸಂಸಾರ ಇವುಗಳ ಕುರಿತಾದ ಮಾತುಗಳನ್ನು ಅವರ ಬಾಯಲ್ಲೇ ಕೇಳಬೇಕು. ಇವರ ಹೆಂಡತಿ ಸತ್ತು ಹದಿನೈದು ವರ್ಷಗಳಾಯಿತು. ಚಿಕ್ಕ ವಯಸ್ಸಿನಲ್ಲಿ ಹೆಂಡತಿ ತೀರಿಕೊಂಡಿದ್ದರಿಂದ ಒಬ್ಬಳನ್ನು ಇಟ್ಟುಕೊಂಡಿದ್ದಾರೆ. ಪಪ್ಪು ಅವರ ಮನೆಯಲ್ಲಿದ್ದ ಸಾದಾ ಸೀದಾ ಕೆಲಸದ ಹುಡುಗ. ಅವನ ಮುಗ್ಧತೆ ನನ್ನನ್ನು ಬಹಳ ಆಕರ್ಷಿಸಿತ್ತು. ಎಷ್ಟೋ ಸಲ ಹೋಟೆಲಿನಲ್ಲಿ ಅವನನ್ನು ಕರೆದುಕೊಂಡು ಊಟ ಮಾಡಿದ್ದೇನೆ. ಒಂದು ದಿನ ರಾತ್ರಿ ಎಂಟು ಗಂಟೆಗೆ ರಾಮದಾಸ್ ಬುವಾರವರ ಮನೆಗೆ ಹೊರಟಿದ್ದೆ. ಮನೆಯ ಸಮೀಪ ಹೋದಾಗ ಪಪ್ಪು ಎಲ್ಲೋ ಹೋಗುತ್ತಿರುವುದು ಕಾಣಿಸಿತು. ಕತ್ತಲೆಯಲ್ಲಿ ಅವನ ಮುಖ ನನಗೆ ಸರಿಯಾಗಿ ಕಾಣಿಸಲಿಲ್ಲ. ನಾನು ಎಂದಿನಂತೆ ನಗುತ್ತಾ ''ಊಟಾ ಆಯ್ತಾ ಪಪ್ಪು ?'' ಎಂದು ಕೇಳಿದೆ. ಪಪ್ಪು ನಿಂತವನೇ ''ಯಾಕೋ ರಂಡೆ ಮಗನೆ! ನನ್ನ ಊಟಾ ಕೇಳೋನು ನೀನ್ಯಾರು ?'' ಎಂದುಬಿಟ್ಟ. ಅವನ ಮಾತು ಕೇಳಿ ನನಗೆ ಕಸಿವಿಸಿ ಆಯಿತು. ರಾಮದಾಸ್ ಬುವಾಗಳ ಮನೆಗೆ ಹೋಗಲು ಮನಸ್ಸಾಗಲಿಲ್ಲ. ಹಿಂತಿರುಗಿ ಬಂದೆ.

ಮರುದಿನ ರೈಲ್ವೇ ಟ್ರ್ಯಾಕ್ ಮೇಲೆ ಪಪ್ಪು ರೈಲಿನಡಿ ಸಿಕ್ಕು ಚೂರಾಗಿ ಬಿದ್ದಿದ್ದ. ಕೆಲಸಗಳ ಒತ್ತಡದಲ್ಲಿ ನನಗೆ ಬಿಡುವು ಸಿಗಲಿಲ್ಲ. ನಾಲ್ಕು ದಿನಗಳ ನಂತರ ವಿಷಯ

ಏನೆಂದು ತಿಳಿಯಲು ರಾಮದಾಸ್ ಬುವಾಗಳ ಮನೆಗೆ ಧಾವಿಸಿದಾಗ ಅವರ ಮನೆಗೆ ಬೀಗವಿತ್ತು. ನೆರೆಮನೆಯ ಭೀಮ್‌ಜಿ ಕಾಕಾ ಅವರ ಮನೆಯೊಳಗೆ ನನ್ನ ಕರೆದೊಯ್ದು ಚಹಾ ಮಾಡಿಕೊಟ್ಟರು. ಬುವಾಗಳಿಗೂ ಇವರಿಗೂ ಸರಿಯಿರಲಿಲ್ಲ. ಬುವಾಗಳ ಮನೆಯಲ್ಲಿ ಎರಡು ತೊಲೆ ಬಂಗಾರದ ಚೈನ್ ಕಳೆದಿತ್ತು. ಅದರ ಆಪಾದನೆಯನ್ನು ಪಪ್ಪು ಮೇಲೆ ಹಾಕಿ ಎರಡು ದಿನ ಊಟ ಕೊಡದೆ ಸತಾಯಿಸಿ ಕೊನೆಗೆ ಚೆನ್ನಾಗಿ ತಂದೆ ತಾಯಿ ನೆನಪಾಗುವಂತೆ ತದುಕಿ ರಾತ್ರಿ ಎಂಟರ ಸುಮಾರಿಗೆ ಮನೆಯಿಂದ ಹೊರದಬ್ಬಿದರು. ಅದೇ ರಾತ್ರಿ ಚೈನು ಬುವಾಗಳಿಗೆ ಅವರು ಇಟ್ಟುಕೊಂಡಿದ್ದ ಹೆಂಗಸಿನ ಮನೆಯಲ್ಲಿ ದೊರಕಿತು. ಮರುದಿನ ರೈಲಿನಡಿ ಪಪ್ಪು ಸಿಕ್ಕಿ ಸತ್ತ ಸುದ್ದಿ ಅವರಿಗೆ ಮುಟ್ಟಿತ್ತು. ಹಿಂದೆ ಮುಂದಿರದ ಪಪ್ಪು ಬುವಾಗಳಲ್ಲಿ ಕೆಲಸಕ್ಕಿದ್ದು ಹೊರಗೆಲ್ಲೋ ಮಲಗುತ್ತಿದ್ದ. ಪೊಲೀಸರ ಇಲ್ಲದ ಉಸಾಬರಿಗೆ ಹೆದರಿ ಬುವಾಗಳು ಮನೆಗೆ ಬೀಗ ಹಾಕಿ ಹೋದರೆಂದು ಜನ ಆಡಿಕೊಳ್ಳುತ್ತಿದ್ದಾರೆ ಏನಃ ಇದರಲ್ಲಿ ನನಗೇನೂ ಗೊತ್ತಿಲ್ಲವೆಂದು ಕೈ ಬಾಯಿಯ ಅದ್ಭುತ ಚಲನೆಯ ಸಂಯೋಜನೆಯಿಂದ ಭೀಮ್‌ಜಿ ಕಾಕಾ ನನಗೆ ವಿಷಯವನ್ನು ಮನದಟ್ಟು ಮಾಡಿಸಲು ತುಂಬಾ ಹೆಣಗಾಡಿದರು. ಕ್ಷಮೆಯಂತಹ ಔದಾರ್ಯ ಇಹಪರದಲ್ಲಿ ಮತ್ತೊಂದಿಲ್ಲವೆಂದು ಹೇಳುತ್ತಿದ್ದ ರಾಮ್‌ದಾಸ್ ಬುವಾಗಳಲ್ಲಿ ಇಪ್ಪತ್ತೆಂಟು ಕೇಜಿ ತೂಕದ ಹದಿನೈದು ವರ್ಷದ ಅನಾಥ ಪಪ್ಪುವಿನ ಕುರಿತಾಗಿ ಒಂದು ಬೊಗಸೆಯಷ್ಟೂ ಕರುಣೆ ಇರಲಿಲ್ಲವೆ? ಉಡುಪ ಗುರೂಜಿ ಹೇಳುವಂತೆ ಕರುಣೆ ಅಮೂಲ್ಯವಾದುದು ನಿಜ. ಆದರೆ ಅದು ಬೆಲೆಯುಳ್ಳದ್ದಾಗಬಾರದು. ಅದು ಬಹಳ ಬಹಳ ಅಗ್ಗವಾಗಬೇಕೆಂದು ನನ್ನ ಮನಸ್ಸು ಚೀರುತ್ತದೆ. ಇಲ್ಲವಾದಲ್ಲಿ ಪಪ್ಪುವಿನಂತಹ ಬಡವನಿಗೆ ಬಹಳ ಬೆಲೆಯುಳ್ಳ ಕರುಣೆ ಸುಲಭದಲ್ಲಿ ಸಿಗುವುದಿಲ್ಲ.

ವಿಧಿ ನನ್ನನ್ನು ಇಲ್ಲಿ ತಂದು ನಿಲ್ಲಿಸಿದೆ. ಮುಂಬೈನ ವೇಗ ನನ್ನ ಊರಿನ ವ್ಯಕ್ತಿತ್ವವನ್ನು ಬುಡಸಮೇತ ಅಲ್ಲಾಡಿಸುತ್ತಿದೆ. ನನ್ನ ಮೂಲ ವ್ಯಕ್ತಿತ್ವವನ್ನು ಕಳೆದು ಕೊಳ್ಳದೆ ಇಲ್ಲಿನ ಬದುಕಲ್ಲಿ ಅದನ್ನು ಮತ್ತಷ್ಟು ಗಾಢವಾಗಿ ಬೇರಿಳಿಸಿದರೇನೇ ನನ್ನ ಇರುವಿದೆ ಎಂಬ ಅರಿವೂ ನನಗಿದೆ. ವ್ಯಕ್ತಿತ್ವ ಕಳೆದುಕೊಂಡರೆ ಸತ್ತಂತೆಯೇ ಅಲ್ಲವೇ? ಅದಕ್ಕೇ ನನಗೆ ಸದಾ ಸೊನ್ನೆಯಾಗಬೇಕೆಂದು ಅನಿಸುವುದು. ಸೊನ್ನೆಯ ಪರಿಕಲ್ಪನೆಯೇ ಅದ್ಭುತವಾದದ್ದು. ಸೊನ್ನೆಯು ಯಾವುದೇ ಕ್ರಿಯೆಯಲ್ಲಿ ತನ್ನ ಅರ್ಥ, ಬೆಲೆ ಕಳೆದುಕೊಳ್ಳುವುದಿಲ್ಲ. ಸೊನ್ನೆ ಸೊನ್ನೆಯಾಗಿಯೇ ಉಳಿಯುತ್ತದೆ. ಉಳಿದ ಒಂಬತ್ತೂ ಅಂಕೆಗಳು ಮಾಡಲಾಗದ ಕೆಲಸವನ್ನು ಏನೂ ಇರದ ಸೊನ್ನೆಯೊಂದೇ ಸಲೀಸಾಗಿ ಮಾಡಬಲ್ಲದು. ಸೊನ್ನೆಯನ್ನು ತೆಗೆದರೆ ಗಣಿತವೇ ಸ್ತಬ್ಧವಾಗುತ್ತದೆ. ಎಂಥದೇ ಸುಖ, ದುಃಖ, ಸಂಕೀರ್ಣತೆಗಳು ಬಂದು ಅಪ್ಪಳಿಸಿದರೂ ನಾವು ನಾವಾಗಿಯೇ ಉಳಿಯುವ 'ಸೊನ್ನೆ'ಯ ಬೆಲೆಯಿರದ ಆದರೆ ಸೊನ್ನೆಯ ಗುಣವಿರುವ ವ್ಯಕ್ತಿತ್ವ ನನ್ನದಾಗಬೇಕೆಂಬುದೇ ನನ್ನ ಅದಮ್ಯ ಹಂಬಲವಾಗಿದೆ. ಹೀಗೆಲ್ಲಾ ಇರುವಾಗ 'ಸೊನ್ನೆಗೆ ಬೆಲೆಯಿಲ್ಲ' ಎಂಬ ಮಾತನ್ನು ಯೋಚಿಸಿದಷ್ಟು ವಿಸ್ಮಯವೆನಿಸುತ್ತದೆ. ಬೆಲೆಯೇ ಇರದ ಸೊನ್ನೆಗೆ ಎಷ್ಟೊಂದು ಬೆಲೆ!

ಸ್ವಾಮಿ ವಿವೇಕಾನಂದರ 'ನರರೆಲ್ಲ ಹರರಾಗುವ ತನಕ ನನ್ನ ಹೋರಾಟ ನಿಲ್ಲದೆಂಬ' ಮಾತನ್ನು ನೆನಸಿಕೊಂಡಾಗಲೆಲ್ಲ ಒಳಿತಿನ ಶಕ್ತಿಯಲ್ಲಿ ಅವರಿಗಿರುವ ನಂಬಿಕೆಯನ್ನು ಕಂಡು ಮನಸು ಮೂಕವಾಗುತ್ತದೆ. ಇಲ್ಲಿನ ಬಹುತೇಕ ಜನರ ಬದುಕನ್ನು ನೋಡಿದಾಗ 'ಭಗವಾನ್ ನೆ ಅಚ್ಚೆ ಚೀಜ್ ಇನ್ಸಾನ್ ಬನಾಯಿ. ನೀಚೆ ದೇಖತಾ ಹೈ ತೋ ಸಾಲೆ ಕೀಡೆ ರೇಂಗ್ ರಹೇ ಹೈ'' (ಭಗವಂತ ತನ್ನ ಶ್ರೇಷ್ಠ ಕೃತಿಯೆಂದು ಮನುಷ್ಯನನ್ನು ಸೃಷ್ಟಿಸಿದ. ಆದರೆ ಆತ ಕೆಳಗೆ ನೋಡಿದಾಗ ಕ್ರಿಮಿಗಳು ತೆವಳುತ್ತಿವೆ) ಎಂಬ ನಾನಾ ಪಾಟೇಕರ್‌ನ ಮಾತು ಮುಖಕ್ಕೆ ಹೊಡೆಯುತ್ತದೆ. ಮುಂಬೈ ಬರಿ ನಕಾರವಾದುದನ್ನು ಮಾತ್ರ ಹೊಂದಿಲ್ಲ. ಮಾತಿಗೆ ನಿಲುಕದ ಸುಖವನ್ನು ನೀಡುತ್ತದೆ. ಕೆಲದಿನಗಳ ಹಿಂದೆ ಕಾಂದಿವಲಿಗೆ ಡ್ಯೂಟಿ ಮುಗಿಸಿಕೊಂಡು ಹಿಂತಿರುಗುತ್ತಿದ್ದಾಗ ಲೋಕಲ್ ಟ್ರೇನಿನಲ್ಲೊಬ್ಬ ಹೊರಗಿನಿಂದ ಬಂದವ (ನನ್ನಂತೆ!) ಮುಂಬೈಯನ್ನು ಹೀಯಾಳಿಸಿ ನುಡಿದ. ನನಗೆ ತಡೆಯಲಾಗಲಿಲ್ಲ. ಅವನ ಕಾಲರ್ ಹಿಡಿದು ಕಪಾಳಕ್ಕೆ ಎರಡು ಬಿಟ್ಟೆ. ನನ್ನ ನೆರವಿಗೆ ಐದಾರು ಜನ ಸಿದ್ಧರಿದ್ದರು. ಕೊನೆಗೆ ಆತ ಮಾಫಿ ಕೇಳಿ ಇಳಿದು ಹೋದ. ಮುಂಬೈ ನನ್ನನ್ನು ಹೇಗೆ ಆವರಿಸಿದೆ! ಅವನಿಗೆ ಏಕೆ ಹೊಡೆದೆ ಎಂದು ವೃದ್ಧನೊಬ್ಬ ಕೇಳಿದ. ಅವನಿಗೇನು ಗೊತ್ತು ನಾನು ಕನ್ನಡಿಗನೆಂದು! ಕನ್ನಡದ ರಕ್ತ ಉಪ್ಪಿನ ಋಣವನ್ನು ಬೇರೆಯವರಂತೆ ಮರೆಯುವುದುಂಟೆ? ಎಲ್ಲಿಂದಲೋ ಬಂದು ಒಂದು ನಾಲ್ಕು ದಿನ ಮುಂಬೈಯಲ್ಲಿ ನಿಂತವರು ಐದನೇ ದಿನ ''ಏಽಽ ಆಪ್ಪನ್ ಕಾ ಮುಂಬೈ ರೇ, ಅಮಚೀ ಮುಂಬೈ'' ಎಂದು ಅರಚುತ್ತಾರೆ!

ಮುಂಬೈನ ಅಮೂರ್ತ ಪ್ರೀತಿ ಗೊತ್ತಿಲ್ಲದೆ ಅಫೀಮಿನಂತೆ ನರನಾಡಿಗಳಲ್ಲಿ ಆವರಿಸಿ ಬಿಡುತ್ತದೆ. ಇದು ನಮ್ಮನ್ನು ಕೊಲ್ಲುತ್ತದೆ ಎಂದು ಗೊತ್ತಿದ್ದರೂ ಅದನ್ನು ಅಪ್ಪಿಕೊಳ್ಳುವ ತವಕ ಜಾಸ್ತಿಯಾಗುತ್ತದೆ. ಇಲ್ಲಿನ ಸನ್ಮಾನ, ತುಳಿತ, ವೇಗ, ಜಂಜಾಟದ ಬದುಕಿನಲ್ಲಿ 'ನಾನು' ಕಳೆದು ಹೋಗುತ್ತಿದ್ದೇನೆ. ನನಗೆ ನನ್ನ ಗುರುತು ಸಿಗುವುದು ನನ್ನ ಕನ್ನಡದ ಊರಿಂದ ಬಂದ ನಿನ್ನ ಪತ್ರಗಳನ್ನೋದಿದಾಗಲೆ. ಪತ್ರದ ಜೊತೆಗೆ ಅಲ್ಲಿನ ಮಣ್ಣಿನ ವಾಸನೆಯೂ ತೇಲಿ ಬಂದಿರುತ್ತದೆ. ವನವಾಸ ಮುಗಿಸಿ ತನ್ನ ಪರಿವಾರದೊಡನೆ ಅಯೋಧ್ಯೆಗೆ ಹಿಂತಿರುಗುತ್ತಿದ್ದಾಗ ನುಡಿದ ಶ್ರೀರಾಮಚಂದ್ರನ 'ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ' ಎಂಬ ಮಾತು ನೆನಪಾಗುತ್ತದೆ. ಕಣ್ಣುಗಳು ಮಂಜಾಗುತ್ತವೆ. ಮುಂಬಯಿ ಎಂಬ ಮಾಯಾ ಸಮುದ್ರದಲ್ಲಿ ಮುಳುಗಿದ ನನಗೆ ನಿನ್ನ ಪತ್ರಗಳು ಆಮ್ಲಜನಕದ ಸಿಲಿಂಡರಿನಂತೆ ಗೆಳೆಯಾ!

ಸುಖ ದುಃಖದ ನೆರಳೋ, ದುಃಖ ಸುಖದ ನೆರಳೋ ನನಗಿನ್ನೂ ಗೊತ್ತಾಗಿಲ್ಲ. ಹಾಗಿರುವಾಗ ನಾನಿಲ್ಲಿ ಸುಖವಾಗಿದ್ದೇನೆಂದು ಬರೆದರೆ ಮನಸ್ಸು ಸುಖ ಎಂದರೇನು ಎಂದು ಕೇಳುತ್ತದೆ.

ಇತಿ ಕುದಿಯುತ್ತಿರುವ ನಿನ್ನವ,

ರಾಜು


**ಗಳತಗಾ ಗಾಯತ್ರೀನಂದನ**

ಆರ್. ಎಸ್. ಸಂಕಪಾಳ, ಅಂಚೆ : ಗಳತಗಾ - ೫೯೧ ೨೧೯

ಚಿಕ್ಕೋಡಿ ತಾಲ್ಲೂಕು, ಬೆಳಗಾವಿ ಜಿಲ್ಲೆ

# ಬಡವರನ್ನು ತತ್ತರಿಸುವ ಬರ ಅನಿವಾರ್ಯವೇ ?

ಪ್ರೊ|| ಬಿ. ವಿ. ವೆಂಕಟರಾವ್

**ಕರ್ನಾಟಕದಲ್ಲಿ ಪ್ರಕೃತಿಯ ವಿಕೋಪದಿಂದ ಬರದ ಪರಿಸ್ಥಿತಿ ಉಂಟಾಗುವುದು ಅಪರೂಪವೇನಲ್ಲ. ಇತ್ತೀಚಿನ ದಶಕಗಳಲ್ಲಂತೂ ಬರ ಆಗಾಗ್ಗೆ ಸಂಭವಿಸುತ್ತಿದ್ದು ಅದರಿಂದ ಹೆಚ್ಚಾಗಿ, ನೇರವಾಗಿ ಸಂಕಷ್ಟಗಳಿಗೆ ತುತ್ತಾಗುವವರು ಗ್ರಾಮೀಣ ಜನತೆ, ರೈತಾಪಿ ಜನ. ಇದಕ್ಕೆ ಪರಿಸರಕ್ಕೆ ಸಂಬಂಧಪಟ್ಟ ಏನೇ ಕಾರಣಗಳಿದ್ದರೂ ಇದುವರೆಗಿನ ರಾಜ್ಯ ಸರಕಾರಗಳು ಈ ಸಮಸ್ಯೆಗಳನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿ ಪರಿಹಾರಗಳನ್ನು ಕಂಡುಕೊಳ್ಳುವಲ್ಲಿ ವಿಫಲಗೊಂಡಿವೆಯೆಂದೇ ಹೇಳಬೇಕು. ರಾಜ್ಯದ ನೆಲ, ಜಲ ಇತ್ಯಾದಿ ಸಂಪನ್ಮೂಲಗಳ ಬಗೆಗಿನ ವಸ್ತುನಿಷ್ಠ ಅಧ್ಯಯನ, ಅವುಗಳ ಸದ್ಬಳಕೆಗಳ ಬಗ್ಗೆ ಕೂಡಲೆ ಸೂಕ್ತ ಯೋಜನೆಗಳನ್ನು ರೂಪಿಸಿ ಬಡಜನತೆ, ಗ್ರಾಮೀಣ ಜನವಿಭಾಗಗಳು ಬರದ ಪರಿಸ್ಥಿತಿಯನ್ನು ಎದುರಿಸಲು ಸಜ್ಜಾಗುವಂತೆ ಅವರ ನೆರವಿಗೆ ಬರುವುದು ಸರ್ಕಾರದ ಕರ್ತವ್ಯ.**

ಕರ್ನಾಟಕದ ಭೂವಿಸ್ತಾರ ೧,೯೧,೭೭೩ ಚದರ ಕಿಲೋಮೀಟರ್‌ಗಳು; ಜನಸಂಖ್ಯೆ ೫ ಕೋಟಿ. ವಿಸ್ತಾರ ಹಾಗೂ ಜನಸಂಖ್ಯೆ ಆಧಾರದ ಮೇಲೆ ಭಾರತದ ೨೨ ರಾಜ್ಯಗಳಲ್ಲಿ ರಾಜ್ಯಕ್ಕೆ ೮ನೇ ಸ್ಥಾನ. ಮಣ್ಣು, ವಾಯು ಗುಣ, ಮಳೆ ಬೆಳೆ ಇವೂ ವೈವಿಧ್ಯಮಯ. ಪಶ್ಚಿಮ ಕಡಲತೀರ ಹಾಗೂ ಅದರ ಉದ್ದಕ್ಕೂ ಸಮಾನಾಂತರ ವಾಗಿ ಹಬ್ಬಿರುವ ಪರ್ವತ ಪ್ರದೇಶದಲ್ಲಿ ಅಪಾರವಾದ ಮಳೆ. ಪಶ್ಚಿಮಾಭಿಮುಖವಾಗಿ ಹರಿಯುವ ನದಿಗಳು ಕೆಲವೇ ಮೈಲಿಗಳಷ್ಟು ದೂರ ಇಳಿಮೇಡುಗಳಲ್ಲಿ ಹರಿದು ಸಮುದ್ರವನ್ನು ಸೇರುವುದರಿಂದ, ಅವುಗಳಿಂದ ವ್ಯವಸಾಯಕ್ಕೆ ಅನುಕೂಲ ಕಡಿಮೆ. ಪೂರ್ವಾಭಿಮುಖ ವಾಗಿ ಹರಿಯುವ ಕಾವೇರಿ ಹಾಗೂ ಹೇಮಾವತಿ, ಲಕ್ಷ್ಮಣತೀರ್ಥ, ಯಗಚಿ, ಕಬಿನಿ ಮುಂತಾದ ಅದರ ಉಪನದಿಗಳು, ಕೃಷ್ಣಾ ಜಲಾನಯನ ಭೂಮಿಗೆ ಪೂರಕಗಳಾದ ತುಂಗಭದ್ರ, ಮಲಪ್ರಭ, ಘಟಪ್ರಭ, ಭೀಮ ಈ ಎಲ್ಲ ಜೀವನದಿಗಳು, ರಾಜ್ಯದ ದಕ್ಷಿಣ ಹಾಗೂ ಉತ್ತರ ಬಯಲು ಸೀಮೆಗಳಿಗೆ ಸಾಕಷ್ಟು ನೀರನ್ನು ಒದಗಿಸುತ್ತವೆ. ಉನ್ನತಮಟ್ಟದ ವ್ಯವಸಾಯ ಹಾಗೂ ಅದರಿಂದ ಹೊರಹೊಮ್ಮುವ ಸಂಪದ್ಭರಿತ ಜನ ಜೀವನಕ್ಕೆ ಕಾರಕಗಳಾಗಿವೆ.

**ಮಳೆ ಮತ್ತು ಕೃಷಿ**

ರಾಜ್ಯದ ತೀರ ಹಾಗೂ ಕರಾವಳಿ ಪ್ರದೇಶ, ಅಂದರೆ, ಉತ್ತರ ಹಾಗೂ ದಕ್ಷಿಣ ಕನ್ನಡ, ಕೊಡಗು, ಹಾಸನ, ಶಿವಮೊಗ್ಗ ಜಿಲ್ಲೆಗಳಲ್ಲಿ ಮಳೆ ಅತ್ಯಧಿಕ; ೨,೫೦೦ ರಿಂದ ೯,೦೦೦ ಮಿಲಿಮೀಟರ್; ಮಳೆ ಹಾಗೂ ಉಷ್ಣ ಹವಾಗುಣದಿಂದ ಅಸ್ತಿತ್ವಕ್ಕೆ ಬರುವ ಜೆಂಬಿಟ್ಟಿಗೆ ಮಣ್ಣು ಈ ಪ್ರದೇಶದ ವೈಶಿಷ್ಟ್ಯ. ರಾಜ್ಯದ ಬಹುತೇಕ ಅರಣ್ಯ ಪ್ರದೇಶ ಇರುವುದು ಇಲ್ಲಿಯೇ. ಕಣಿವೆಗಳ ತಗ್ಗುಗಳಲ್ಲಿ ಬತ್ತ, ಬೆಟ್ಟಗುಡ್ಡಗಳ ಇಳಿಜಾರುಗಳಲ್ಲಿ ಕಾಫಿ, ಅಡಿಕೆ ಯಂಥ ಪ್ಲಾಂಟೇಷನ್ ಬೆಳೆಗಳು ಸಮೃದ್ಧ. ಇಲ್ಲಿನ ವ್ಯವಸಾಯಕ್ಕೆ ಮಳೆಯೇ ಆಧಾರ.

೨೦೦೦ ದಿಂದ ೩೦೦೦ ಅಡಿ ಎತ್ತರದ ರಾಜ್ಯದ ದಕ್ಷಿಣ ಬಯಲು ಪ್ರದೇಶ, ಅಂದರೆ ಮೈಸೂರು, ಹಾಸನದ ಪೂರ್ವಾರ್ಧ, ಮಂಡ್ಯ, ಕೋಲಾರ, ಬೆಂಗಳೂರು, ತುಮಕೂರು, ಚಿತ್ರದುರ್ಗ ಜಿಲ್ಲೆಗಳಲ್ಲಿ ಮಳೆ ಪ್ರಮಾಣ ೬೦೦ ರಿಂದ ೧೦೦೦ ಮಿಲಿಮೀಟರ್; ಸುಲಭವಾಗಿ ನೀರು ಬಸಿಯುವ ಕೆಂಪು ಮರಳು ಮತ್ತು ಕೆಂಪು ಗೋಡುಮಣ್ಣುಗಳಿಂದ ಕೂಡಿದ ಈ ಪ್ರದೇಶ ದಲ್ಲಿ ಮಳೆ ಆಶ್ರಯದಲ್ಲಿ, ಹಾಗೂ ನೀರಾವರಿಯಲ್ಲಿ ಹಲವಾರು ಬೆಳೆಗಳನ್ನು ಬೆಳೆಯಬಹುದು.

ಬಳ್ಳಾರಿ, ರಾಯಚೂರು, ಗುಲ್ಬರ್ಗ, ಬಿಜಾಪುರ, ಬೆಳಗಾವಿಯ ಪೂರ್ವದ ಬಹುಭಾಗ, ಧಾರವಾಡ ಜಿಲ್ಲೆಗಳು, ರಾಜ್ಯದ ಉತ್ತರ ಶುಷ್ಕ ಪ್ರದೇಶಗಳು; ಮಳೆ ೫೦೦-೬೦೦ ಮಿಲಿಮೀಟರ್; ದಕ್ಷಿಣದಲ್ಲಿ ಕೆಂಪು ಮಣ್ಣು ಪ್ರಧಾನವಾದರೆ, ಈ ಉತ್ತರ ಭಾಗದಲ್ಲಿ ಫಲವದ್ಭರಿತ ಕಪ್ಪು ಮಣ್ಣುಗಳು ಮುಖ್ಯವಾದುವು. ಮಳೆಯಾಶ್ರಯದಲ್ಲಿ ಜೋಳ, ಹತ್ತಿ ಬೆಳೆಗಳು ಸಾಮಾನ್ಯ. ಇತ್ತೀಚಿನ ದಿನಗಳಲ್ಲಿ ತುಂಗಭದ್ರ, ಮಲಪ್ರಭಾ, ಘಟಪ್ರಭಾ, ಮೇಲ್ಭಾಗದ ಕೃಷ್ಣಾ ಇಂಥಾ ಬೃಹತ್ ಜಲಾಶಯಗಳ ನಿರ್ಮಾಣದ ಕಾರಣ ವಿಸ್ತಾರವಾದ ಭೂ ಪ್ರದೇಶಗಳು ನೀರಾವರಿ ಗೊಳಗಾಗುತ್ತಿವೆ. ಈ ಪ್ರದೇಶದ ಕಪ್ಪು ಮಣ್ಣುಗಳ ನೀರುಳಿಸಿಕೊಳ್ಳುವ ಶಕ್ತಿ ಅಪಾರ; ಖರೀಫ್ ಅಂದರೆ, ಜೂನ್-ಸೆಪ್ಟೆಂಬರ್ ತಿಂಗಳುಗಳಲ್ಲಿನ ಮಳೆಯಿಂದ ಭೂಮಿಯಲ್ಲುಳಿದ ತೇವ ರಬಿ, ಅಂದರೆ, ಸೆಪ್ಟೆಂಬರ್ ಅಂತ್ಯದಿಂದ-ಜನವರಿ ಕಾಲದ ಬೆಳೆಗಳನ್ನು ಆಗ ಮಾಡಲಾಗುತ್ತದೆ. ಇದರಿಂದ ಎದ್ದು ಕಾಣುವ ಅಂಶವೆಂದರೆ, ಮಳೆ ಅಥವಾ ಹರಿ ನೀರಾವರಿಯಿಂದ ಹೆಚ್ಚು ನೀರು ಭೂಮಿಯಲ್ಲಿ ಬಿದ್ದಾಗ ಅದು ಮಣ್ಣಿನೊಳಗೆ ಇಳಿದು ಬಸಿಯದೆ ಭೂಮಿ ಜವುಳಾಗು ತ್ತದೆ, ಬೆಳೆಗೆ ಅನಾನುಕೂಲ ಪರಿಸ್ಥಿತಿ ಉಂಟಾಗುತ್ತದೆ. ನಿಲು ನೀರಾವರಿ ಬೇಡುವಂಥ ಬತ್ತದ ಬೆಳೆ ಈ ಕಪ್ಪು ಭೂಮಿಗಳಿಗೆ ಸಾಧುವಲ್ಲ. ಕೇವಲ ಬೆಳೆಗಳ ನೀರಿನ ಅವಶ್ಯಕತೆ ಪೂರೈಸುವಷ್ಟೇ ನೀರನ್ನು ಭೂಮಿಗೆ ಕೊಡು ವಂಥ ನೀರಾವರಿ ತಂತ್ರಜ್ಞಾನ ಪ್ರಸಿದ್ಧಪಡಿಸುವ ದಿಸೆಯಲ್ಲಿ ಇನ್ನೂ ವ್ಯಾಪಕ ಕೆಲಸ ಆಗಬೇಕಾಗಿದೆ. ನೀರು ಬಸಿಯುವ ಸಾಮರ್ಥ್ಯವುಳ್ಳ ಕೆಂಪು ಭೂಮಿಗಳಲ್ಲಿನಂತೆ ಕಪ್ಪು ಭೂಮಿಗಳಲ್ಲಿ ನೀರು ಹರಿಸಿದರೆ, ಭೂಮಿ ಜೌಗಾಗಿ ಉಪ್ಪು-ಕ್ಷಾರವಾಗಿ, ಅನತಿ ದೂರದಲ್ಲಿ ಹಾನಿ ಶತಃಸಿದ್ಧ.

**ಮಣ್ಣು ಮತ್ತು ನೀರು**

ಇದುವರೆವಿಗೂ ಸ್ಥೂಲವಾಗಿ ವಿಚಾರ ಮಾಡಿದ ಮಳೆ-ಕೃಷಿ-ವಾಯುಗುಣ ಹಿನ್ನೆಲೆಯಲ್ಲಿ ರಾಜ್ಯದ ನೀರಿನ ಸಂಪತ್ಸಾಧನ ಹಾಗೂ ಅದನ್ನು ರಾಜ್ಯದ ಶ್ರೇಯೋಭಿ ವೃದ್ಧಿಗೆ ವಿವೇಚನೆಯಿಂದ ಬಳಸುವ ಬಗ್ಗೆ ಪರಿಶೀಲಿಸ ಬಹುದು. ಮಳೆ ನೀರು ಭೂಮಿಯ ಮೇಲೆ ಬಿದ್ದಾಗ ಮೇಲ್ಮಣ್ಣು ನೆನೆಯುತ್ತದೆ, ಒದ್ದೆಯಾಗುತ್ತದೆ. ನಂತರ ಹೆಚ್ಚಿನ ನೀರು ಒಳಗೆ ಇಳಿದು, ಅಂತರ್ಜಲ ಸೇರಿ, ಕ್ರಮೇಣ ಒರತೆಯಾಗಿ ಹಳ್ಳ ತೊರೆ, ನದಿಗಳಲ್ಲಿ ಕಾಣಿಸಿ ಕೊಳ್ಳುತ್ತದೆ. ಇದಾಗಬೇಕಾದರೆ, ಮಣ್ಣಿನ ಮೇಲ್ಮೈ ಸಡಿಲವಾಗಿ ಸ್ಪಂಜಿನೋಪಾದಿಯಲ್ಲಿ ಬಿದ್ದ ನೀರನ್ನು ಒಳ ಮೈಯ್ಯೊಳಗೆ ಎಳೆದುಕೊಳ್ಳುವ ಸ್ಥಿತಿಯಲ್ಲಿರಬೇಕು. ಸ್ವಾಭಾವಿಕ ಸಸ್ಯಗಳಿಂದ ಕೂಡಿದ ಕಾಡಿನಂಥ ಪ್ರದೇಶ ದಲ್ಲಿ ನೆಲದ ಮೇಲೆ ಉದುರೆಲೆ, ಬಳ್ಳಿ, ಪೊದೆ ಇವುಗಳ ಹೊದಿಕೆ ಇದ್ದು, ಬಿದ್ದ ನೀರು ಮೇಲೆ ಕೊಚ್ಚಿ ಹರಿಯದೆ ಒಳಗೆ ಇಳಿಯುವುದು ಸಾಧ್ಯ. ಮಣ್ಣಿನ ಕಣರಚನೆ ಉತ್ತಮವಾಗಿರುವುದರಿಂದ ಸಾಕಷ್ಟು ಮೊತ್ತದ ನೀರು ಮಣ್ಣಿನ ಸೂಕ್ಷ್ಮ ಕಣಾಂತರಗಳಲ್ಲಿ ಉಳಿದು, ಮಣ್ಣಿನ ತಂಪು ಅಥವಾ ತೇವ ಒಣ ಬೇಸಿಗೆಯಲ್ಲೂ ಆರುವು ದಿಲ್ಲ. ನಾವು ಆಗಲೇ ಕಂಡಂತೆ ಹೆಚ್ಚು ನೀರು ಅಂತ ರ್ಜಲದ ಮೂಲಕ ನಿಧಾನವಾಗಿ ನೀರಿನ ಪಾತ್ರಗಳನ್ನು ಸೇರಿ, ಹಳ್ಳ ತೊರೆ ನದಿಗಳು ಯಾವಾಗಲೂ ಬತ್ತುವುದಿಲ್ಲ.

**ಹರಿನೀರಿನ ಶೇಖರಣೆ**

ಮಳೆಗಾಲದಲ್ಲಿ ಸತತವಾಗಿ ಹೆಚ್ಚು ಮಳೆಯಾದಾಗ ಅದರ ಪ್ರಮಾಣ ಸ್ವಾಭಾವಿಕವಾಗಿ ಮಣ್ಣಿನ ಮೂಲಕ ಅಂತರ್ಜಲವನ್ನು ಸೇರುವುದಕ್ಕಿಂತ ಹೆಚ್ಚಾಗುತ್ತದೆ. ಅದು ಭೂಮಿಯ ಮೇಲ್ಮೈಯಲ್ಲಿ ಹರಿದು ನೇರವಾಗಿ ಹಳ್ಳಕೊಳ್ಳಗಳನ್ನು ಸೇರಿ ಅವು ತುಂಬಿ, ಉಕ್ಕಿ ಹರಿದು ಪ್ರವಾಹ ಉಂಟಾಗುತ್ತದೆ. ಒರತೆಯಿಂದ ಹಾಗೂ ಮಳೆಗಾಲದಲ್ಲಿ ಮೇಲ್ಮೈ ಹರಿನೀರನ್ನು ಕುಂಟೆ, ಕೆರೆ, ಜಲಾಶಯಗಳಲ್ಲಿ ಶೇಖರಿಸಿ ನೀರಾವರಿಗೆ ಬಳಸುವ ತಂತ್ರ ನಮ್ಮಲ್ಲಿ ಸಾವಿರಾರು ವರ್ಷಗಳಿಂದ ಪ್ರಚಲಿತ ವಾಗಿದೆ. ಇಂದಿಗೂ ಪ್ರತಿ ಹಳ್ಳಿಯಲ್ಲಿಯೂ ಇವು ಜನರ ದಿನನಿತ್ಯದ ಬಳಕೆಗೆ ಹಾಗೂ ಕೆಲವಷ್ಟು ಭೂಮಿಗೆ ನೀರಾವರಿಗೆ ಆಸರೆ. ಕಾವೇರಿ ಪಾತ್ರದ ಉದ್ದಕ್ಕೂ ನದಿಗೆ ಅಡ್ಡಲಾಗಿ ಅಣೆಕಟ್ಟೆಗಳನ್ನು ಕಟ್ಟಿ, ನೂರಾರು ಮೈ

ಕಾಲುವೆಗಳನ್ನು ನಿರ್ಮಿಸಿ, ಹತ್ತಾರು ಸಾವಿರ ಎಕರೆಗಳಿಗೆ ೭-೮ ಶತಮಾನಗಳಿಂದ ನೀರೊದಗಿಸಲಾಗುತ್ತಿದೆ. ವಿಜಯನಗರದ ಕಾಲದಲ್ಲಿ ನಿರ್ಮಿಸಿದ ಕಾಲುವೆ ನೀರಾವರಿ ವ್ಯವಸ್ಥೆ ಬಳ್ಳಾರಿ ಜಿಲ್ಲೆಯಲ್ಲಿ ಇಂದೂ ಅಸ್ತಿತ್ವದಲ್ಲಿದೆ.

**ರಾಜ್ಯದಲ್ಲಿ ನೀರಿನ ಸಂಪತ್ತು**

ನಮ್ಮ ರಾಜ್ಯದಲ್ಲಿ ಒದಗುವ ಮೇಲ್ಮೈ ಹರಿನೀರಿನ ಪ್ರಮಾಣ ಅಪಾರ. ಅದು ಒಟ್ಟು ೩೫೦೦ ಟಿಎಂಸಿಎಫ್‌ಟಿ (ಸಾವಿರ ದಶಲಕ್ಷ ಘನ ಅಡಿಗಳು) ಎಂದು ಅಂದಾಜು ಮಾಡಲಾಗಿದೆ. ಈ ಬೃಹತ್ ಮೊತ್ತದ ನೀರಿನ ಪ್ರಮಾಣ ಕಲ್ಪನೆಗೋಸ್ಕರ ಹೇಳುವುದಾದರೆ: ತುಂಗಭದ್ರಾ ಜಲಾಶಯದಲ್ಲಿನ ನೀರಿನ ಶೇಖರಣೆ ೧೩೦ ಟಿಎಂಸಿಎಫ್‌ಟಿ; ಅದರ ಆಯಕಟ್ಟು ಸುಮಾರು ೧೦ ಲಕ್ಷ ಎಕರೆಗಳು. ಅದರ ಪ್ರಮಾಣ ಈ ನೀರಿನ ಟಿಎಂಸಿಎಫ್‌ಟಿ ರಾಜ್ಯದ ವಿವಿಧ ಜಲಾನಯನ ಭೂಮಿಗಳಲ್ಲಿ ಹೀಗಿದೆ: ಕೃಷ್ಣಾ-೯೭೦, ಕಾವೇರಿ-೩೯೦, ಗೋದಾವರಿ-೫೦, ಉತ್ತರ ಪಿನಾಕಿನಿ, ಪಾಲಾರ್ ಇತ್ಯಾದಿ-೩೦. ಪಶ್ಚಿಮಾಭಿಮುಖವಾಗಿ ಹರಿಯುವ ನೀರು ೨೦೦೦. ಇಷ್ಟು ಅಪಾರ ಮೊತ್ತದ ಹರಿನೀರಿನಲ್ಲಿ ಪ್ರಸ್ತುತ ಎಲ್ಲ ಮೂಲಗಳು, ಅಂದರೆ ಕುಂಟೆ, ಕೆರೆ, ಮಧ್ಯಮ ಹಾಗೂ ಬೃಹತ್ ಜಲಾಶಯಗಳಿಂದ ಬಳಕೆಯಾಗುತ್ತಿರುವ ನೀರು ಸುಮಾರು ೭೦೦ ಟಿಎಂಸಿಎಫ್‌ಟಿಯಷ್ಟು ಇದ್ದೀತು. ಪಶ್ಚಿಮಾಭಿಮುಖವಾಗಿ ಘಟ್ಟ ಪ್ರದೇಶದಿಂದ ಅರಬ್ಬೀ ಸಮುದ್ರಕ್ಕೆ ಹರಿಯುವ ಸುಮಾರು ೨೦೦೦ ಟಿಎಂಸಿಎಫ್‌ಟಿ ನೀರು ಬಳಕೆಯಾಗದೆ ಹೋಗುವುದು ಹಾಗಿರಲಿ, ಅದರಿಂದ ಪ್ರತಿ ವರ್ಷ ತೀರ ಪ್ರದೇಶ ಪ್ರವಾಹಕ್ಕೀಡಾಗಿ ಅಪಾರ ಹಾನಿಯಾಗುತ್ತಿದೆ. ಪಶ್ಚಿಮ ಭಾಗದಲ್ಲಿರುವ ಪರ್ವತ ಪ್ರದೇಶಗಳಲ್ಲಿ ಬಿದ್ದು ಸಮುದ್ರದ ಪಾಲಾಗುವ ನೀರಿನ ಕೆಲ ಭಾಗವನ್ನಾದರೂ ಪೂರ್ವಕ್ಕೆ ಹರಿಸುವ ಚಿಂತನೆಯ (ಕೆ. ಸಿ. ನಾಯಕ್, ಬಿ.ವಿ. ವೆಂಕಟರಾವ್, ಜಿ. ವಿ. ಹಾವಣಗಿ ಮತ್ತು ಕೃಷ್ಣಮೂರ್ತಿ ೧೯೭೧, ಮೈಸೂರಿನಲ್ಲಿ ಕೃಷಿಗೆ ಅಧಿಕ ನೀರು, ಯು.ಎ.ಎಸ್., ಸಂಶೋಧನಾ ಶ್ರೇಣಿ ನಂ.೯) ರೂಪುರೇಷೆಗಳನ್ನು ಈಗ ೩೦ ವರ್ಷಗಳ ಹಿಂದೆಯೇ ಮಂಡಿಸಲಾಗಿತ್ತು. ಈ ವಿಷಯದ ಬಗ್ಗೆ ಸಂಬಂಧಪಟ್ಟ ಧುರೀಣರ ಗಮನ ಈಗಲಾದರೂ ಹರಿಯುವುದು ಉಚಿತ.

**ಅಂತರ್ಜಲ**

ರಾಜ್ಯದ ಅಂತರ್ಜಲ ಸಂಪನ್ಮೂಲದ ಬಗ್ಗೆಯೂ ಸಾಕಷ್ಟು ವಿಷಯ ಸಂಗ್ರಹಣೆಯಾಗಿದೆ. ಬಿದ್ದ ಮಳೆಯಲ್ಲಿ ಸುಮಾರು ೪೦೦ ಟಿಎಂಸಿಎಫ್‌ಟಿಯಷ್ಟು ಅಂತರ್ಜಲದ ಮೂಲಕ ಪರಿವರ್ತನೆಯಾಗುತ್ತದೆ ಎಂದು ಅಂದಾಜು ಮಾಡಲಾಗಿದೆ. ಸಾಗುವಳಿ ಯಾಗುತ್ತಿರುವ ಹಾಗೂ ಸಾಗುವಳಿಯಾಗದೆ ಇರುವ ಬಂಜರು ಮತ್ತಿತರ ಭೂಮಿಯನ್ನು ವಿವೇಚನೆಯಿಂದ ನಿರ್ವಹಿಸಿ ಬಿದ್ದ ಮಳೆನೀರು ಭೂಮಿಯ ಮೇಲೆ ಕೊಚ್ಚಿ ಪೋಲಾಗದೆ, ಆದಷ್ಟೂ ಭೂಮಿಯಲ್ಲಿ ಇಳಿದು ಒರತೆಯಾಗಿ ಕ್ರಮೇಣ ಅಂತರ್ಜಲವನ್ನು ಸೇರುವಂತಾದರೆ ಬೇಸಿಗೆಯಲ್ಲಿ ಬಾವಿಗಳು ಒಣಗದೆ ಹೆಚ್ಚು ನೀರು ಒದಗುವುದು ಸಾಧ್ಯ.

**ನೀರಿನ ಬಳಕೆಯಲ್ಲಿ ದಕ್ಷತೆ**

ಇವೆಲ್ಲಕ್ಕಿಂತ ಹೆಚ್ಚಾಗಿ, ಈಗ ನಮಗೆ ಇರುವ ನೀರಾವರಿ ಸೌಲಭ್ಯವನ್ನು ದಕ್ಷತೆಯಿಂದ ಬಳಸಿ ಹೆಚ್ಚು ಬೆಳೆ ತೆಗೆಯುವುದು ನಮ್ಮ ಮುಂದಿರುವ ಸವಾಲು. ನಮ್ಮ ಜನ ಬಾವಿ ನೀರನ್ನು ಬಹಳ ಎಚ್ಚರಿಕೆಯಿಂದ ಬಳಸುತ್ತಾರೆ. ಒದಗಿಸಿಕೊಳ್ಳುವ ಪ್ರತಿಯೊಂದು ಲೀಟರ್ ನೀರಿಗೂ ಅವರು ಪಡುವ ಶ್ರಮ ಹಾಗೂ ವೆಚ್ಚದ ಅರಿವು ಅವರಿಗಿದೆ. ಅದೇ, ಕೆರೆ ಅಥವಾ ಕಾಲುವೆ ನೀರಾದರೆ ಉಳಿದ ರೈತರ ಅವಶ್ಯಕತೆಯನ್ನು ಪರಿಗಣಿಸದೆ ಅಗತ್ಯಕ್ಕಿಂತ ಹೆಚ್ಚಾದ ನೀರನ್ನು ಬಳಸುವ ಪರಿಪಾಟ ಎಲ್ಲರಿಗೂ ಚಿರಪರಿಚಿತ. ಕಾಲುವೆಗಳಲ್ಲಿ ಸೋರಿಹೋಗುವ ನೀರು ಅಪಾರ. ಇದನ್ನು ತಪ್ಪಿಸಲು ಅವಕ್ಕೆ ಕಾಂಕ್ರೀಟ್ ಇಲ್ಲವೇ ಕಲ್ಲು ಚಪ್ಪಡಿ ಹಾಸುವ ಚಿಂತನೆ ನಡೆದಿದೆ.

ನೀರು ಬಂದ ತಕ್ಷಣ ಎಲ್ಲರಿಗೂ ಬತ್ತ ಬೆಳೆಯುವ ಗೀಳೇ. ಒಂದು ಎಕರೆ ಬತ್ತಕ್ಕೆ ಬೇಕಾದ ನೀರಿನಿಂದ ೪-೫ ಎಕರೆ ಅರೆ ನೀರಾವರಿ ಬೆಳೆಗಳನ್ನು ತೆಗೆದುಕೊಳ್ಳಬಹುದು. ಒಂದು ಕೆರೆ ಅಥವಾ ಜಲಾಶಯದಲ್ಲಿ ಶೇಖರಣೆಯಾದ ನೀರಿಗೆ ಅತ್ಯಂತ ಹೆಚ್ಚು ಪ್ರತಿಫಲ ಕೊಡುವ ಬೆಳೆ ಕಾರ್ಯಕ್ರಮ ನಿರೂಪಿತವಾಗಬೇಕು. ಇದು ಆಯಕಟ್ಟಿನ ಎಲ್ಲ ರೈತರ ಕಾರ್ಯಕ್ರಮವಾದರೆ, ದೇಶ ನೀರಾವರಿಗೆ ಹೂಡಿದ ಬಂಡವಾಳ ಸಾರ್ಥಕವಾಗುತ್ತದೆ.

ಆಕಾಶ ನೋಡಿಕೊಂಡು ವ್ಯವಸಾಯ ಮಾಡುವ ಮನೋಭಾವ ಹೋಗಬೇಕು. ಹಲವು ವರ್ಷಗಳಲ್ಲಿ ಮಳೆ ತೀರ ಕಡಿಮೆಯಾಗಬಹುದಾದರೂ ಅಥವಾ ಮಳೆ ಸ್ವಲ್ಪ ಹಿಂದು ಮುಂದಾದರೂ ಅದರ ಪ್ರಮಾಣ ಒಂದು ಸನ್ನಿವೇಶದಲ್ಲಿ ಹೆಚ್ಚು ಕಡಿಮೆ ಒಂದು ಮಟ್ಟದಲ್ಲೇ ಇರುತ್ತದೆ. ಜಾಣತನದಿಂದ ಮಣ್ಣಿನ ನೀರು ಹಾಗೂ ಬೆಳೆ ಧಾರಣಾ ಸಾಮರ್ಥ್ಯವನ್ನು ಅಂದರೆ, ಮಣ್ಣಿನ ಪರಿಸರವನ್ನು ಸುಧಾರಿಸಿ, ಆದಷ್ಟು ಮಟ್ಟದಲ್ಲಿ ಮಳೆಯ ಏರುಪೇರುಗಳನ್ನು ತಾಳಬಲ್ಲ ಬಹುವಾರ್ಷಿಕ ಬೆಳೆಗಳನ್ನು, ಅಲ್ಪಾವಧಿ ಬೆಳೆಗಳೊಟ್ಟಿಗೆ ಅಳವಡಿಸಿಕೊಂಡಲ್ಲಿ ಮಳೆಯಾಶ್ರಯದ ಬೇಸಾಯದಲ್ಲಿ ಬರವನ್ನು ಎದುರಿಸುವುದು ಬಹು ಮಟ್ಟಿಗೆ ಸಾಧ್ಯ. ಅದೇ ರೀತಿ, ಕೆರೆ ಜಲಾಶಯಗಳಲ್ಲಿ ಶೇಖರಿಸಿದ ನೀರನ್ನು ವಿವೇಚನೆಯಿಂದ ಬಳಸಿದಲ್ಲಿ ನೀರಿನ ಕೊರತೆಯಿಂದ ಆಗಬಹುದಾದ ಹಾನಿಯನ್ನು ತಪ್ಪಿಸಿಕೊಳ್ಳಬಹುದು ಅಥವಾ ತಗ್ಗಿಸಿಕೊಳ್ಳಬಹುದು. ಸಾಗುವಳಿಯಾದ ಹಾಗೂ ಸಾಗುವಳಿಯಾಗದ ಭೂಮಿಯ ಹದವರಿತ ನಿರ್ವಹಣೆಯಿಂದ ಮಳೆ ನೀರು ತಕ್ಷಣ ಕೊಚ್ಚಿ ಹಳ್ಳ, ತೊರೆ, ನದಿಗಳಿಗೆ ಧಾವಿಸಿ, ಉಕ್ಕಿ ಹರಿಯುವುದನ್ನು ತಪ್ಪಿಸಿ, ಅದು ಭೂಮಿಯೊಳಗೆ ಇಳಿದು ಒರತೆಯಾಗಿ ಬೇಸಗೆಯಲ್ಲಿ ನೀರಿನ ಪಾತ್ರಗಳು ಒಣಗುವುದನ್ನು ನಿವಾರಿಸಬಹುದು.

ಈ ಚಿಂತನೆ ಹಾಗೂ ಅದರ ಕಾರ್ಯಶೀಲ ಅನುಷ್ಠಾನ ದೇಶದ ಉದ್ದಗಲಕ್ಕೆ ಹರಡಿರುವ ಒಂದೆರಡು ಎಕರೆಯಂತಹ ತುಂಡು ಭೂಮಿಯನ್ನವಲಂಬಿಸಿ ಜೀವಿಸುತ್ತಿರುವ ಬಡ ರೈತ, ಅವನೊಟ್ಟಿನ ಕೃಷಿ ಕಾರ್ಮಿಕ ಮತ್ತು ಬಡಗಿ, ಕಮ್ಮಾರ, ಕುಂಬಾರರಂಥ ಅಪಾರ ಅಂದರೆ, ೬೦-೭೦ ಕೋಟಿ ಜನಸ್ತೋಮದ ಸುಧಾರಣೆಗೆ ಪ್ರಸ್ತುತ.

**ಪ್ರೊ|| ಬಿ.ವಿ. ವೆಂಕಟರಾವ್**
೭೮, ೩ನೇ ಕ್ರಾಸ್, ಗವಿಪುರ ಬಡಾವಣೆ
ಬೆಂಗಳೂರು-೫೬೦ ೦೧೯

## ಬಣ್ಣ

ಸಂಜೆಯ ಆಕಾಶದಲ್ಲಿ
ಕಾಮನಬಿಲ್ಲು ಹೆಣೆದುಕೊಂಡಂತೆ
ಇರಬೇಕಾದ್ದು ಇದು.
ಇಲ್ಲಿ ಇತ್ತು ಸಾಗರದ ನೀಲಿ
ನೆಲದ ಹಸಿರು
ಮಣ್ಣಿನ ಕಂದು ಕಪ್ಪು
ಹೂಗಳ ಹಣ್ಣುಗಳ ಹಳದಿ ಕೆಂಪು

ಬಣ್ಣವಿಲ್ಲದ ಬೀಜ ಮೊಳೆತು ಚಿಗುರಿ
ಗಿಡವಾಗಿ ಮರವಾಗಿ ಬದುಕಿಗೆ
ಬಣ್ಣ ನೀಡುವ ವೈಖರಿ



ಇಲ್ಲೊಂದು ಹೆಜ್ಜೆ ಇನ್ನೊಂದು ಆಕಾಶಕ್ಕೆ
ಮೂರನೆಯದಕ್ಕೆ ಬೇಡ ಜಾಗ.

ಚಿರತೆಗೂ ಜಿಂಕೆಗೂ ಒಂದೆ ಚುಕ್ಕಿ ಚಿತ್ರದ ದೇಹ
ಹುಲ್ಲು-ಮಾಂಸದ ರಕ್ತ ಒಂದೆ ಬಣ್ಣ.

ಪಿಚಕಾರಿಯಲ್ಲೆರಚಿದರೂ ಏನೋ ಚೆಂದ
ಬಣ್ಣದ ಬದುಕಿನಲ್ಲೂ ನಂದದ ಆನಂದ.

ಏಳು ಬಣ್ಣ ಸೇರಿ ಬಿಳಿಯಾಗಬೇಕಾದ್ದು
ಎಲೆಯಡಿಕೆಯುಗುಳಿದಂತೆ ಯಾಕೆ ಹೀಗೆ ?
ಒಂದೆ ಗೂಡೊಳಗೇಕೆ ಕಾಗೆ ಗೂಗೆ ?

**ಬಾಲಸುಬ್ರಹ್ಮಣ್ಯ ಕಂಜರ್ಪಣೆ**
'ಸಿರಿ' ಬ್ರಾಹ್ಮಿನ್ ವ್ಯಾಲಿ, ಮಡಿಕೇರಿ - ೫೭೧ ೨೦೧
ಕೊಡಗು ಜಿಲ್ಲೆ, ಕರ್ನಾಟಕ

# ತಮ್ಮ ಹೇಳಿದ ಪುರಾಣವು...

ಅರವಿಂದ ಚೊಕ್ಕಾಡಿ

**ಮೊ**ನ್ನೆ ಮೊನ್ನೆ ನನ್ನೂರಿಗೆ ಹೋಗಿದ್ದಾಗ ಸಿಕ್ಕರು ಶ್ರೀ ಸ್ವಾಮಿಯವರು. ಬಸ್ ಸ್ಟ್ಯಾಂಡ್‌ನಿಂದ ಲಗ್ಗೇಜು ಹೊತ್ತುಕೊಂಡು ಮನೆಯ ಕಡೆ ಹೊರಟಿದ್ದೆ. ಹಿಂದಿನಿಂದ ''ಹೋಯ್....ಮಹಾರಾಯ'' ಎಂಬ ಕೂಗು ಕೇಳಿಸಿತು. ಹಿಂತಿರುಗಿ ನೋಡಿದರೆ ಶ್ರೀ ಸ್ವಾಮಿಯವರು. ಏಕೋ ಅವರನ್ನು ನೋಡುತ್ತಲೇ ತಲೆ ಬಾಗಿತು. ಕಣ್ಣುಗಳು ಕೃತಜ್ಞತೆ ಸೂಚಿಸತೊಡಗಿದವು. ಆದರೆ ಏನೋ ವೇದನೆ. ಶ್ರೀ ಸ್ವಾಮಿಯವರು ಇಳಿದುಹೋಗಿದ್ದರು. ಒಂದು ಕಾಲಕ್ಕೆ ಸಮಾಜ ಸೇವಕರಾಗಿ ಶಾಲೆ, ಆಸ್ಪತ್ರೆ, ಗ್ರಂಥಾಲಯಗಳನ್ನು ನಮ್ಮ ಊರಿಗೆ ಒದಗಿಸಿಕೊಟ್ಟ ಧೀಮಂತ ಚೇತನ ಅವರು. ನನ್ನ ಬದುಕು ಇನ್ನೇನು ಮುಳುಗಿತು ಎನ್ನುವಷ್ಟರಲ್ಲಿ ಅದನ್ನು ಹಿಡಿದೆತ್ತಿ ನನಗೊಂದು ಬದುಕು ಕೊಟ್ಟವರವರು. ನನ್ನೂರಿನಿಂದ ಬಂದ ಮೇಲೆ ಈ ತನಕ ಅವರನ್ನು ನೋಡಿಲ್ಲ. ಕೇವಲ ಪತ್ರ ವ್ಯವಹಾರವಷ್ಟೇ. ಅದೂ ಕೆಲವು ದಿನಗಳು ಮಾತ್ರ. ಆ ನಂತರ ಅವರ ಪತ್ರಗಳೆಲ್ಲವೂ ಮಹಾಸ್ವಾಮಿಯವರ ಭೇಟಿಗೆ ನನ್ನನ್ನು ಆಹ್ವಾನಿಸುವ ಕರೆ ಪತ್ರಗಳಷ್ಟೇ ಆಗಿದ್ದವು. ಕೊನೆಗೆ ಪತ್ರ ಬರೆಯುವುದನ್ನೇ ನಿಲ್ಲಿಸಿಬಿಟ್ಟಿದ್ದೆ. ಯಾವತ್ತಾದರೂ ನನ್ನ ಹಳೆಯ ಮಿತ್ರರ ಭೇಟಿಯಾದಾಗ ಅವರ ಬಗ್ಗೆ ವರದಿಗಳು ಮಾತ್ರ ಸಿಗುತ್ತಿದ್ದವು. ಅದೆಲ್ಲವೂ ಅವರನ್ನು ಅರೆಹುಚ್ಚನೆಂಬಂತೆ ಚಿತ್ರಿಸುತ್ತಿದ್ದವು. ಇಂದು ಆ ವ್ಯಕ್ತಿ ನನಗೆ ಕಾಣ ಸಿಕ್ಕಿದ್ದಾರೆ. ಅದು ನನ್ನ ಪರಮ ಭಾಗ್ಯ !

ಶ್ರೀ ಸ್ವಾಮಿಯವರು ಹತ್ತಿರ ಬಂದದ್ದೇ ತಡ ಮಾತಿಗೆ ಪ್ರಾರಂಭಿಸಿದರು. ''ಹೇಗಿದ್ದೀಯಾ ಮಗು ? ಹೆಂಡತಿ ಮಕ್ಕಳು ಹೇಗಿದ್ದಾರೆ ? ದೊಡ್ಡವಳಿಗೆ ಮದುವೆ ಮಾಡಿದಿಯಾ ? ಚಿಕ್ಕವನಿಗೆ ಮೆಡಿಕಲು ಸೀಟು ಸಿಕ್ಕಿತಾ ಇಲ್ಲ ಇಂಜಿನಿಯರಿಂಗೋ ?'' ಎಂದು ವಿಚಾರಿಸಲು ಪ್ರಾರಂಭಿಸಿದರು. ಒಂದು ಕ್ಷಣ ನನ್ನ ಮನಸ್ಸೇ ನನಗೆ ಛೀಮಾರಿ ಹಾಕಿತು. ಇಂಥ ಸಹೃದಯದ ಮನುಷ್ಯನನ್ನು ಅರೆಹುಚ್ಚನಾಗಿದ್ದಾನೆ ಎಂದುಕೊಂಡಿದ್ದೇನಲ್ಲಾ ? ನಾನೆಂಥ ಮೂರ್ಖ ಎಂದುಕೊಂಡೆ. ಆದರೆ ಆ ಭಾವನೆ ಬಹಳ ಹೊತ್ತು ಉಳಿಯಲಿಲ್ಲ. ''ನಾನು ಎಂದರೆ ಯಾರು ?'' ಎನ್ನುವ ಪ್ರಶ್ನೆಯ ಮೂಲಕ ನನ್ನನ್ನು ಕಾಡತೊಡಗಿದರು. ಇದಕ್ಕೇನು ಉತ್ತರ ಹೇಳಲಿ ? ಬಹಳ ಯೋಚಿಸಿ ಉತ್ತರಿಸಿದೆ, ''ಯಾವುದು ನೀನಲ್ಲವೋ ಅದೇ ನಾನು'' ಎಂದೆ. ''ಇದೇನು ಹುಚ್ಚು ಮಾತಾಡುತ್ತೀಯಾ ? ನಾನೇ ಇಲ್ಲದ ಮೇಲೆ ಇನ್ನು ನೀನೆಲ್ಲಿಂದ ಬರಬೇಕು ? ಬಿಡು, ನಿನ್ನದೆಲ್ಲವೂ ಭ್ರಮೆ, ನಿಜವಾಗಿಯೂ ಇಲ್ಲಿ ನಾನೂ ಇಲ್ಲ, ನೀನೂ ಇಲ್ಲ. ಸತ್ಯ ಹೇಳಬೇಕೆಂದರೆ ನನ್ನ ಮಕ್ಕಳ ತಂದೆ ನಾನಲ್ಲ'' ಎಂದುಬಿಟ್ಟರು ! ಏಕೋ ನನ್ನ ತಲೆಯೆಲ್ಲಾ ಕೆಟ್ಟುಹೋಗುವಂತಾಯಿತು. ''ನೀವು ಹೇಳುವುದೆಲ್ಲವೂ ನನಗರ್ಥವಾಗುವುದಿಲ್ಲ. ನಾನು ಪಾಮರ'' ಎಂದೆ. ಈಗ ಶ್ರೀ ಸ್ವಾಮಿ ನನ್ನನ್ನು ಬಹಳವಾಗಿ ಮೆಚ್ಚಿಕೊಂಡರು. ''ನಿನಗೆ ಅರ್ಥವಾಗದಿರುವುದಕ್ಕೆ ಕಾರಣ ನಿನ್ನನ್ನು ಆವರಿಸಿರುವ ಮಾಯೆ. ಅದನ್ನು ಕಿತ್ತೊಗೆಯ ಬಲ್ಲವರು ಮಹಾಸ್ವಾಮಿಗಳು. ಅಲ್ಲಿಗೆ ಬಾ ಎಂದು ಎಷ್ಟು ಬಾರಿ ಕರೆದರೂ ನಿನ್ನಷ್ಟಕ್ಕೆ ನೀನು'' ಎಂದು ಹಂಗಿಸಿದರು. ಇದೀಗ ಪಾರಾಗುವುದಕ್ಕೆ ಅವಕಾಶ ಒದಗಿತೆಂದುಕೊಂಡೆ. ''ನಾನಿಂದು ಇಲ್ಲಿಗೆ ಬಂದಿರುವುದೇ ಮಹಾಸ್ವಾಮಿಗಳ ದರ್ಶನ ಭಾಗ್ಯ ಪಡೆಯುವುದಕ್ಕೆ. ಇಂದೇಕೋ ಪ್ರಯಾಣದಿಂದ ಆಯಾಸವಾಗಿದೆ. ನಾಳೆ ಮುಂಜಾನೆ ನಿಮ್ಮನ್ನು ಕಾಣುತ್ತೇನೆ'' ಎಂದೆ. ಶ್ರೀ ಸ್ವಾಮಿಯವರ ಮುಖದ ಮೇಲೊಂದು ವಿಜಯದ ನಗೆ. ''ಸರಿ ನಾಳೆ ಬಾ, ನನಗೀಗ ಬಹುಮುಖ್ಯ ಕೆಲಸವಿದೆ'' ಎನ್ನುತ್ತಾ ಹೊರಟೇಬಿಟ್ಟರು. ಕೆಳಗಿಟ್ಟ ಲಗ್ಗೇಜುಗಳನ್ನು ಹೆಗಲಿಗೇರಿಸುವಷ್ಟರಲ್ಲಿ ಶ್ರೀ ಸ್ವಾಮಿ ಕರಿಮರದ ಕೆಳಗಿನ ಬಿಳಿ ಹಾಲಿನ ಬಳಿಗೆ ತಲುಪಿದ್ದರು.

ಮನೆಗೆ ತಲುಪಿದೆ. ತಮ್ಮನ ಮಕ್ಕಳು 'ದೊಡ್ಡಪ್ಪ' ಎನ್ನುತ್ತಾ ಓಡೋಡಿ ಬಂದವು. ನಾದಿನಿ ಮುಗುಳ್ನಗುತ್ತಾ ನಿಂತಿದ್ದಳು. ನನ್ನ ಮುಖವನ್ನು ಕಂಡೊಡನೆ ಮುಗುಳ್ನಗು ಮಾಯವಾಗಿ ವ್ಯಂಗ್ಯ ಲಾಸ್ಯವಾಡಿತು. ''ಶ್ರೀ ಸ್ವಾಮಿಯವರ ದರ್ಶನವಾಯಿತೇನು ?'' ಎಂದಳು. ಮೊದಲೇ ಹ್ಯಾಪಮೋರೆಯಾಗಿದ್ದ ನನ್ನ ಮುಖ ಇನ್ನಷ್ಟ ಹ್ಯಾಪವಾಯಿತು. ''ಶ್ರೀ ಸ್ವಾಮಿಯವರ ದರ್ಶನವಾದರೆ ಇವಳೇಕೆ ವ್ಯಂಗ್ಯ ಮಾತಾಡಬೇಕು ? ಅಷ್ಟಕ್ಕೂ ಶ್ರೀ ಸ್ವಾಮಿಯವರನ್ನು ಕಂಡದ್ದು ಇವಳಿಗೆ ಹೇಗೆ ತಿಳಿಯಿತು ? ನನ್ನ ಹ್ಯಾಪ ಮೋರೆಯಿಂದಿರಬಹುದೇನೋ'' ಎಂದೆಲ್ಲ ಪ್ರಶ್ನೆಗಳು ಕಾಡತೊಡಗಿದವು. ಏನಾದರಾಗಲಿ ಶ್ರೀ ಸ್ವಾಮಿ ಅವರ ಬಗ್ಗೆ ನಾನು ಕೇಳಿದ ವರದಿಗಳ ಸತ್ಯಾಸತ್ಯತೆಯನ್ನು ತಿಳಿದೇಬಿಡಬೇಕೆಂದುಕೊಂಡೆ. ಆದರೆ ಆಕೆಯಾದರೋ ''ಅದನ್ನು ಇವರ ಹತ್ತಿರವೇ ಕೇಳಿ'' ಎಂದುಬಿಟ್ಟಳು. ಸಂಜೆಯಾಗುವ ಹೊತ್ತಿಗೆ ತಮ್ಮ ಬಂದ. ಉಭಯ ಕುಶಲೋಪರಿ ನನಗೆ ಬೇಕಾಗಿರಲಿಲ್ಲ. ನೇರವಾಗಿ ಶ್ರೀ ಸ್ವಾಮಿ ಅವರ ವೃತ್ತಾಂತವನ್ನೇ ಕೇಳಿದೆ. ಅವನು ಬಿಚ್ಚಿಟ್ಟ ಪುರಾಣವನ್ನು ನಿಮಗೂ ಹೇಳುತ್ತಿದ್ದೇನೆ.

''ನೋಡಣ್ಣಾ, ನೀನು ಹೋಗುವಾಗ ಶ್ರೀ ಸ್ವಾಮಿಯವರು ಊರಿಗೆ ಉಪಕಾರಿಯಾದ ಯೋಗ್ಯ ವ್ಯಕ್ತಿಯಾಗಿದ್ದರೆಂಬುದು ನಿನಗೂ ಗೊತ್ತು. ಅವರನ್ನು ಕಂಡಾಗ ಹಸುರೆಲೆಗಳು ನಗುತ್ತಾ ಸ್ವಾಗತಿಸುತ್ತಿದ್ದವು. ನಮ್ಮೂರಿನ ಕೆರೆ ಅಂದು ತುಂಬಿ ತುಳುಕುತ್ತಿತ್ತು. ದೊಣ್ಣೆ, ಬೆಲ್ಟು, ಸೈಕಲ್ ಚೈನುಗಳು ಕಸದ ರಾಶಿ ಸೇರಿದ್ದವು. ಅವರ ಗಂಭೀರ ನಡಿಗೆಯ ಸದ್ದು ಕೇಳಿದರೆ ಸಾಕು ಈಚಲು ಮರ ದೂರ ಓಡುತ್ತಿತ್ತು. ಮೂಗುತಿಗಳನ್ನಂತೂ ಅವರೆಂದೂ ಹತ್ತಿರ ಸೇರಿಸಿದವರಲ್ಲ. ಹೀಗಿದ್ದ ಊರಿಗೆ ಮಹಾ ಸ್ವಾಮಿಗಳ ಆಗಮನವಾಯಿತು. ಅದೇನು ದುರದೃಷ್ಟವೋ ಆ ವರ್ಷ ಊರಿಗೆ ಮಳೆಯಾಗಲಿಲ್ಲ. ಅದರಿಂದ ಅತಿ ಹೆಚ್ಚು ಚಿಂತೆಗೊಳಗಾದವರೆಂದರೆ ಶ್ರೀ ಸ್ವಾಮಿಗಳು. ಅವರ ಸ್ವಭಾವಕ್ಕೆ ಅದು ಸಹಜವಾದುದೇ ಎಂಬುದು ನಿನಗೂ ಗೊತ್ತಿದೆ. ಹೀಗೆ ಶ್ರೀ ಸ್ವಾಮಿ ಚಿಂತಿತರಾಗಿದ್ದಾಗ ಒಂದು ದಿನ ಮಹಾಸ್ವಾಮಿಗಳ ಭೇಟಿಯಾಯಿತು. ಮಹಾಸ್ವಾಮಿಯವರು ಮಳೆ ಬರಿಸುವುದಕ್ಕೆ ಹೊಸ ಒಂದು ಉಪಾಯ ಸೂಚಿಸಿದರು. ಅದೇನೆಂದರೆ ಅಕ್ಕಿಯನ್ನು ನೀರಿನಲ್ಲಿ ನೆನೆಯಿಸಿ ಬೇಯಿಸಿ ಎಣ್ಣೆಯಲ್ಲಿ ಹುರಿದು ರಾಶಿ ಮಾಡಿ ಸೀಮೆಎಣ್ಣೆ ಸುರಿದು ಬೆಂಕಿ ಹಚ್ಚುವುದು ! ಹೀಗೆ ಅಕ್ಕಿ ಸುಟ್ಟು ಹೋಗುವಾಗ ಅದರಿಂದ ವಿಶೇಷವಾದ ಹೊಗೆ ಬಂದು ಅದು ಆಕಾಶಕ್ಕೇರಿ ಮೋಡವನ್ನು ಕರಗಿಸಿ ಮಳೆ ತರಿಸುತ್ತದೆ ! ಸರಿ, ನಮ್ಮ ಶ್ರೀ ಸ್ವಾಮಿಯವರು ಶತಾಯಗತಾಯ ಮಳೆ ತರಿಸುವುದಕ್ಕೆ ಸಿದ್ಧರಾದರು. ಊರಿನ ಎಲ್ಲರೂ ಒಂದೊಂದು ಕಿಲೋ ಅಕ್ಕಿಯನ್ನು ಶ್ರೀ ಸ್ವಾಮಿಯವರಿಗೆ ತಲುಪಿಸುವಂತೆ ಕೇಳಿಕೊಳ್ಳಲಾಯಿತು. ನಾನೂ ಒಂದು ಕಿಲೋ ಕಳೆದುಕೊಂಡೆನೆನ್ನು. ಎಷ್ಟಾದರೂ ಸಮುದಾಯದ ಉದ್ಧಾರವಲ್ಲವೇ ? ಹೀಗೆ ೩೦೦-೪೦೦ ಕಿಲೋ ಅಕ್ಕಿ ಸಂಗ್ರಹಿಸಿ ಅದಕ್ಕೆ ಬೆಂಕಿ ಕೊಡಲಾಯಿತು. ಅದೇನೋ, ಜುಲೈ ತಿಂಗಳ ಮಧ್ಯಭಾಗದಲ್ಲಿ ಅಕ್ಕಿ ಸುಡುವ ಕಾರ್ಯಕ್ರಮ ಇಟ್ಟುಕೊಳ್ಳಲಾಯಿತು. ಅಕ್ಕಿ ಸುಟ್ಟವೋ



ಮಳೆ ಮುಸಲಧಾರೆಯಾಗಿ ಸುರಿಯಲು ಆರಂಭವಾಯಿತು. ಕೆರೆ-ಕೊಳ್ಳಗಳು ತುಂಬಿ ತುಳುಕಾಡಿದವು. ಅಂತೂ ಊರು ನೆಮ್ಮದಿಯ ಉಸಿರುಬಿಟ್ಟಿತು.

''ಅಲ್ಲಿಂದ ಶುರುವಾಯಿತು ನೋಡು, ಶ್ರೀ ಸ್ವಾಮಿಯವರ ದೇಶೋದ್ಧಾರದ ಕಾರ್ಯ. ಅವರು ಹೊಸ ಯೋಜನೆಯೊಂದನ್ನು ಕಾರ್ಯಗತಗೊಳಿಸುವುದಕ್ಕೆ ಸಿದ್ಧರಾದರು. ಎಲ್ಲೆಲ್ಲಿ ಮಳೆ ಬರುವುದಿಲ್ಲವೋ ಆ ಊರಿನವರು ತಮಗೆ ತಿಳಿಸಬೇಕೆಂದು ಪತ್ರಿಕಾ ಪ್ರಕಟಣೆ ಕೊಟ್ಟುಬಿಟ್ಟರು. ಆದರೆ ಎಲ್ಲ ಊರುಗಳಲ್ಲಿಯೂ ಸಾಕಷ್ಟು ಅಕ್ಕಿ ಸಂಗ್ರಹವಾಗದೆ ಮಳೆ ಬರಲಿಲ್ಲ. ಈಗ ಶ್ರೀಸ್ವಾಮಿಯವರ ಕಣ್ಣು ದೂರದ ರಾಜಸ್ಥಾನದ ಮರುಭೂಮಿಯತ್ತ. ಅಲ್ಲೂ ಮಳೆ ತರಿಸುವುದಕ್ಕೆ ಕಂಕಣಬದ್ಧರಾದರು. ಮರುಭೂಮಿಯಲ್ಲಿ ಅಕ್ಕಿ ಸಂಗ್ರಹಣೆ ಕಷ್ಟವಾದದ್ದರಿಂದ ಟನ್‌ಗಟ್ಟಲೆ ಅಕ್ಕಿಯನ್ನು ತಾವೇ ಕೊಂಡೊಯ್ದು ಸುಟ್ಟು ಬಂದರು. ಆದರೇನು ? ಮರುಭೂಮಿಗೆ ಮಳೆ ಬರಲಿಲ್ಲ! ಶ್ರೀ ಸ್ವಾಮಿಯವರಿಗೋ ತಳಮಳ. ಮಹಾಸ್ವಾಮಿಯವರನ್ನು ನೇರ ಭೇಟಿಯಾಗಿ ತಮ್ಮ ತಳಮಳವನ್ನು ಹೇಳಿಕೊಂಡರು. ಅವರು ತಳಮಳವನ್ನು ನಿವಾರಿಸಿದರು: 'ಮಳೆ ಬಂದೇ ಬರುತ್ತದೆ. ನೀನು ಮಾಡಿದ ಕಾರ್ಯ ಎಂದೂ ನಿರರ್ಥಕವಾಗುವುದಿಲ್ಲ. ಆದರೆ ಅದಕ್ಕೆ ಕಾಲ ಕೂಡಿಬರಬೇಕು. ತಿಂಗಳುಗಳು ಬೇಕಾಗಬಹುದು, ವರ್ಷಗಳು ಬೇಕಾಗಬಹುದು, ಶತಮಾನಗಳು ಬೇಕಾಗಬಹುದು ಅಥವಾ ಸಹಸ್ರಮಾನಗಳೇ ಬೇಕಾಗಬಹುದು. ಎಂದಾದರೊಂದು ದಿನ ಮಳೆ ಬಂದೇ ಬರುತ್ತದೆ. ಅಷ್ಟಕ್ಕೂ ನೀನು ಇಷ್ಟೆಲ್ಲವನ್ನೂ ಮಾಡುವುದು ಯಾಕಾಗಿ ? ಯಾರಿಗಾಗಿ ? ಇಲ್ಲಿ ನಾನು ಎಂದರೆ ಯಾರು ? ನಾನೆಂಬುದು ಇಲ್ಲ. ನೀನೆಂಬುದೂ ಇಲ್ಲ. ಮಳೆ-ಬೆಳೆ-ಬದುಕು ಎಲ್ಲವೂ ಮಾಯೆ !' ಎಂದರು. ಈಗ ಶ್ರೀ ಸ್ವಾಮಿ ಯವರ ಚಿಂತೆ ನಿವಾರಣೆಯಾಯಿತು. ಅಲ್ಲಿಂದ ಮುಂದೆ ಅವರು ಮಹಾಸ್ವಾಮಿಯವರ ಅನುಯಾಯಿಯಾದರು. ಇದೀಗ ಶ್ರೀ ಸ್ವಾಮಿ ಸಕಲ ಜೀವಿಗಳ ಆರಾಧಕರೆನಿಸಿಕೊಂಡರು. ಅದಕ್ಕೂ ಮಹಾಸ್ವಾಮಿಯವರೇ ಮಾರ್ಗದರ್ಶಿ. ಅದ್ಭುತ ಶಕ್ತಿ ಪಡೆದುಕೊಂಡಿದ್ದ ಮಹಾಸ್ವಾಮಿಯವರ ಆರಾಧನೆಯಾದರೋ ಸಲ್ಲುತ್ತಿದ್ದುದು ಒಣ ಮೆಣಸಿನ ಕಾಯಿಗೆ ! ಶ್ರೀ ಸ್ವಾಮಿ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಮೆಣಸಿನ ಬೀಜವನ್ನು ಆರಾಧಿಸತೊಡಗಿದರು. ಅದರಿಂದಲೇ ಅದ್ಭುತ ಶಕ್ತಿ ಪಡೆದುಕೊಂಡರು. ನೀರಿನ ಮೇಲೆ ನಡೆಯತೊಡಗಿದರು. ಮರದ ಮೇಲಿನ ಎಲೆಗಳ ಮೇಲೆ ನಾಟ್ಯವಾಡತೊಡಗಿದರು.




''ಅಂಥ ಶಕ್ತಿಯೂ ನಷ್ಟವಾಗುವ ಕಾಲವೊಂದು ಬಂದುಬಿಟ್ಟಿತು. ಅದು ಶ್ರೀಸ್ವಾಮಿಯವರ ಸಾಧನೆಯ ಮೊದ ಮೊದಲಿನ ಕಾಲ. ಊರಿನ ಜಂಜಾಟವನ್ನಿನ್ನೂ ಪೂರ್ತಿಯಾಗಿ ಬಿಟ್ಟಿರಲಿಲ್ಲ. ಊರಿನ ಉದ್ಧಾರಕ್ಕಾಗಿ ಒಂದು ಸುಸಜ್ಜಿತ ಕಾಲೇಜನ್ನು ಕಟ್ಟಿಸಿದ ಶ್ರೀ ಸ್ವಾಮಿ ಉದ್ಘಾಟನೆಗೆಂದು ಮಹಾಸ್ವಾಮಿಯವರನ್ನು ಕರೆದಿದ್ದರು. ಆಗ ಅವರಾಡಿದ ಒಂದು ಮಾತು ಅವರ ಶಕ್ತಿಯನ್ನೆಲ್ಲಾ ಕಳೆದುಕೊಳ್ಳುವಂತೆ ಮಾಡಿಬಿಟ್ಟಿತು. 'ಮೆಣಸಿನ ಆರಾಧಕರಾದ ಮಹಾಸ್ವಾಮಿಗಳು ಬೀಜ ಆರಾಧಕರಾದ ನಮ್ಮಲ್ಲಿಗೆ ಬಂದುದು ಹಿರಿಯ ಕಿರಿಯರನ್ನು ತಾನೇ ಹುಡುಕಿಕೊಂಡು ಬಂದಂತಾಯಿತು' ಎಂದರು. ಅದು ಮಾತ್ರ ಮಹಾಸ್ವಾಮಿಯವರಿಗೆ ಸಮ್ಮತವೆನಿಸಲಿಲ್ಲ. ಅವರು ಮಾತಾಡಿ 'ಬೀಜ ಕಾಯಿಯನ್ನು ಹುಡುಕಿಕೊಂಡು ಅದರ ಜೊತೆ ಹೋಗಬೇಕೇ ಹೊರತು ಕಾಯಿ ಬೀಜದ ಬಳಿ ಬರುವುದಿಲ್ಲ' ಎಂದುಬಿಟ್ಟರು. ಅವರ ಮಾತಿಗೆ ಎಂಥ ಶಕ್ತಿ ಇತ್ತೆಂದರೆ ಮರುದಿನ ಶ್ರೀ ಸ್ವಾಮಿ ಎಲೆಗಳ ಮೇಲೆ ನರ್ತಿಸುವುದಕ್ಕೆ ಸಿದ್ಧರಾದರು. ಊರು-ಪರವೂರುಗಳ ಜನರನೇಕರು ಈ ಅದ್ಭುತವನ್ನು ಕಣ್ಣಾರೆ ಕಾಣುವುದಕ್ಕಾಗಿ ಕಾದಿದ್ದರು. ಆದರೇನು ? ಶ್ರೀ ಸ್ವಾಮಿ ಒಂದು ಸಣ್ಣ ರೆಂಬೆಯ ಮೇಲೆ ಕಾಲಿರಿಸಿದರೋ ಇಲ್ಲವೋ ದೊಪ್ಪೆಂದು ಕುಸಿದುಬಿದ್ದರು. ಎಡಗೈ ಮೂಳೆ ಮುರಿದುಕೊಂಡಿದ್ದರು. ಶಕ್ತಿ ಕಳೆದುಕೊಂಡಿದ್ದರು. 'ಬೀಜ' ಕಾಯಿಯನ್ನು ಹುಡುಕಿಕೊಂಡು ಅದರ ಜೊತೆ ಹೊರಟುಹೋಗಿತ್ತು !

''ಶ್ರೀ ಸ್ವಾಮಿಯವರ ಮುರಿದ ಮೂಳೆಯನ್ನು ಕೂಡಿಸುವುದಕ್ಕೆ ನಮ್ಮೂರಿನ ಡಾಕ್ಟರುಗಳಿಗೆ ಸಾಧ್ಯವಾಗದೆ ಬೊಂಬಾಯಿಯಿಂದ ತಜ್ಞರನ್ನು ಕರೆಸಲಾಯಿತು. ಆದರೆ ಮೂಳೆ ನೋವು ಅವರನ್ನು ಬಾಧಿಸಲಿಲ್ಲ. ತಾವೇನು ಅಚಾತುರ್ಯವೆಸಗಿದರೋ ಅದಕ್ಕಾಗಿ ನೊಂದು ಬೆಂದು ಮಹಾಸ್ವಾಮಿಯವರ ಕ್ಷಮೆ ಬೇಡಿದರು. ಕ್ಷಮೆಯೇನೋ ಸಿಕ್ಕಿತು. ಆದರೆ ಕಳೆದುಕೊಂಡ ಶಕ್ತಿ ಮತ್ತೆ ಬರಲಿಲ್ಲ. ಈ ನಡುವೆ ಶ್ರೀ ಸ್ವಾಮಿ ಒಂದು ಉದ್ಯಾನ ನಿರ್ಮಿಸಿದರು. ಅದರ ಉದ್ಘಾಟನೆಗೆ ಮಹಾಸ್ವಾಮಿಯವರನ್ನೇ ಕರೆಸಿದರು. ಕಳೆದ ಕಹಿ ನೆನಪು ಅವರಲ್ಲಿನ್ನೂ ಹಸಿರಾಗಿತ್ತೆನಿಸುತ್ತದೆ. ನಾವೆಲ್ಲ ಕಾದು ಕಾದು ಸುಸ್ತಾದೆವೇ ಹೊರತು ಮಹಾಸ್ವಾಮಿಯವರ ಟಾಟಾಸಫಾರಿ ಕಾರು ಪ್ರತ್ಯಕ್ಷವಾಗಲೇ ಇಲ್ಲ. ನಮಗೆ ಆ ಭಾಗ್ಯವಿಲ್ಲವೆಂದು ಶ್ರೀ ಸ್ವಾಮಿ ಅಪ್ಪಣೆ ಕೊಡಿಸಿಯೇಬಿಟ್ಟರು.

''ಅಲ್ಲಿಂದ ಮುಂದೆ ಊರಿನ ಚಿಂತೆ ಶ್ರೀ ಸ್ವಾಮಿಯವರಿಗಿಲ್ಲ. ಕಳೆದುಹೋದ ತಮ್ಮ ಶಕ್ತಿಯ ಬಗ್ಗೆ ದಿನದಿನವೂ ಕೊರಗುತ್ತಿದ್ದಾರೆ. ಆ ಕೊರಗನ್ನು ನಿವಾರಿಸಿಕೊಳ್ಳುವುದಕ್ಕೆ ಕರಿಮರದ ಬಿಳಿ ಹಾಲನ್ನು ಹುಡುಕಿದರು. ಈಗ ಅವರಿಗೆ ಅದೇ ದಿವ್ಯ ಔಷಧ. ಈ ಕೊರಗಿನಲ್ಲಿ ತಮ್ಮ ದೇಹಶಕ್ತಿ ಕುಂದುತ್ತಿದ್ದಂತೆ ತಮ್ಮ ಯೋಗಕ್ಷೇಮವನ್ನು ತಾವೇ ನೋಡಿಕೊಳ್ಳುವುದಕ್ಕೆ ಅಸಮರ್ಥರಾಗಿದ್ದಾರೆ. ಹೆಂಡತಿ ಮಕ್ಕಳಿಂದ ದೂರವಾಗಿದ್ದಾರೆ. ಮನೆಯಿಂದ ದೂರ 'ಕಜ' ಬೆಟ್ಟದ ತಪ್ಪಲಿನಲ್ಲಿ ಮನೆ ಕಟ್ಟಿಸಿ ಪ್ರತ್ಯೇಕವಾಗಿದ್ದಾರೆ. ಸ್ನಾನ ಮಾಡುವುದಕ್ಕೆ ಕಷ್ಟವಾಗುತ್ತದೆಂದು ಶವರ್ ಬಾತ್ ಅಳವಡಿಸಿದ್ದಾರೆ. ಕೊಂಚ ಕಾಲ ಅಹ್ಲಾದದಿಂದ ಕಳೆಯಬೇಕೆಂದು ಸ್ವಿಮ್ಮಿಂಗ್ ಪೂಲ್ ಕಟ್ಟಿಸಿದ್ದಾರೆ. ಕರಿ ಮರದತ್ತ ಹೋಗುವಾಗ ಬಿಟ್ಟರೆ ಅವರೆಂದೂ ಕಾಲ್ನಡಿಗೆಯಲ್ಲಿ ಹೊರಬರುವುದೇ ಇಲ್ಲ. ಏಕೆಂದರೆ ನಡೆದಾಡುವುದೇ ಅವರಿಗೆ ಕಷ್ಟವಾಗಿಬಿಟ್ಟಿದೆ. ಏನಿದ್ದರೂ ಕಾಂಟೆಸ್ಸಾ ಕಾರಿನಲ್ಲೇ ಅವರ ಪ್ರಯಾಣ. ತಮ್ಮ ಕೊರಗಿಗೆ ಏನಾದರೂ ಪರಿಹಾರ ದೊರಕೀತೇನೋ ಎಂದು ಜಗತ್ತಿನ ವಿದ್ಯಮಾನಗಳನ್ನು ಅವಲೋಕಿಸುತ್ತಿದ್ದಾರೆ. ಅದಕ್ಕಾಗಿ ಕಲರ್ ಟಿವಿ ತರಿಸಿದ್ದಾರೆ. ರಾತ್ರಿ ೨ ಗಂಟೆಯ ತನಕವೂ ನೋಡುತ್ತಿರುತ್ತಾರೆ. ಅಲ್ಲೂ ಅವರಿಗೆ ಪರಿಹಾರ ಸಿಕ್ಕಂತೆ ಕಾಣುತ್ತಿಲ್ಲ. ದಿನೇ ದಿನೇ ಆರೋಗ್ಯ ಹದಗೆಡುತ್ತಿದೆ. ತಮ್ಮನ್ನು ಉಪಚರಿಸುವುದಕ್ಕೆಂದು ತಮ್ಮದೇ ಕಾಲೇಜಿನ ಹದಿನೆಂಟರ ತರುಣಿಯೊಬ್ಬಳನ್ನು ಕರೆತಂದಿದ್ದಾರೆ. ಹಿಂದಿನ ತಮ್ಮ ಮನೆ 'ಶ್ರೀಮಾತಾ'ನ ವ್ಯಾಮೋಹವಿನ್ನೂ ಅವರಿಗೆ ಬಿಟ್ಟಿಲ್ಲ. ಎಷ್ಟಾದರೂ ಹುಟ್ಟಿಬೆಳೆದ ಮನೆಯಲ್ಲವೇ ? ಹೊಸ ಮನೆಗೆ 'ಶ್ರೀ ಮೇಡಂ' ಎಂದು ನಾಮಕರಣ ಮಾಡಿದ್ದಾರೆ.

''ಶ್ರೀ ಸ್ವಾಮಿಯವರು ಹೀಗಾದ ಮೇಲೆ ನಮ್ಮೂರಿನ ಕೆಂಚಪ್ಪ-ನಂಜಪ್ಪ ಊರಿನ ಮುಖಂಡತ್ವವನ್ನು ಹಿಡಿದಿದ್ದಾರೆ. ನಿನಗೇ ಗೊತ್ತಿರುವಂತೆ ಮೊದಲು ಅವರು ಬದ್ಧ ದ್ವೇಷಿಗಳಾಗಿದ್ದವರು. ಆದರೆ ಅವರು ಕೈಗೊಂಡ ನಗರೀಕರಣದ ಸಮಾಜೋಪಯೋಗಿ ವೃತ್ತಿಗಾಗಿ ಅವರು ಒಂದಾಗಬೇಕಾಯಿತು. ಹೀಗಾದದ್ದೂ ಸ್ವಯಂ ಇಚ್ಛೆಯಿಂದಲ್ಲ. ಕಾಡು ಕಡಿದು ನಗರೀಕರಣಗೊಳಿಸುವ ತಮ್ಮ ಪ್ರಗತಿಪರ ಚಿಂತನೆಗೆ ಒಬ್ಬರಿಗೊಬ್ಬರು ತಡೆಯಾಗಿದ್ದರು. ಒಂದು ಬಾರಿ ಮಹಾಸ್ವಾಮಿಯವರ ದಿವ್ಯದೃಷ್ಟಿ ಇವರ ಮೇಲೆ ಬಿತ್ತು. ಅಂದಿನಿಂದ ಅವರಿಬ್ಬರೂ ಸ್ನೇಹಿತರಾಗಿದ್ದಾರೆ. ಎಷ್ಟರಮಟ್ಟಿಗೆ ಹೊಂದಾಣಿಕೆ ಮಾಡಿಕೊಂಡಿದ್ದಾರೆಂದರೆ ಇನ್ನು ಕೆಲವೇ ವರ್ಷಗಳಲ್ಲಿ ನಮ್ಮ ಊರು ನಿನ್ನ ಬೊಂಬಾಯಿಯನ್ನು ಮೀರಿಸಿ ಬೆಳೆಯಲಿದೆ. ಅಂದ ಹಾಗೆ ಈ ಹಳ್ಳಿಯನ್ನು ನಗರೀಕರಣಕ್ಕೆ ಒಳಪಡಿಸುವಾಗ ನಮ್ಮ ಮರಗಳೆಲ್ಲ ನಿರರ್ಥಕವೇನೂ ಆಗುವುದಿಲ್ಲ. ಅವೆಲ್ಲ ನಿನ್ನ ಬೊಂಬಾಯಿಗೆ ಸಾಗಿಸಲ್ಪಡುತ್ತಿವೆ. ಎಷ್ಟೋ ಮಂದಿಯ ಬದುಕು ಉದ್ಧಾರ ಮಾಡಿ ಜೀವನ ಸಾರ್ಥಕಪಡಿಸಿಕೊಳ್ಳುತ್ತಿವೆ. ಆದರೆ ಇಂಥ ಆತ್ಮೀಯರಿಗೂ ತಡೆಯೊಡ್ಡುವ ಗ್ರಹಚಾರವಾದಿಗಳು ಅಲ್ಲಲ್ಲಿ ತಲೆ ಎತ್ತಿದ್ದಾರೆ. ಅವರ ಗ್ರಹಚಾರ ಬಿಡಿಸುವುದಕ್ಕೆ, ಕಸದ ರಾಶಿ ಸೇರಿದ್ದ ಬೆಲ್ಟು, ದೊಣ್ಣೆ, ಸೈಕಲ್ ಚೈನುಗಳೆಲ್ಲ ಒಂದೊಂದಾಗಿ ಹೊರಬರುತ್ತಿವೆ.

''ಹಿಂದೊಮ್ಮೆ ನಮ್ಮ ಊರಲ್ಲಿ ಕಾಳಮ್ಮನ ಉತ್ಸವ ನಡೆಯುತ್ತಿದ್ದುದನ್ನು ನೀನು ಬಲ್ಲೆ. ಅಪ್ಪ ಹೇಳುತ್ತಿದ್ದಂತೆ ಆಗ ಕೋಳಿ-ಕುರಿ ಬಲಿ ಕೊಟ್ಟು ದೇವಿಯನ್ನು ಪ್ರಸನ್ನಗೊಳಿಸುತ್ತಿದ್ದರು. ನಾವು ಬೆಳೆದಾಗ ಅದೇನೂ ಕಾಣಸಿಕ್ಕಿದ್ದಿಲ್ಲ. ಶ್ರೀ ಸ್ವಾಮಿಯವರ ಯೌವನದ ಕಾಲದಲ್ಲಿ ಅವರು ಆ ಪದ್ಧತಿಯನ್ನು ನಿಲ್ಲಿಸಿದ್ದರು. ಆದರೆ ವಿಚಿತ್ರವೇನು ಬಲ್ಲೆಯಾ ? ಕಳೆದ ತಿಂಗಳು ಉತ್ಸವ ನಡೆದಾಗ ಶ್ರೀ ಸ್ವಾಮಿಯವರೇ ಕುರಿಯೊಂದನ್ನು ಬಲಿಕೊಟ್ಟಿದ್ದರು ! ಅದಕ್ಕೆ ಕಾರಣವಿದೆ. ಜೀವಿಗೆ ಹುಟ್ಟು ಎಂಬುದಿಲ್ಲ. ಸಾವಂತೂ ಇಲ್ಲವೇ ಇಲ್ಲ. ಈ ಹುಟ್ಟು ಸಾವು ಬದುಕುಗಳೆಲ್ಲ ಭ್ರಮೆ ಎಂಬುದನ್ನು ಅವರೀಗ ಕಂಡುಕೊಂಡಿದ್ದಾರೆ. ಇಲ್ಲಿ ಸರಿಯಾಗಲಿ-ತಪ್ಪಾಗಲೀ ಇಲ್ಲ. ಯಾರು ಯಾರಿಗೆ ಯಾವ್ಯಾವುದು ಸರಿ ಎನಿಸುತ್ತದೋ ಅದೇ ಸರಿ ಎಂಬ ಸತ್ಯ ಅವರಿಗೀಗ ತಿಳಿದಿದೆ. ಆದ್ದರಿಂದಲೇ 'ಬಲಿ' ತಪ್ಪೇನೂ ಅಲ್ಲವೆಂದು ಒಮ್ಮೆ ತಾವೇ ನಿಲ್ಲಿಸಿದ ಪದ್ಧತಿಯನ್ನು ಸ್ವತಃ ತಾವೇ ಪುನರಾರಂಭಿಸಿದ್ದಾರೆ.

''ಸದ್ಯ ಶ್ರೀ ಸ್ವಾಮಿಯವರನ್ನು ಕಾಡುತ್ತಿರುವ ಪ್ರಶ್ನೆ 'ನಾನು ಎಂದರೆ ಯಾರು' ? ಎಂಬುದು. ಅವರೀಗ ತಮ್ಮ ಶಕ್ತಿ ಕಳೆದುಕೊಂಡಿರಲಾಗಿ ಉತ್ತರ ತಿಳಿಯಲಾರರು. ಮಹಾಸ್ವಾಮಿಯವರ ಶಕ್ತಿ ಈ ಹಂತವನ್ನು ಮೀರಿ ಹೋಗಿರುವುದರಿಂದ ಅವರಿಂದಲೂ ಉತ್ತರ ಕಂಡುಹಿಡಿಯುವುದಕ್ಕೆ ಸಾಧ್ಯವಾಗಿಲ್ಲ. ಅಂಥ ಶ್ರೇಷ್ಠರಿಂದಲೇ ಸಾಧ್ಯವಾಗಿಲ್ಲವೆಂದ ಮೇಲೆ ನಮ್ಮಿಂದ ಆದೀತೇ ?'' ಎಂದು ತಮ್ಮ ಮಾತು ಮುಗಿಸಿದ.

ಆಗಲೇ ಗಂಟೆ ಹನ್ನೊಂದೂವರೆಯಾಗಿತ್ತು. ಕಣ್ಣೆಳೆಯತೊಡಗಿತು. ನಾದಿನಿ ಬಿಸಿನೀರು ಸಿದ್ಧಪಡಿಸಿದಳು. ಸ್ನಾನ ಮಾಡಿ ಉಂಡ ಶಾಸ್ತ್ರ ಮುಗಿಸಿ ಮಲಗಿದೆ. ಆದರೇನು ? ನಿದ್ದೆ ಹತ್ತುತ್ತಿಲ್ಲ. ಮತ್ತೆ ಮತ್ತೆ ಶ್ರೀ ಸ್ವಾಮಿಯವರ ಚಿತ್ರ ಕಣ್ಣೆದುರು ಬರುತ್ತಿದೆ. ಅದೇ ಉತ್ತರವಿಲ್ಲದ ಪ್ರಶ್ನೆ ಕಾಡುತ್ತಿದೆ. ''ನಾನು ಯಾರು ?'' ಏನೆಂದು ಉತ್ತರಿಸಲಿ ? ಅಷ್ಟಕ್ಕೂ ಉತ್ತರ ಹೇಳಲು ನಾನು ಯಾರು ? ಇದೆಲ್ಲವೂ ಆ ಜಗದ್ವ್ಯಾಪಿಯಾದ ಭಗವಂತನ ಲೀಲೆ. ಅವನ ಸಂಕಲ್ಪವೇ ಹೀಗಿರುವಾಗ ಉತ್ತರಿಸುವುದಕ್ಕೆ ನಾನು ಯಾರು ?

ಅರವಿಂದ ಚೊಕ್ಕಾಡಿ
'ಕಮಲದೀಪ', ತೆಳ್ಳಾರು ಕ್ರಾಸ್ ರಸ್ತೆ, ಕಾರ್ಕಳ - ೫೭೪೧೦೪

# ವ್ಯವಸ್ಥೆಯ ರಾಜಕಾರಣದ ಧ್ರುವೀಕರಣ ಮತ್ತು ಏಕಲವ್ಯ

◆

**ಸೂರಮ್ಮನಹಳ್ಳಿ ಉಮೇಶ**

ಇಂಡಿಯಾದ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯನ್ನು ವರ್ಣವ್ಯವಸ್ಥೆ (ವರ್ಣಾಶ್ರಮ ಪದ್ಧತಿ)ಯೇ ನಿರೂಪಿಸಿದೆ ಹಾಗೂ ನಿಯಂತ್ರಿಸಿದೆ. ಬಣ್ಣದ ಮೂಲಕ ಬದುಕು ಕಟ್ಟಿಕೊಳ್ಳುವುದು ಇತ್ತೀಚಿನ ದಿನಗಳಲ್ಲಿ ಮಾಯವಾಗಿ ಅದು ಆರ್ಥಿಕ ಕ್ಷೇತ್ರಕ್ಕೆ ವಿಸ್ತರಿಸಿದೆ. ಬದಲಾಗಿ ಜಾತಿ ವ್ಯವಸ್ಥೆಯ ಬೇರುಗಳು ಸಂಪೂರ್ಣವಾಗದೇ ಅದರ ಕಾರ್ಯಕ್ಷೇತ್ರ ಬೇರೆಯದೇ ಆದ ಸ್ವರೂಪವನ್ನು ಪಡೆದು ಕೊಳ್ಳುತ್ತದೆ. ಇಂಡಿಯಾದಂಥ ದೇಶದಲ್ಲೂ ಮೇಲ್ಜಾತಿ/ವರ್ಗದವರ ಕೈಯಲ್ಲಿ ಅಧಿಕಾರ ಕೇಂದ್ರೀಕೃತವಾಗಿ ವ್ಯವಸ್ಥೆಯನ್ನು ನಿಯಂತ್ರಣದಲ್ಲಿಟ್ಟುಕೊಂಡಿದೆ. ಇದು ವ್ಯವಸ್ಥಿತ ರಾಜಕಾರಣದ ಒಂದು ಭಾಗವೇ ಆಗಿರುತ್ತದೆಂದು ಬೇರೆ ಹೇಳಬೇಕಾಗಿಲ್ಲ. ಮನೆಯ ಒಡೆಯನಿಗೆ ಹಸು ಹಾಲು ಕೊಟ್ಟು, ಕೊಡದೆ ತನ್ನ ಕರುವಿಗೆ ಕೆಚ್ಚಲಲ್ಲಿ ಬಚ್ಚಿಟ್ಟಿರುವಂತೆ, ಕೆಳಜಾತಿಗಳು ತನ್ನ ದನಿಗೆ ಬದುಕನ್ನು ಮೀಸಲಿಟ್ಟು ಅಥವಾ ದೇಹ ಮತ್ತು ಮನಸ್ಸುಗಳನ್ನು ಮಾರಿಕೊಳ್ಳುವ ಸ್ಥಿತಿ ಇಂಡಿಯಾದಂತಹ ದೇಶಗಳಲ್ಲಿ ನಿರಂತರವಾಗಿ ಮುಂದುವರಿದುಕೊಂಡು ಬಂದಿರುವುದು ವಿಚಿತ್ರವಾದರೂ ಸತ್ಯ ಸಂಗತಿ. ಕೆಳಸ್ತರದ ಜನರು ನೂರಾರು ಸ್ನಿಗ್ಧ ಕನಸುಗಳನ್ನು ಕಟ್ಟಿಕೊಂಡೇ ಕ್ರಿಯಾಶೀಲವಾಗಿ ಚಟುವಟಿಕೆಯಿಂದ ಜೀವಂತವಾಗಿ ಉಸಿರಾಡುತ್ತಿರುತ್ತಾರೆ. ಕನಸುಗಳು ಯಾವತ್ತೂ ಈ ಸ್ತರದ ಜನರಿಗೆ ಕನಸುಗಳಾಗಿಯೇ ಕಮರಿ ಹೋಗುತ್ತವೆಯೇ ವಿನಃ ಫಲವಂತಿಕೆ ಪಡೆಯುವುದಿಲ್ಲ. ಕನಸಿನ ಅಥವಾ ದೂರದ ಹೊಸ ಬದುಕಿಗಾಗಿ ಕೆಲ ಸಮೂಹ ತಹತಹಿಸುವ ಪರಿ ಅನನ್ಯ.

ಭಾರತದ ಚರಿತ್ರೆಯ ಕಾಲಖಂಡಗಳನ್ನು ಪಕ್ಕಕ್ಕಿಟ್ಟು ಇಡೀ ಭಾರತದ ಚರಿತ್ರೆಯನ್ನು ಪುನರ್ ವ್ಯಾಖ್ಯಾನಕ್ಕೆ ಅಳವಡಿಸಿದರೆ ಭಾರತೀಯ ಚರಿತ್ರೆ ಹೊಸ ರೂಪ ಪಡೆಯುವ ಸಾಧ್ಯತೆಗಳಿವೆ. ಭಾರತದ ಭವ್ಯ ಪರಂಪರೆಗೆ ಕಾರಣರಾದವರೇ ಚರಿತ್ರೆಯ ಮುಖ್ಯವಾಹಿನಿಯಲ್ಲಿ ಕಾಣದಾದ್ದು ಇಂಡಿಯಾ ಚರಿತ್ರೆಯ ಬಹುದೊಡ್ಡ ವ್ಯಂಗ್ಯ. ಇಂತಹ ಅಲಕ್ಷಿತ ಸಮುದಾಯಗಳು ಸಮಾಜದ ಅಂಚಿಗೆ ತಾವೇ ದಾಪುಗಾಲು ಹಾಕಿದವೋ? ವ್ಯವಸ್ಥೆಯ ರಾಜಕಾರಣವೊಂದು ಈ ಕಾರ್ಯವನ್ನು ನಿರ್ವಹಿಸಿತೋ? ಎಂಬ ಪ್ರಶ್ನೆಗಳಿಗೆ ಚರಿತ್ರೆ ಮೂಕವಾಗಿ ನಿಲ್ಲುತ್ತದೆ. ಭಾರತೀಯ ಸಮಾಜದಲ್ಲಿ ವರ್ಣವ್ಯವಸ್ಥೆ ಚರಿತ್ರೆಯ ಉದ್ದಕ್ಕೂ ಜೀವ ವಿರೋಧಿ ತತ್ವಗಳನ್ನು, ಅಮಾನವೀಯ ಅನಿಷ್ಟಗಳನ್ನು ಪೋಷಿಸಿಕೊಂಡೇ ಬಂದಿತು. ಜಮೀನ್ದಾರೀ ವ್ಯವಸ್ಥೆಯ ರಾಜಕಾರಣವು ಜಾತಿ : ಜೀತ : ಭೂಮಿ ಸಂಬಂಧಗಳೊಳಗೆ ಇನ್ನಷ್ಟು ಶೋಷಣೆಗೆ ಒಳಪಡಿಸಿತು. ಊಳಿಗಮಾನ್ಯ ವ್ಯವಸ್ಥೆಯ ಬೇರುಗಳು ಸಮಾಜದಲ್ಲಿ ಎಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತವೆಯೋ ಶೋಷಣೆಯೂ ಅಕ್ಷಯವಾಗಿಯೇ ಇರುತ್ತದೆ. ಈ ರಾಜಕಾರಣದ ವಿಕೃತ ಮನಸ್ಥಿತಿಗಳು ಮಾನವೀಯ ಮೂಲ ಸೆಲೆಗಳನ್ನೇ ಕೊಂದು ಹಾಕಬಲ್ಲವು. ಉಸಿರುಕಟ್ಟಿಸುವ ಶಕ್ತಿ ರಾಜಕಾರಣದ ವ್ಯವಸ್ಥೆಯಲ್ಲಿ ಒಂದು ಸಮುದಾಯದೊಳಗೆ ಸ್ಥಿತ್ಯಂತರಗೊಳ್ಳುವ ಪ್ರಕ್ರಿಯೆಗಳು ಜರುಗುವುದು, ಬಿಕ್ಕಟ್ಟುಗಳಾಗಿ ರೂಪ ಪಡೆಯುವುದಕ್ಕೆ ಆ ಹೊತ್ತಿನ ಸಾಮಾಜಿಕ ವಿಷಗರ್ಭವೇ ಕಾರಣವಾಗಿರುತ್ತದೆ. ಇಂತಹ ವಿಷಗರ್ಭದಿಂದ ಹೊರಗೆ ಜಿಗಿಯುವ, ಯಜಮಾನಿಕೆಯನ್ನು ಸೂಕ್ಷ್ಮವಾಗಿ ವಿರೋಧಿಸುವ ಪ್ರಯತ್ನಗಳು ಆಗಾಗ ಜರುಗುತ್ತಿರುತ್ತವೆ. ಭಾರತದಲ್ಲಿ ಬಹು ಸಂಸ್ಕೃತಿಯ ಬದುಕು ಇಂತಹ ಸಮಯಗಳಲ್ಲಿ ಮೇಲ್ಜಾತಿಗಳಿಗೆ ತಲ್ಲಣಗಳನ್ನು ಉಂಟುಮಾಡುತ್ತದೆ. ಕೆಳಜಾತಿ ಜನರ ಇಂತಹ ಹೋರಾಟದ ಪಯಣವನ್ನು ಶಕ್ತಿ ರಾಜಕಾರಣವೊಂದು ತುಳಿಯುವ, ಕೆಟ್ಟದಾಗಿ ಅರ್ಥೈಸುವ ಕ್ರಿಯೆಗಳು ಜರುಗುತ್ತಿರುತ್ತವೆ. ಅದನ್ನೇ ನಂಬಿಸುವ ಹುನ್ನಾರವನ್ನು ಪ್ರತಿಷ್ಠಿತ ಪ್ರಭುತ್ವಗಳು ಗುಪ್ತಗಾಮಿನಿಯಾಗಿ ಗುತ್ತಿಗೆಯನ್ನು ಹಿಡಿಯುತ್ತವೆ. ಕೆಳಸಮುದಾಯಗಳ ಕ್ರಿಯಾಶೀಲತೆಯನ್ನು ಸಹಿಸದ ಪ್ರಭುತ್ವವೇ ದ್ವೇಷಿಗಳನ್ನಾಗಿ ಸೃಷ್ಟಿಮಾಡುತ್ತದೆ.

ಭಾರತೀಯ ಪುರಾಣಗಳನ್ನು, ಮಹಾಕಾವ್ಯಗಳನ್ನು ಪುನರ್ ಮೌಲ್ಯೀಕರಣಕ್ಕೆ ಒಳಪಡಿಸಿದಾಗ ಚರಿತ್ರೆಯ ಗರ್ಭ ಸೀಳಿಕೊಂಡು ತಮ್ಮ ಅಸ್ಮಿತೆಯನ್ನು ಕೆಳಸಮುದಾಯಗಳು ತೋರಿಸುತ್ತಲೇ ಜನ್ಮ ಪಡೆಯುತ್ತವೆ. ಈ ಹಿನ್ನೆಲೆಯಲ್ಲಿ ಭಾರತೀಯ ಚರಿತ್ರೆಯಲ್ಲಿ ಬಹುದೊಡ್ಡ ಸಾಂಸ್ಕೃತಿಕ ಪ್ರತಿಮೆಯಾಗಿ, ಪ್ರತಿಭೆಯಾಗಿ 'ಏಕಲವ್ಯ' ನಮ್ಮ ಮುಂದೆ ಧುತ್ತನೆ ನಿಲ್ಲುತ್ತಾನೆ. ದೇಶೀ ನೆಲದ ಮೌಖಿಕ ಸಾಹಿತ್ಯವು ಶಿಷ್ಟ ಸಾಹಿತ್ಯಕ್ಕಿಂತ ಭಿನ್ನವಾಗಿ, ಪುರಾಣಗಳಿಗೆ ಪ್ರತಿರೋಧದ ನೆಲೆಯಲ್ಲಿ ಸೃಷ್ಟಿಗೊಂಡಿವೆ. ಏಕಲವ್ಯನ ಕಾಲ, ಸ್ಥಳ, ದೇಶ ಮೀರಿ ನೋಡುವುದಾದರೆ ಆ ಹೊತ್ತು ಏಕಲವ್ಯನಿಗಾದ ಅವಮಾನ, ನಷ್ಟ, ನೋವು, ಹಿಂಸೆ, ವಿರೋಧಗಳು ಇಪ್ಪತ್ತೊಂದನೆಯ ಶತಮಾನದ ಜಾಗತೀಕರಣದ ಅಬ್ಬರದ ದಿನಗಳಲ್ಲಿ ಕೆಳಜಾತಿ/ವರ್ಗದ, ತೃತೀಯ ಜಗತ್ತಿನ, ನಿರ್ಲಕ್ಷತೆಗೆ ಒಳಗಾದ ಯಾರಿಗಾದರೂ ಅನ್ವಯಿಸಬಲ್ಲದು. ಒಂದು ಕಾಲದ ಸಾಂಸ್ಕೃತಿಕ ಆವರಣ ಶಕ್ತನಾದ, ಸೂಕ್ಷ್ಮಜ್ಞನಾದ ಲೇಖಕನಿಂದ ಪುನರ್ ವ್ಯಾಖ್ಯಾನಕ್ಕೆ ಒಳಪಡುತ್ತದೆ. ಇಂತಹವನಿಂದ ಪ್ರಗತಿಪರ ಆಲೋಚನೆಗಳ ನೆಲೆಯಲ್ಲಿ ಪುನರ್‌ವ್ಯಾಖ್ಯಾನದ ಕಾರ್ಯ ಒಂದು ಸ್ಥಾಪಿತ ವ್ಯವಸ್ಥೆಯ, ಮೌಲ್ಯದ ವಿರುದ್ಧ ಕ್ರಿಯೆ ಜರುಗುತ್ತದೆ. ಏಕಲವ್ಯನ ಹೆಬ್ಬೆರಳಿನ ಪ್ರಶ್ನೆ ಕನ್ನಡ ಸಂಸ್ಕೃತಿ ಲೋಕದಲ್ಲಿ ಈಗಾಗಲೇ ಚರ್ಚಿತವಾಗಿರುವಂತಹದೇ ಆಗಿದೆ.

ಏಕಲವ್ಯ ದ್ರೋಣಾಚಾರ್ಯನಿಗೆ ತನ್ನ ಹೆಬ್ಬೆರಳನ್ನು ಒತ್ತಾಯಪೂರ್ವಕವಾಗಿ ಕಿತ್ತುಕೊಡುತ್ತಾನೋ? ಏಕಲವ್ಯ ಪ್ರೀತಿಯಿಂದ ಗುರುದಕ್ಷಿಣೆಯಾಗಿ ಕಾಣಿಕೆ ಕೊಟ್ಟನೋ? ವ್ಯವಸ್ಥಿತವಾಗಿ ಏಕಲವ್ಯ ಹೆಬ್ಬೆರಳನ್ನು ಗುರುಕಾಣಿಕೆಯಾಗಿ ಕೊಟ್ಟದ್ದಾಗಿ ನಂಬಿಸುವ ಹುನ್ನಾರ. ಪ್ರತಿಷ್ಠಿತ ಸಮೂಹದ ತೀರ್ಮಾನವೇ ಆಗಿರುತ್ತದೆ. ಏಕಲವ್ಯನ 'ಹೆಬ್ಬೆರಳು' ಕೇವಲ ಭೌತಿಕವಾಗಿ ಉಳಿಯದೆ, ಅವನ ಬದುಕಿನ ಸಂಕೇತವಾಗುತ್ತದೆ. ಏಕಲವ್ಯನ ಹೆಬ್ಬೆರಳನ್ನು ಬಲಿತೆಗೆದುಕೊಂಡ ಪುರೋಹಿತಶಾಹಿವರ್ಗ (ದ್ರೋಣ) ಏಕಲವ್ಯನನ್ನು ದುರಂತ ನಾಯಕನಂತೆ ಕಾಣುತ್ತದೆ. ಅವನ ಬದುಕಿನಲ್ಲಿ ಆದ ಅನಾಹುತಕ್ಕೆ ಕರುಣಾರಸ ಉಕ್ಕಿಸುವಂತೆ ಬಣ್ಣಹಚ್ಚಿ ಕತೆ ಕಟ್ಟುತ್ತದೆ; ಮೊಸಳೆಯ ಕಣ್ಣೀರು ಸುರಿಸುತ್ತದೆ. ಪುರೋಹಿತಶಾಹಿಯೂ ಸಮಾಜಕ್ಕೆ ಇದನ್ನು ಒಪ್ಪಿಸುವ, ಆ ಮೂಲಕ ಏಕಲವ್ಯನಿಗೆ ಸಾಂತ್ವನ ಹೇಳುವುದನ್ನು ಗಮನಿಸಿದರೆ ಉದಾರವಾದವೊಂದು ಮರುಕ ಹುಟ್ಟಿಸುತ್ತದೆ.

ಪ್ರಭುತ್ವವನ್ನು ನೇರವಾಗಿ ವಿರೋಧಿಸುವಲ್ಲಿ ಅಸಹಾಯಕನಾದಾಗ ಹೆಬ್ಬೆರಳನ್ನು ಏಕಲವ್ಯ 'ಮೌನ'ವಾಗಿ ಕಳೆದುಕೊಳ್ಳುತ್ತಾನೆ. ಅವನ ಹೆಬ್ಬೆರಳು ಬಲಿಯ 'ಮೌನ'ಕ್ಕೆ ಅವನ ಅವಿರತ ಪರಿಶ್ರಮದಿಂದ ಸಂಪಾದಿಸಿಕೊಂಡ ಶಿಕ್ಷಣ 'ಮಾತಾ'ಗುತ್ತದೆ; ಬದುಕಿಗೆ 'ಧ್ವನಿ'ಯಾಗುತ್ತದೆ. ಏಕಲವ್ಯನ 'ಮೌನ' ಮುರಿದು 'ಶಿಕ್ಷಣ' 'ಮಾತಾ'ಗುತ್ತದೆ; 'ಶಕ್ತಿ'ಯಾಗುತ್ತದೆ. ಪುರೋಹಿತಶಾಹಿಗೆ ವಿರೋಧವೂ, ಪ್ರತಿಭಟನೆಯೂ ಆಗುತ್ತದೆ. ಇಂತಹ ವಿರೋಧವನ್ನು ಹತ್ತಿಕ್ಕಲು ಪುರೋಹಿತಶಾಹಿಯೂ ಪ್ರಭುತ್ವದ ರಾಜಕಾರಣದೊಂದಿಗೆ ಕೈಜೋಡಿಸುತ್ತದೆ. ಏಕಲವ್ಯನಂತಹ ಕೆಳಜಾತಿ ಜನರ ಕ್ರಿಯಾಶೀಲತೆಯನ್ನು ಸಹಿಸದ, ಅದನ್ನು ಮೌಲ್ಯವೆಂದು ಒಪ್ಪಲು ಸಿದ್ಧವಿಲ್ಲದ ಸಮಾಜ ವಾಸ್ತವವನ್ನು ತಿರುಚಿ ಸಮಾಜಕ್ಕೆ ಸತ್ಯವನ್ನು ಮರೆಮಾಚಿ ಮಡಿವಂತಿಕೆಯ ಮೌಲ್ಯಗಳನ್ನೇ ಹೇರುತ್ತದೆ. ತಳಸ್ತರದವರ ಕ್ರಿಯಾಶೀಲತೆಯನ್ನು, ಕಾರ್ಯಶೀಲತೆಯನ್ನು ಪುರೋಹಿತಶಾಹಿಯು ಯಾವತ್ತೂ ಇಚ್ಛಿಸುವುದಿಲ್ಲ. ವ್ಯವಸ್ಥೆಯ ಒಂದು ಚೌಕಟ್ಟಿನೊಳಗೆ ಬದುಕುವ ಕೆಳಸಮುದಾಯಗಳು ಬದುಕಿನ ಹೊಸ ಹೊಸ ಮಾರ್ಗಗಳ ಕಡೆಗೆ ಪಯಣ ಬೆಳೆಸುವುದನ್ನು ಸಿದ್ಧಮಾದರಿಯ ಸಮಾಜ ಪ್ರತಿರೋಧವನ್ನು ವ್ಯಕ್ತಪಡಿಸುತ್ತದೆ. ಸಂಪ್ರದಾಯಶೀಲ ಸಮಾಜಕ್ಕೆ ಕೆಳಜಾತಿ/ವರ್ಗಗಳ ಪಥಸಂಚಲನ, ಸ್ಥಿತ್ಯಂತರ ಭಯ-ಆತಂಕಗಳನ್ನು ಸೃಷ್ಟಿಸುವುದರಲ್ಲಿ ಅನುಮಾನಗಳೇ ಬೇಕಿಲ್ಲ. ಆ ಕಾರಣಕ್ಕಾಗಿ ಸಮಾಜ ಒಪ್ಪಿತ ಮೌಲ್ಯಗಳು ಶ್ರೇಷ್ಠವೆಂದು ಬಗೆದು ಅವುಗಳ ವಿರುದ್ಧ ನಡೆದವರ ವಿರುದ್ಧ ಸಿಟ್ಟು, ಆಕ್ರೋಶವನ್ನು (ಪ್ರಭುತ್ವ/ರಾಜಕಾರಣ) ಕಾರುತ್ತದೆ. ಪ್ರಭುತ್ವ-ಪುರೋಹಿತಶಾಹಿ ಮೌಲ್ಯಗಳ ಹಿಂದಿನ ಕ್ರೂರ ವ್ಯವಸ್ಥೆಯ ಒಳಗೆ ಏಕಲವ್ಯನ ಬದುಕಿನ ಸತ್ಯಸಂದೇಶವಡಗಿದೆ.

ಶತಶತಮಾನಗಳ ಹಿಂದಿನ ಏಕಲವ್ಯನಿಗೂ ಇಪ್ಪತ್ತನೆಯ ಶತಮಾನದ ಚೋಮನಿಗೂ (ಕಾರಂತರ ಚೋಮನ ದುಡಿ), ಹೂವಯ್ಯನಿಗೂ (ಕುವೆಂಪು : ಕಾನೂರು ಹೆಗ್ಗಡಿತಿ) ಕಾಲಮಾನದ ದೃಷ್ಟಿಯಿಂದ ಅಂತರವಿದೆಯಾದರೂ, ಈ ಮೂವರೂ ಕೂಡ ಪುರೋಹಿತಶಾಹಿ ಮೌಲ್ಯಗಳಿಂದ ನಷ್ಟವನ್ನು ಅನುಭವಿಸಿ ಅದರ ವಿರುದ್ಧ ಸೂಕ್ಷ್ಮ ಪ್ರತಿಭಟನೆಯನ್ನು ಎದುರಿಸಿದವರೇ ಆಗಿದ್ದಾರೆ. ಈ ಮೂವರೂ

ಕೆಳಜಾತಿಗಳಿಂದ ಬಂದವರಾಗಿದ್ದರೂ ಇವರ ಸಾಮಾಜಿಕ ಸ್ಥಾನಮಾನಗಳು ಭಿನ್ನವಾಗಿವೆ. ಏಕಲವ್ಯ ಬುಡಕಟ್ಟು ಸಮಾಜಕ್ಕೆ ಸೇರಿದವನಾದರೆ, ಚೋಮ, ಹೊಲೆಯ ಜಾತಿಯ ಅಸ್ಪೃಶ್ಯ ಸಮಾಜಕ್ಕೆ ಸೇರಿದವನು. ಹೂವಯ್ಯ ಇವರಿಬ್ಬರಿಗಿಂತಲೂ ಸಾಮಾಜಿಕವಾಗಿ, ಆರ್ಥಿಕವಾಗಿ ಮೇಲುಸ್ತರಕ್ಕೆ ಸೇರಿದವನು. ಏಕಲವ್ಯ ಹೆಬ್ಬೆರಳನ್ನು ಬಲಿಕೊಟ್ಟು ಬದುಕನ್ನು ಸ್ವಪ್ರಯತ್ನ, ಪರಿಶ್ರಮದಿಂದ ಕಟ್ಟಿಕೊಂಡವನು. ಚೋಮ ತನ್ನ ದನಿಗೆ ತನ್ನೊಬ್ಬನ ಬದುಕನ್ನಷ್ಟೇ ಅಲ್ಲದೆ ಇಡೀ ಕುಟುಂಬವನ್ನೆ ದುರಂತದ ಪಣಕ್ಕಿಟ್ಟವನು. ಹೂವಯ್ಯ ಆಧುನಿಕ ಮನುಷ್ಯ. ವಸಾಹತು ಶಿಕ್ಷಣ-ಆಧುನಿಕತೆ, ಜಾಗತಿಕ ಸಾಹಿತ್ಯ-ವಿಚಾರ ವೊಂದಕ್ಕೆ ಮುಖಾಮುಖಿಯಾದವನು. ಆ ಕಾರಣಕ್ಕಾಗಿ ಪುರೋಹಿತಶಾಹಿಯ ವಿರುದ್ಧವಾಗಿ ಈಜಲು ಹಿಂಜರಿಯಲಾರ. ಕೆಳಸ್ತರದ ಈ ಮೂವರ ಜೀವನದಲ್ಲಿ ಪುರೋಹಿತಶಾಹಿಯ ಮೌಲ್ಯಗಳು ಒಂದಿಲ್ಲೊಂದು ರೀತಿಯಲ್ಲಿ ಇವರ ಚಲನೆಗೆ ಅಡ್ಡಿಪಡಿಸಿವೆ. ಪುರೋಹಿತಶಾಹಿಯ ನೀತಿ-ನಡತೆ-ಕ್ರೂರತೆಗಳಿಂದ ಏಕಲವ್ಯನಿಗಾದ ಭೂತದ ನೆನಪಿನಿಂದ ಚೋಮ, ಹೂವಯ್ಯರ ಬದುಕನ್ನು ವರ್ತಮಾನದಲ್ಲಿ ಅರ್ಥಮಾಡಿ ಕೊಳ್ಳಲು ಸಹಾಯಕವಾಗುತ್ತದೆ. ಕ್ಷತ್ರಿಯರಿಗಲ್ಲದೆ ಬೇರೆಯವರಿಗೆ ವಿದ್ಯೆ ಕಲಿಸುವುದಿಲ್ಲವೆಂಬ ಆ ಹೊತ್ತಿನ ದ್ರೋಣನ ಮಾತಿಗೂ, ಕಾನೂರು ಹೆಗ್ಗಡಿತಿಯಲ್ಲಿ ಬರುವ ವೆಂಕಪ್ಪ ಜೋಯಿಸರ 'ಈಗಿನ ವಿದ್ಯಾಭ್ಯಾಸ ಹುಡುಗರನ್ನು ಹಾಳುಮಾಡುತ್ತದೆ' ಎಂಬ ಮಾತಿಗೂ, ಚೋಮನ ದುಡಿಯ ಸಂಕಪ್ಪಯ್ಯನ ತಾಯಿಯ 'ಅಬ್ಬಾ! ಹೊಲೆಯ ರಿಗೆ ಬಂದ ಸೊಕ್ಕೆ!' ಎಂಬ ಮಾತುಗಳಲ್ಲಿ ಸಹ ಸಂಬಂಧಗಳನ್ನು ಕಾಣಬಹುದಾಗಿದೆ.

ಏಕಲವ್ಯ, ಚೋಮ, ಹೂವಯ್ಯರ ಕ್ರಿಯಾಶೀಲ ಬದುಕನ್ನು ಬಲಿತೆಗೆದುಕೊಳ್ಳುವ ಪುರೋಹಿತಶಾಹಿ ಮೌಲ್ಯಗಳಿಗೆ ಅಧಿಕಾರವರ್ಗದ ಬೆಂಬಲವು ಅನಾಯಾಸ ವಾಗಿ ದೊರಕಿಬಿಡುತ್ತದೆ. ರಾಜಕಾರಣದೊಂದಿಗಿನ ಪುರೋಹಿತಶಾಹಿಯ ಅನುಸಂಧಾನ ಎಲೈಟ್ ಆದ ಸಂಸ್ಕೃತಿಯನ್ನೇ ಕೊಂಡಾಡುತ್ತದೆ. ಇದು ಶ್ರಮಿಕ ಸಮುದಾಯಗಳ ಆತ್ಮವಿಶ್ವಾಸವನ್ನು ನಾಶಗೊಳಿಸುವ ಹುನ್ನಾರವನ್ನು ಸೃಷ್ಟಿಸುತ್ತದೆ. ಪುರೋಹಿತ-ಪ್ರಭುತ್ವದ ಒಳಸಂಬಂಧಗಳನ್ನು ಪ್ರಾಚೀನ ಕಾಲದಿಂದ ಅರ್ವಾಚೀನ ಕಾಲದವರೆಗೆ ಗುರುತಿಸಬಹುದು. ಈ ಸಂಬಂಧಗಳ ಸ್ವರೂಪ ಭಿನ್ನವಾಗಿರಬಹುದು.

ಇಲ್ಲವೆ ಇನ್ನು ಹೆಚ್ಚಿನ ಸೌಲಭ್ಯಗಳು ಸೇರುತ್ತಾ ಹೋಗಬಹುದು. ನೂರು-ಇನ್ನೂರು ವರ್ಷಗಳ ಹಿಂದಿನ ಜಮೀನ್ದಾರ ಇವತ್ತು ಖಾಲಿ ಜಮೀನ್ದಾರನಾಗಿಯೇ ಉಳಿದಿರುವುದಿಲ್ಲ. ಗ್ರಾಮ, ತಾಲೂಕು, ಜಿಲ್ಲಾ ಪಂಚಾಯಿತಿಗಳ ಅಧ್ಯಕ್ಷನಾಗಿಯೋ, ಎಂ.ಎಲ್.ಎ., ಆಗಿಯೋ ಇಲ್ಲವೆ ಬಹುರಾಷ್ಟ್ರೀಯ ಕಂಪನಿಗಳ ಜೊತೆ ಕೈಜೋಡಿಸಿಯೋ ವ್ಯಾಪಾರ ನಡೆಸಿರುತ್ತಾನೆ. ಜಮೀನ್ದಾರನ ಕಪಿಮುಷ್ಟಿಯಲ್ಲಿ ಬದುಕುವ ಕೃಷಿ-ಕೂಲಿ ಗ್ರಾಹಕನಾಗಿ ಮತ್ತೆ ಶೋಷಣೆಯನ್ನು ಅನುಭವಿಸುತ್ತಾನೆ. ಜಂಬಣ್ಣ ಅಮರಚಿಂತರ 'ಕುರುಮಯ್ಯ ಮತ್ತು ಅಂಕುಶದೊಡ್ಡಿ' ಕಾದಂಬರಿ ಈ ಸಮಸ್ಯೆಯನ್ನು ಚರ್ಚಿಸುತ್ತದೆ.

ಏಕಲವ್ಯ, ಚೋಮ, ಹೂವಯ್ಯರ ಪರಂಪರೆಯನ್ನು ಕಾಲಾತೀತವಾಗಿ ಬೆಳಸಬಹುದು, ಬೆರಸಬಹುದು. ಏಕಲವ್ಯ-ಹೂವಯ್ಯರ ಶಿಕ್ಷಣವನ್ನು ವಿರೋಧಿಸುವ ಪುರೋಹಿತಶಾಹಿ ಮೌಲ್ಯಗಳು ಆ ಕ್ಷಣಕ್ಕೆ ಪ್ರಜ್ವಲವಾಗಿ ಕಾಣಿಸುವ (ಖಳನಾಯಕರಂತೆ ಮಿಂಚುವ) ಆ ನಂತರದಲ್ಲಿ ಯಾಕೆ ಸ್ಥಿರವಾಗಿ ನಿಲ್ಲಲಾರವು ಎಂಬುದನ್ನು ಪ್ರಶ್ನಿಸಿಕೊಳ್ಳಬೇಕು. ಜಡವಾದದ್ದು, ಸಂಪ್ರದಾಯ ವಾದದ್ದು, ಆಧುನಿಕ ಜಗತ್ತಿಗೆ, ಹೊಸ ವಿಚಾರಧಾರೆಗೆ ಮುಖಾಮುಖಿಯಾಗುವಾಗ ಸೋಲೊಪ್ಪುತ್ತದೆ, ಚಲನ ಶೀಲತೆಯನ್ನು ಕಳೆದುಕೊಂಡು ಸ್ಥಾವರಸ್ಥಿತಿಯನ್ನು ತಲುಪು ತ್ತದೆ. ಏಕಲವ್ಯ-ಚೋಮ-ಹೂವಯ್ಯರಿಗೆ ಪಟ್ಟಭದ್ರ ಹಿತಾಸಕ್ತಿಗಳು ನ್ಯಾಯ ಒದಗಿಸದೆ ಇರಬಹುದು, ಯಶಸ್ಸು ದೊರೆಯದೇ ಇರಬಹುದು. ಕೆಳಸಮುದಾಯಗಳ ಜಂಗಮಸ್ಥಿತಿಗೆ ಜಿಗಿಯುವ ಚಡಪಡಿಕೆ ಅಸಾಧಾರಣ ವಾದುದು. ಬಿಗಿಯಾದ ವ್ಯವಸ್ಥೆಯ ಒತ್ತಡಗಳ ಮಧ್ಯೆ ಕೆಳಸ್ತರದ ಸುಪ್ತಹೋರಾಟ, ಸೂಕ್ಷ್ಮ ಪ್ರತಿಭಟನೆ, ಪ್ರತಿಯಾಗಿ ಹೊಸ ಬದುಕಿನ ಅಪೇಕ್ಷೆ, ಹೊಸ ಬದುಕಿನ ಅನ್ವೇಷಣೆಯ ಅಚಲತೆ ಅದಮ್ಯ ಹಾಗೂ ಅನನ್ಯ.

**ಸೂರಮ್ಮನಹಳ್ಳಿ ಉಮೇಶ**
ಸಂಶೋಧನ ವಿದ್ಯಾರ್ಥಿ, ಭಾಷಾಂತರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೫೮೩ ೨೭೬

# ಗೋವಿನ ಹಾಡು – ಒಂದು ಪರಾಮರ್ಶೆ

ಎಚ್. ಎಸ್. ಹಿರೇಮಠ

''**ಯು**ದ್ಧ, ಹಿಂಸೆ, ಜಾತೀಯ ಆಚರಣೆಗಳು ಮನುಕುಲವನ್ನು ಹೇಗೆ ಕಾಡಿದವು, ಇವುಗಳಿಗೆ ಸಂಬಂಧಿಸಿದಂತೆ, ನಮ್ಮ ಹಿರಿಯರ ಆಲೋಚನೆ, ಪರಿಭಾವನೆಗಳು ಹೇಗಿದ್ದವು ಎಂಬ ಅಂಶಗಳನ್ನು ವಿದ್ಯಾರ್ಥಿಗಳಿಗೆ ಚಾರಿತ್ರಿಕ ಪರಿಪ್ರೇಕ್ಷ್ಯವೊಂದರ ಮೂಲಕ ಮನನ ಮಾಡಿಸುವ'' ಘನ ಉದ್ದೇಶದಿಂದ ಕುವೆಂಪು ವಿಶ್ವವಿದ್ಯಾಲಯದ ವ್ಯಾಪ್ತಿಯಲ್ಲಿ ಬರುವ ಬಿ.ಎ., ಬಿ.ಎಸ್ಸಿ, ಬಿ.ಕಾಂ. ಪ್ರಥಮ ವರ್ಷದ ವಿದ್ಯಾರ್ಥಿ ಸಮೂಹಕ್ಕೆ 'ಪ್ರಾಚೀನ ಕನ್ನಡ ಕಾವ್ಯ-೨'ನ್ನು ಪ್ರೊ|| ಬಿ. ಜಯದೇವಪ್ಪ ಮತ್ತು ಪ್ರೊ|| ಜೆ. ಕೆ. ರಮೇಶ್ ಸಂಪಾದಿಸಿದ್ದಾರೆ. ಇದರಲ್ಲಿ ರನ್ನ, ಜನ್ನ, ಅಕ್ಕಮಹಾದೇವಿ, ರಾಘವಾಂಕ, ಕನಕದಾಸ, ಶಿವ ಕೋಟ್ಯಾಚಾರ್ಯರ ಕೃತಿ- ಭಾಗಗಳಿವೆ. ಇವುಗಳಲ್ಲಿ ಕೆಲವು ಪಾಠಗಳು ಮಾತ್ರ ಸಂಪಾದಕರ ಆಶಯಕ್ಕೆ ಅನುಗುಣವಾಗಿವೆ. 'ಗೋವಿನ ಹಾಡು' ಎಂಬ ಜನಪದ ಕಾವ್ಯವೂ ಇದರಲ್ಲಿದೆ.

ಈ ಕಾವ್ಯಕ್ಕೆ ಟಿಪ್ಪಣಿ ಬರೆಯುತ್ತ ಸಂಪಾದಕರು ''ಸಮಾಜವೊಂದರಲ್ಲಿ ಜನರು ಪರಸ್ಪರ ನಂಬುಗೆ ಮತ್ತು ವಿಶ್ವಾಸಗಳನ್ನು ಗಟ್ಟಿಗೊಳಿಸಿಕೊಳ್ಳಬೇಕು ಎಂಬುದು ಈ ಕವನದ ಆಶಯ... ಭಾಷೆ ಕೊಡುವುದು, ವಚನವೀಯುವುದು, ಮಾತು ಕೊಡುವುದು ಭಯ ಗೌರವ ಪಾವಿತ್ರ್ಯಗಳ ಒಂದು ಪರಂಪರೆಯಾಗಿ ನಡೆದುಕೊಂಡು ಬಂದ ವಿಧಿಯಾಗಿತ್ತು. ಕೊಟ್ಟ ಮಾತಿಗೆ ತಪ್ಪಿದ ವ್ಯಕ್ತಿಯನ್ನು ವಚನ ಭ್ರಷ್ಟನೆಂದು ಸಮಾಜ ಕೀಳಾಗಿ ಕಾಣುತ್ತಿತ್ತು'', ''ಸಹಜ ಧರ್ಮ – ಕಟ್ಟಿಕೊಂಡ ಧರ್ಮಗಳ ತಾಕಲಾಟ''ದ ಚಿತ್ರ ಇದರಲ್ಲಿದೆ, ''...ಮನುಷ್ಯ ಕೊಟ್ಟ ಭಾಷೆಗೆ, ಸತ್ಯ ವಾಕ್ಯಕೆ ಘಾತಕ ಮಾಡಬಾರದು'' ಎಂದೆಲ್ಲಾ ವಿವರಿಸಿ, ಕೊನೆಗೆ ಈ ಪದ್ಯದ ಕುರಿತು ಬರೆದ ಪು.ತಿ.ನ., ಲಂಕೇಶ್, ಟಿ.ಪಿ. ಅಶೋಕ, ಕೆ. ಡಿ. ಕುರ್ತುಕೋಟಿ, ಕೆ. ವಿ. ಸುಬ್ಬಣ್ಣ, ಮೊಗಳ್ಳಿ ಗಣೇಶ್ ಅವರ ಲೇಖನಗಳ ಆಯ್ದ ಭಾಗಗಳನ್ನು ಕೊಟ್ಟಿದ್ದಾರೆ. ಅವರ ಕೆಲವು ವಾಕ್ಯಗಳನ್ನು ಇಲ್ಲಿ ಉದಾಹರಿಸಬಹುದು.

''ಬಹುಶಃ ಇದು ಗಾಂಧೀಜಿಯವರು ಅಹಿಂಸೆಯ ಕುರಿತು ಕಂಡ ಕನಸು'' (ಪು.ತಿ.ನ.), ''ಕೊಟ್ಟ ಭಾಷೆಗೆ ತಪ್ಪದಿರುವುದು ಹಸುವಿನ ಒಳ್ಳೆಯತನ'' (ಲಂಕೇಶ್), ''ಪುಣ್ಯಕೋಟಿಯ ಕತೆಯು ನಮಗೆಲ್ಲಾ ಹೊಸ ಶಕ್ತಿಯನ್ನು, ಭರವಸೆಯನ್ನು ನೀಡಲಿ'' (ಟಿ. ಪಿ. ಅಶೋಕ), ''ಅಹಿಂಸೆಯ ಆತ್ಯಂತಿಕ ಅರ್ಥವನ್ನು ಹುಲಿಯ ಸಾವು ಸಂಕೇತಿಸುತ್ತದೆ'' (ಕೆ. ಡಿ. ಕುರ್ತುಕೋಟಿ), ''ಕ್ರೌರ್ಯ ಅಥವಾ ಸಾವು ಪ್ರಾಣದ ಅಸ್ತಿತ್ವವನ್ನು ನಾಶ ಮಾಡಲಾರದು.... ಹುಲಿತನವು ತಾನಾಗಿ ಕರಗಿಹೋಗಿದೆ'' (ಕೆ. ವಿ. ಸುಬ್ಬಣ್ಣ), ಬ್ರಾಹ್ಮಣ ಪುಣ್ಯಕೋಟಿ, ದಲಿತ ಹುಲಿ...''ಹಿಂಸೆಯ ಕೊಲೆಪಾತಕ ದರ್ಶನದಲ್ಲಿ ಅದು ಹುಲಿಯನ್ನು ಮೀರಿಸಿಬಿಡುತ್ತದೆ'' (ಮೊಗಳ್ಳಿ ಗಣೇಶ್).

ಇಷ್ಟೆಲ್ಲಾ 'ಭಾರವಾದ' ವಿಚಾರಗಳ ಹಿನ್ನೆಲೆಯಲ್ಲಿ ಗೋವಿನ ಹಾಡನ್ನು ಅಧ್ಯಯನ ಮಾಡಬೇಕಾದ ವಿದ್ಯಾರ್ಥಿಗಳು ಎದುರಿಸುವ ಪ್ರಶ್ನೆಗಳು ಎಂಥವು ?

ನಾಲ್ಕು ಭಾಗಗಳಲ್ಲಿರುವ ೨೯ ನುಡಿಗಳ ಈ ಕವನದ ಸಾರವಾದರೂ ಏನು ?

ಮೊದಲನೆ ಭಾಗದಲ್ಲಿ ಕಾಳಿಂಗನೆಂಬ ಗೊಲ್ಲನ 'ಸಿರಿ', ಸುಪುಷ್ಟವಾಗಿ ಮೇದು ಬಂದ ಹಸುಗಳು ಕರುಗಳಿಗೆ ಪ್ರೀತಿಯಿಂದ ಹಾಲು ಕುಡಿಸುವ ಚಿತ್ರಣ. ಗೊಲ್ಲಗೌಡ ಕೊಳಲೂದುತ್ತ, ಬಿಂದಿಗೆ ತುಂಬಿ ಚೆಲ್ಲಿ ಸೂಸುವ ಹಾಲು ಕರೆಯುತ್ತಿರುವ ದೃಶ್ಯ.

ಎರಡನೆ ಭಾಗದಲ್ಲಿ ಹಸಿದ ಹುಲಿ ಪುಣ್ಯಕೋಟಿ ಎಂಬ ಗೋವನ್ನು ಕೊಲ್ಲಲು ಹವಣಿಸುವುದು, ಆಕಳು ತನ್ನ ಕರುವಿಗೆ ಹಾಲು ಕುಡಿಸಿ ಬರುವೆನೆಂದು ಬಿನ್ನಹ ಮಾಡಿಕೊಳ್ಳುವುದು, ''ಹುಸಿಯನಾಡುವೆ'' ಎಂದು ಹೇಳಿದ ಹುಲಿಗೆ, ''ಸತ್ಯವೇ ನಮ ತಂದೆ ತಾಯಿ, ಸರ್ವಬಳಗ, ಅದಕೆ ತಪ್ಪಿ ನಡೆದರೆ ಪರಮಾತ್ಮ ಮೆಚ್ಚಲಾರ'' ಎಂದು ಉತ್ತರಿಸುವ ಸಂಗತಿಗಳಿವೆ.

ಮೂರನೇ ಭಾಗದಲ್ಲಿ ಆಕಳು ಮತ್ತು ಕರುವಿನ ಸಂಭಾಷಣೆ. ಭಾಷೆಯಿತ್ತು ಬಂದೆನೆಂದು ಹೇಳುವ ಆಕಳಿಗೆ, 'ನನ್ನನ್ನು ತಬ್ಬಲಿ ಮಾಡಿ ನೀನೇಕೆ ಅಲ್ಲಿ ಹೋಗಬೇಕು' ಎಂದು ಕರು ಕೇಳುತ್ತದೆ. 'ಕೊಟ್ಟ ಭಾಷೆಗೆ ತಪ್ಪಲಾರೆ, ಕೆಟ್ಟ ಯೋಚನೆ ಮಾಡಲಾರೆ', ಎಂದು ಆಕಳ ಸಮಜಾಯಿಷಿ.

ತನ್ನ ಜತೆಗಾರ ಹಸುಗಳಿಗೆ ಪುಣ್ಯಕೋಟಿಯ ವಿನಂತಿ, ಹೊಂಚುತ್ತಿರುವ ದುಷ್ಟ ವ್ಯಾಘ್ರನಿರುವ ಕಡೆ ಹೋಗಬೇಡ ಎಂಬ ಸಲಹೆ, ಇಬ್ಬರ ಋಣ ತೀರಿತೆಂದು ತಬ್ಬಿಕೊಂಡು ಅಳುವ ಆಕಳ ಚಿತ್ರ.

ನಾಲ್ಕನೇ ಭಾಗದಲ್ಲಿ ಆಕಳು ಹುಲಿಯ ಗವಿಗೆ ಬರುವುದು, ಖಂಡವಿದೆಕೋ, ಮಾಂಸವಿದೆಕೋ ಎಂದೆಲ್ಲಾ ಹೇಳುವುದು, ಹುಲಿ ಕಣ್ಣೀರು ಸುರಿಸುತ್ತ ಈ ಕನ್ಯೆಯನ್ನು ಕೊಂದು ತಿಂದರೆ ಪರಮಾತ್ಮ ಮೆಚ್ಚನು ಎಂದು ಭಾವಿಸಿ ''ಎನ್ನ ಒಡಹುಟ್ಟಕ್ಕ ನೀನು। ನಿನ್ನ ಕೊಂದು ನಾನೇನ ಪಡೆವೆನು ?'' ಎಂದು ಹೇಳಿ ಹಾರಿ ನೆಗೆದು ಪ್ರಾಣ ಬಿಟ್ಟಿತೆಂಬ ಮುಕ್ತಾಯ.

ದುಷ್ಟ ವ್ಯಾಘ್ರ, ಹುಲಿರಾಯ, ಖೂಳ ವ್ಯಾಘ್ರ ಎಂದು ೨ನೇ ಭಾಗದಲ್ಲಿ ಕವನ ಹೇಳುತ್ತದೆ.

ಈ ಹಾಡನ್ನು ಪಾಠ ಮಾಡುವಾಗ, ಮೇಲಿನ ಎಲ್ಲ ವಿದ್ವಾಂಸರ (ಮೊಗಳ್ಳಿ ಅವರನ್ನು ಹೊರತುಪಡಿಸಿ) ಮತ್ತು ಸಂಪಾದಕರ ಅಭಿಪ್ರಾಯವನ್ನೇ ಬೇರೊಂದು ರೀತಿಯಿಂದ ಒತ್ತಿ ಹೇಳುತ್ತಿದ್ದ ವಿದ್ಯಾರ್ಥಿನಿಯೊಬ್ಬಳಿಗೆ ನಾನು ರೇಗಿ ಕೇಳುವಂತಾಯಿತು, ''ನೀನೇ ಆಕಳ ಸ್ಥಾನದಲ್ಲಿದ್ದಿದ್ದರೆ ಏನು ಮಾಡುತ್ತಿದ್ದೆ? ನಾಳೆ ಬಾರೆ ಎಂದು ಹೇಳಿದ ರೌಡಿಯೊಬ್ಬನಿಗೆ ಮಾತು ಕೊಡುತ್ತಿದ್ದೆಯಾ ? ಉಪಾಯ ದಿಂದ ಪಾರಾಗಲು ಹಾಗೆ ಮಾತು ಕೊಟ್ಟರೂ ರೌಡಿಯನ್ನು ಎದುರಿಸಲು ಸಂಬಂಧಿಗಳ, ಸ್ನೇಹಿತರ ನೆರವು ಪಡೆದು ಅವನನ್ನು ಹೊಡೆದು ಹಾಕಲು (ಸಿನೇಮಾಗಳಲ್ಲಿರುವಂತೆ !) ಯತ್ನಿಸುತ್ತಿರಲಿಲ್ಲವೇ ?''

ಹುಡುಗಿ ಅರೆಬರೆ ಮನಸ್ಸಿನಿಂದ ಒಪ್ಪಿಕೊಂಡು ಸುಮ್ಮನಾದಳು. ದುರ್ಬಲ ಆಕಳು, ಸಬಲ ಹುಲಿಗೆ ಮಾತು ಕೊಡುತ್ತಿರುವುದೇಕೆ ? ಅಸಹಾಯಕತೆಯಿರುವುದರಿಂದ ಮತ್ತು ಭಯದಿಂದ ಅಲ್ಲವೇ ? ಇಲ್ಲಿ ಸಮಬಲರಿಬ್ಬರ ನಡುವಿನ ಸಂಬಂಧದ ಪ್ರಶ್ನೆಯಿಲ್ಲ ಎಂಬುದನ್ನು ಗಮನಿಸಿ. ಅಸಮಾನ ನೆಲೆಯಲ್ಲಿರುವ ದುರ್ಬಲ, ಪ್ರಬಲರ ನಡುವಿನ ಮಾತು ಕೊಡುವ ಬಿಡುವ ಸಮಸ್ಯೆ ಇದು. ಹಸುವಿಗೆ ಹುಲ್ಲು ನೈಸರ್ಗಿಕ ಆಹಾರವಿರುವಂತೆ, ಹುಲಿಗೆ ಆಕಳು ನಿಸರ್ಗದತ್ತ ಆಹಾರ, ಇಂದಿಲ್ಲ ನಾಳೆ ತನ್ನನ್ನು ಹುಲಿ ಬಿಡಲಾರದು ಎಂಬ ಅರಿವು ಆಕಳಿಗಿದ್ದೇ ಇದೆ. ಹಾಗಾಗಿ ಅದು ಮಾತು ಕೊಡುತ್ತಿದೆ. ಇಂಥ ಮಾತಿಗೆ ತಂದೆ, ತಾಯಿ, ದೇವರೆಂದು ಭ್ರಮಿಸಲಾದ 'ಸತ್ಯ'ದ ಮೌಲ್ಯ ಹೇಗೆ ಪ್ರಾಪ್ತವಾಗುತ್ತದೆ ? ಇಂಥ ಸುಳ್ಳನ್ನು ಹಾಡು ಹೇಳುತ್ತಿದೆಯಲ್ಲ! ಅದು ಹೋಗಲಿ ಅದರ ಕುರಿತು ಆಲೋಚಿಸಿದ ವಿದ್ವಾಂಸರಾದರೂ ಯಾಕೆ ಈ ಅತ್ಯಂತ ಮಹತ್ವದ ಅಂಶವನ್ನು ಗಮನಿಸದೆ ಹೋದರೋ !

'ಸತ್ಯವಾಕ್ಯ', 'ಮಾತು ಕೊಡುವುದು' ಇದೆಲ್ಲ ಕಾಲ, ದೇಶಗಳಿಗೆ ಸಾಪೇಕ್ಷವಾಗಿರು ವಂಥದು. ಆಕಳು ಹುಲಿಗೆ ಕೊಡುತ್ತಿರುವ 'ಭಾಷೆ'ಯ ಸಂದರ್ಭ ಶೋಷಕ ಶೋಷಿತರ ನಡುವಿನದೆಂದು ಭಾವಿಸುವುದಾದರೆ ಅಸಹಾಯಕ ಸ್ಥಿತಿಯ ದುರ್ಲಾಭ ಮಾಡಿಕೊಳ್ಳುತ್ತಿರುವ ಶೋಷಕನನ್ನು (ಹುಲಿ) ವಂಚಿಸಬೇಕಾದದ್ದೋ, ಎದುರಿಸ ಬೇಕಾದದ್ದೋ ನ್ಯಾಯವೇ ಹೊರತು, ಸಾಚಾ ಆಗಿ, ಭೋಳೆತನದಿಂದ ಕುತ್ತಿಗೆ ಕೊಡುವುದಲ್ಲ.

ಆದರೆ ಹಾಲು ಕುಡಿದು ಕೊಳಲೂದಿ ಬಾಳುತ್ತಿರುವ ಗೊಲ್ಲನಿಂದ ಯಾವ ಸಂರಕ್ಷಣೆಯೂ ಇಲ್ಲದ ಆಕಳು ಒಂಟಿಯಾಗಿ ಹುಲಿಯನ್ನು ಎದುರಿಸುವ ದುರ್ಭರ ಸನ್ನಿವೇಶದಲ್ಲಿ ಅದು ಬಲಿಯಾಗುವುದೊಂದೇ ದಾರಿ. ಅಲ್ಲಿ 'ಕೊಟ್ಟ ಭಾಷೆ', 'ಸತ್ಯ ವಾಕ್ಯ' ಇವೆಲ್ಲಕ್ಕೂ ಯಾವ ಅರ್ಥವೂ ಇಲ್ಲ. ತಪ್ಪಿಸಿಕೊಳ್ಳುವ 'ಕೆಟ್ಟ ಯೋಚನೆ ಮಾಡಲಾರೆ' ಎನ್ನುವ ಆಕಳು 'ದುಷ್ಟ ವ್ಯಾಘ್ರ'ನ ಬಗ್ಗೆ ಕರುವಿಗೇಕೆ ಎಚ್ಚರಿಕೆ ನೀಡಬೇಕಿತ್ತು ? 'ವ್ಯಾಘ್ರ' ದುಷ್ಟನೆಂದು ಅದಕ್ಕೆ ತಿಳಿದಿದೆಯಲ್ಲವೇ ? ದುಷ್ಟನಿಗೆ ಮಾತುಕೊಡುವ ಇಕ್ಕಟ್ಟಿಗೆ ಸಿಕ್ಕಿಬಿದ್ದಿದೆಯಲ್ಲವೇ ?

ಆದರೆ ನಮ್ಮ ಹಾಡಿನ ಹುಲಿ ಖಂಡಿತ ದುಷ್ಟನಲ್ಲ, ಕೊನೆಯ ಎರಡು ನುಡಿಗಳಲ್ಲಿರುವಂತೆ ಅದು ಪುಣ್ಯಕೋಟಿಯ ಮಾತು ಕೇಳಿ, ಕಣ್ಣೀರು ಸುರಿಸಿ, ಕೊಂದು

ತಿಂದರೆ 'ಮೆಚ್ಚನಾ ಪರಮಾತ್ಮನೆಂದು' ಭಾವಿಸಿ ತಾನೇ ಆತ್ಮಹತ್ಯೆ ಮಾಡಿಕೊಳ್ಳುತ್ತದೆ.

ಇದು ತೀರ ಅವಾಸ್ತವ, ಅಸಂಬದ್ಧ, ಕಾಲ್ಪನಿಕ. ಯಾವ ಶೋಷಕನೂ ಇಂಥ ತ್ಯಾಗ ಮಾಡಿದ ನಿದರ್ಶನಗಳಿಲ್ಲ. 'ಹುಲಿ ಏಕೆ ಸಾಯಬೇಕು ?' ಎಂದ ಕುರ್ತುಕೋಟಿಯವರ ಪ್ರಶ್ನೆ ಸಮಂಜಸವೇ. ಆದರೆ ಅವರು ಕೊಡುವ ಉತ್ತರ ಸರಿಯಲ್ಲ. ಆಕಳು 'ಮೆಚ್ಚನಾ ಪರಮಾತ್ಮನು' ಎಂದು ಹೇಳುವ ನೆಲೆ, ಹುಲಿ ಅದೇ ಮಾತನ್ನು ಹೇಳುವ ನೆಲೆಗಳನ್ನು ತುಲನೆ ಮಾಡಿ ನೋಡಬೇಕು. 'ಸತ್ಯವಾಕ್ಯಕೆ ತಪ್ಪಿ ನಡೆದರೆ' ಎಂಬ ಹಿನ್ನೆಲೆ ಆಕಳಿಗಿದ್ದರೆ, 'ಕನ್ನೆಯಿವಳನು ಕೊಂದು ತಿಂದರೆ' ಎಂಬ ಹಿನ್ನೆಲೆ ಹುಲಿಗಿದೆ. ಹತ್ಯೆಯಾಗಲಿಕ್ಕೆ ಬರುವ ಆಕಳು ಹುಲಿಯ ದೃಷ್ಟಿಯಲ್ಲಿ 'ಒಡಹುಟ್ಟಕ್ಕ' ಆಗಿಬಿಡುತ್ತದೆ. ಈ ಭಾವನೆಯೆ ಹುಲಿಗೆ ತಾನು ಸತ್ತುಹೋಗಲು ಪ್ರೇರಿಸಿರುವಂತಿದೆ. ಕೊಂದು ತಿನ್ನಬೇಕೆಂಬ ಆಶಯ ವಿಚಾರದ ವಿರುದ್ಧ ಹುಲಿಯ ಪಶ್ಚಾತ್ತಾಪದ ವರ್ತನೆ – 'ಆತ್ಮಹತ್ಯೆ'.

(ಇನ್ನು ಮುಂದೆ ಹುಲಿಗಳು ತಿನ್ನಬೇಕಾದುದಾದರೂ ಏನನ್ನು? ಯಾವ ಪ್ರಾಣಿಯನ್ನು ತಿಂದರೂ ಪಾಪವಾಗಬಹುದಲ್ಲ? ಅಥವಾ ಮಾತು ಕೊಟ್ಟು ತಪ್ಪದ ಪುಣ್ಯಕೋಟಿಯಂಥ ಪ್ರಾಣಿಯನ್ನು ಮಾತ್ರ ತಿನ್ನಬಾರದೆಂದೋ ?)

## ಸುದ್ದಿ-ಸ್ವಾರ(ವಾ)ಸ್ಯ !

ಜಯಲಲಿತಾ ಪ್ರಧಾನಿಯಾಗಿ ಕೆಂಪು ಕೋಟೆಯನ್ನೇರಿ ರಾಷ್ಟ್ರ ಮುನ್ನಡೆಸುವುದನ್ನು ತಡೆಯಲು ಯಾರಿಂದಲೂ ತಡೆಯಲಾಗದು. - **AIDMK** ಅಧ್ಯಕ್ಷ







- ಎಸ್. ಶಶಿಕಾಂತ್

'ಆತ್ಮಹತ್ಯೆ'ಯೂ ಬಹುದೊಡ್ಡ 'ಹಿಂಸೆ'. ಪರರನ್ನು ಹಿಂಸಿಸುವುದಕ್ಕಿಂತ ತನ್ನನ್ನು ತಾನೇ ಹಿಂಸಿಸಿಕೊಳ್ಳುವುದನ್ನು ಜೈನ ಧರ್ಮ ಪ್ರತಿಪಾದಿಸುವಷ್ಟು ಬಲವಾಗಿ ಬೇರಾವ ಮತಪಂಥ, ಚಿಂತನಾ ಪರಂಪರೆಗಳೂ ಹೇಳಲಾರವು. ಅದರ ಪ್ರಭಾವ ಈ ಹಾಡಿನ ಮೇಲೆ ಇದ್ದಿರುವ ಸಾಧ್ಯತೆಯನ್ನು ಗಮನಿಸಬೇಕಿದೆ.

'ಗಾಂಧಿ', 'ಅಹಿಂಸೆ'ಗಳ ಕುರಿತು ಮಾತಾಡಿದ ವಿದ್ವಾಂಸರು 'ಸ್ವಹಿಂಸೆ'ಯ ಅತಿರೇಕದ, ಭಯಾನಕ ಕತೆಯ ಬಗ್ಗೆ ಯೋಚಿಸಬೇಕಾಗಿತ್ತು. ಹುಲಿ ಸಾಯದೇ ಪುಣ್ಯಕೋಟಿಯನ್ನು ಹಿಂದೆ ಕಳಿಸಿಬಿಟ್ಟಿದ್ದರೆ ಸಾಕಿತ್ತಲ್ಲ. ವಾಸ್ತವಕ್ಕೆ ಈ ಅಂಶ ಹತ್ತಿರವಾದರೂ ಆಗುತ್ತಿತ್ತು. ಆದರೆ ಆಕಳ ಬಗ್ಗೆ ('ಪುಣ್ಯ-ಕೋಟಿ') ವೈದಿಕಶಾಹಿ ಹುಟ್ಟು ಹಾಕಿರುವ ಸಾಂಸ್ಕೃತಿಕ ಭೂಮ ಕಲ್ಪನೆಗಳ ಹಿನ್ನೆಲೆಯನ್ನು ಈಗ ನೆನಪಿಸಿಕೊಳ್ಳಬೇಕು.

ಆಕಳು ಎಲ್ಲ ದೇವಾನುದೇವತೆಗಳನ್ನು ಮೈ ದುಂಬಿಸಿಕೊಂಡು ಅತ್ಯಂತ ಪವಿತ್ರ, ಪೂಜ್ಯವೆಂದಾಗಿರುವ 'ದೈವ'ವಲ್ಲವೇ ? ಅದರ ಪ್ರಭಾವ ಎಷ್ಟು ತೀಕ್ಷ್ಣವೆಂದರೆ 'ದುಷ್ಟ' ಹುಲಿಯೂ ಬೇಕಾದರೆ 'ಹಾರಿ ನೆಗೆದು' ಪ್ರಾಣ ಬಿಡಬಲ್ಲದು. ಕಹಿ ವಾಸ್ತವಗಳಿಂದ ಹೀಗೆ ಭ್ರಮಾತ್ಮಕ ಕಲ್ಪನೆಗಳಿಗೆ ಹೋಗಿ ನಿಲ್ಲುವ ಕಾವ್ಯ – ಅಧ್ಯಯನಕ್ಕೆ ಎಷ್ಟೊಂದು ಎಚ್ಚರಿಕೆ ಬೇಡುತ್ತದೆಂಬುದನ್ನು ಸೂಚಿಸಲಾರದೇ?

ಈಗ ಹೇಳಿ, ಸಂಪಾದಕರು ಅಂದುಕೊಂಡಿರುವ ವಿಚಾರಗಳು 'ನಿಜವಾಗಿಯೂ' ಈ ಪದ್ಯದಲ್ಲಿ ಇವೆಯೇ ? ಇಲ್ಲವಾದ್ದರಿಂದ ವಿದ್ಯಾರ್ಥಿಗಳಿಗೆ 'ಮಿಸ್ ಗೈಡ್' ಮಾಡುತ್ತಿರುವ ಅಪರಾಧಕ್ಕೆ ಇವರು ಗುರಿಯಾಗುತ್ತಿಲ್ಲವೇ ?

ಎಸ್. ಎಸ್. ಹಿರೇಮಠ
ಕನ್ನಡ ಪ್ರಾಧ್ಯಾಪಕ, ಅಂಬ್ಲಿ ದೊಡ್ಡ ಭರಮಪ್ಪ ಪ್ರಥಮ ದರ್ಜೆ ಕಾಲೇಜು, ಹರಪನಹಳ್ಳಿ-೫೮೩ ೧೩೧

# ಬಂಡಾಯ ಸಾಹಿತ್ಯ ಅಂದು - ಇಂದು

ಕನ್ನಡದ ಪರಂಪರೆಯಲ್ಲಿ ಬಂಡಾಯ ಸಂವೇದನೆ ಯಾವತ್ತೂ ಜೀವಂತವಾಗಿದೆ. ಆದರೆ ಅದರ ವಿನ್ಯಾಸಗಳು ಮಾತ್ರ ಕಾಲದಿಂದ ಕಾಲಕ್ಕೆ, ಅಕ್ಷರ ಸಾಹಿತ್ಯದಿಂದ ಮೌಖಿಕ ಸಾಹಿತ್ಯಕ್ಕೆ ಭಿನ್ನವಾಗುತ್ತಾ ಬಂದಿದೆ. ಈ ಹಿನ್ನೆಲೆಯಲ್ಲಿ ಕನ್ನಡದಲ್ಲಿ ಎರಡು ಅಭಿವ್ಯಕ್ತಿ ಪರಂಪರೆಗಳಿರುವುದನ್ನು ಗುರುತಿಸಿಕೊಳ್ಳಬೇಕು. ಒಂದು, ಅಕ್ಷರ ರೂಪಿಯಾದ ಸಾಹಿತ್ಯ. ಇನ್ನೊಂದು, ಮಾತಿನ ರೂಪದ ಮೌಖಿಕ ಸಾಹಿತ್ಯ.

ಅಕ್ಷರ ರೂಪಿಯಾದ ಕನ್ನಡ ಶಿಷ್ಟ ಸಾಹಿತ್ಯ ಪರಂಪರೆಯಲ್ಲಿ ಮೈವೆತ್ತಿರುವ ಪ್ರತಿಭಟನೆಯ ನೆಲೆಗಳನ್ನು ಈಗಾಗಲೇ ಅನೇಕ ವಿಮರ್ಶಕರು ಗುರುತಿಸಿದ್ದಾರೆ. ಪಂಪ, ಹರಿಹರ, ಆಂಡಯ್ಯ, ಕುಮಾರವ್ಯಾಸ, ಸರ್ವಜ್ಞ – ಹೀಗೆ ಇವರ ಪಟ್ಟಿ ದೊಡ್ಡದಿದೆ. ಇವರಲ್ಲಿ ಪ್ರತಿಭಟನೆಯ ನೆಲೆಗಳು ಎಷ್ಟೇ ಇದ್ದರೂ ಅವರ ಒಟ್ಟು ಸಾಹಿತ್ಯವು ಆಳವಾದ ಸಾಮಾಜಿಕ ಮತ್ತು ರಾಜಕೀಯ ಪ್ರಜ್ಞೆಯಿಂದ ಪುಟಗೊಂಡು, ಸಮಾಜದ ಸಮಗ್ರ ಬದಲಾವಣೆ ಅಥವಾ ಇರುವ ಜಡ ವ್ಯವಸ್ಥೆಗೆ ಪರ್ಯಾಯವಾದ ಆರೋಗ್ಯಕರ ಸಮಾಜ ನಿರ್ಮಾಣದ ಕನಸನ್ನು ಹೊರುವುದಿಲ್ಲ. ಆದ್ದರಿಂದ ಈ ಧಾರೆಯ ಸಾಹಿತ್ಯವನ್ನು ಬಂಡಾಯ ಸಾಹಿತ್ಯವೆಂದು ಕರೆಯಲಾಗುವುದಿಲ್ಲ. ಈ ನಡುವೆ ಕಾಣುವ ವಚನ ಸಾಹಿತ್ಯವು ಭಿನ್ನವಾದ ಅಂತಃಸತ್ವವನ್ನು ಪಡೆದಿದ್ದು ಅದು ಸಮಾಜ ಬದಲಾವಣೆಯ ತೀವ್ರ ಒತ್ತಾಸೆಯಲ್ಲಿಯೇ ಒಡಮೂಡುತ್ತದೆ. ಇಲ್ಲಿ ಇದುವರೆಗೂ ಮಾತಾಗದ ಅನೇಕ ಸಾಮಾಜಿಕ ವರ್ಗ ಸಂವೇದನೆಗಳು ಮಾತಾಡುತ್ತವೆ. ಅಂಬಿಗರ, ಮಾದಾರ, ಡೋಹರ ಮೊದಲಾದ ಜಾತಿ ಮತ್ತು ವೃತ್ತಿ ಮೂಲ ಸಂವೇದನೆಗಳಲ್ಲದೆ ಅಕ್ಕಮಹಾದೇವಿ, ಸಂಕವ್ವೆ ಮೊದಲಾದವರ ಮೂಲಕ ಪುರುಷ ಬಂಧನದ ಹೆಣ್ಣು, ವೇಶ್ಯೆಯ ನಿಷ್ಠೆ ಮೊದಲಾದ ಸ್ತ್ರೀ ಸಂಬಂಧಿಯಾದ ಸಂವೇದನೆಗಳು ಇಲ್ಲಿ ಮಾತಾಗುತ್ತವೆ.

ಹೀಗೆ ವಚನ ಸಾಹಿತ್ಯ ಮತ್ತು ಚಳುವಳಿಯ ಮೂಲಕ ಕನ್ನಡ ಸಾಹಿತ್ಯ ಮತ್ತು ಪರಂಪರೆಯು ಹಿಂದೆಂದೂ ಕಾಣದ ವಿಶಿಷ್ಟ ಸಂವೇದನೆಯೊಂದನ್ನು ಮೊಟ್ಟಮೊದಲಿಗೆ ಕಾಣುವಂತಾಯಿತು. ಆದರೆ ಇಲ್ಲಿಯೇ ಗುರುತಿಸಿಕೊಳ್ಳಬೇಕಾದ ವಚನ ಸಾಹಿತ್ಯ ಮತ್ತು ಸಂವೇದನೆಗಳ ದೊಡ್ಡ ಮಿತಿಯೆಂದರೆ ಅಲ್ಲಿ ಮಾತಾದ ಎಲ್ಲಾ ಸಾಮಾಜಿಕ ಸಂವೇದನೆಗಳು ತಮ್ಮ ಜಾತಿ ಮೂಲಕ್ಕೆ ಹೊರತಾಗಿ ನಿಂತು ಅಥವಾ ಶಿವ ಸಂಸ್ಕೃತಿಗೆ ಮಾರ್ಪಟ್ಟು ಅನಂತರವಷ್ಟೆ ಮಾತನಾಡತೊಡಗಿದವು ಎಂಬುದು. ಹೀಗಾಗಿ ವಚನ ಸಂವೇದನೆಗೆ ಬಹುಮುಖತ್ವವು ದೊರಕದೇ ಹೋಯಿತು.

ಹೀಗೆ ಹೆಚ್ಚು ಸಮಾಜವಾದಿಯಾಗಬಹುದಾಗಿದ್ದ ಸಮಾಜದ ಬಹುಮುಖಿ ಸಂವೇದನೆಗಳನ್ನು ಏಕೀಕೃತ ಶಿವ ಸಂವೇದನೆಯನ್ನಾಗಿ ಮಾಡಿದ ವಚನ ಸಂಸ್ಕೃತಿಯು ಈ ಒಂದು ಮಿತಿಯ ನಡುವೆಯೇ ಸಮಾಜದ ಬದಲಾವಣೆಗೆ ತೀವ್ರವಾಗಿ ಹಂಬಲಿಸಿತು; ಆ ನಿಟ್ಟಿನಲ್ಲಿ ನಡೆ ಮತ್ತು ನುಡಿಗಳನ್ನು ಒಂದನ್ನಾಗಿ ಮಾಡಿಕೊಳ್ಳುತ್ತಾ ಬಂದ ಶರಣರು ಕನ್ನಡದ ಪರಂಪರೆಯಲ್ಲಿಯೇ ಹೊಸ ಅಧ್ಯಾಯವಾಗಿ ಮಾರ್ಪಟ್ಟರು. ಆದ್ದರಿಂದ ಕಳೆದ ಮೂರು ದಶಕಗಳ ಬಂಡಾಯದ ಚರ್ಚೆಯಲ್ಲಿ ವಚನ ಚಳುವಳಿಯ ಘಟ್ಟವು ನಮಗೆ ಪೂರ್ವಭಾವಿಯಾಗಿ ಹೆಚ್ಚು ಮುಖ್ಯವಾಗುತ್ತದೆ.

ವಚನ ಸಂಸ್ಕೃತಿಯ ಆಶಯಗಳು ಹರಿಹರ, ರಾಘವಾಂಕ, ಗುಬ್ಬಿಯ ಮಲ್ಲಣಾರ್ಯ ಮೊದಲಾದ ಕವಿಗಳ ಮೂಲಕ ಜಡವಾಗತೊಡಗಿದಾಗ ಅವುಗಳಿಗೆ ಪರ್ಯಾಯವಾದ ಸಾಂಸ್ಕೃತಿಕ ನೆಲೆಯಲ್ಲಿ ಮಂಟೇಸ್ವಾಮಿ ಮೊದಲಾದ ಪರಂಪರೆಗಳು ಕ್ರಿಯಾಶೀಲವಾಗತೊಡಗಿದವು. ಅಲ್ಲಿ ವಚನ ಸಂಸ್ಕೃತಿಯ ನಿರ್ವಚನವು ತನ್ನ ಪರಿಪ್ರೇಕ್ಷ್ಯದಲ್ಲಿ ನಡೆದದ್ದಲ್ಲದೆ, ಶಿಷ್ಟ ನೆಲೆಯ ವೀರಶೈವ ಸಂವೇದನೆಗಳಿಗೆ ಸಹ ಪ್ರತಿಕ್ರಿಯೆಯಾಗಿ ಅವು ಮೂಡಿದವು. ಕ್ರಮೇಣ ಅವು ಸಹ ಜನಪದರ ಮಡಿಲಲ್ಲಿ ಮತವಾಗತೊಡಗಿದ್ದು ಅವುಗಳ ಮುಖ್ಯ ಮಿತಿಯಾಗುತ್ತದೆ.

ಹೀಗೆ ವಚನ ಸಂವೇದನೆಯನ್ನು ತಪ್ಪಾಗಿ ವ್ಯಾಖ್ಯಾನಿಸತೊಡಗಿದ ಮಧ್ಯಕಾಲದ ವೀರಶೈವ ಸಾಹಿತ್ಯಕ್ಕೆ ಜನಪದರ ನೆಲೆಯಲ್ಲಿ ಬಂಡಾಯವಾಗಿ ಮೂಡಿದ ಮಂಟೇಸ್ವಾಮಿ ಮೊದಲಾದ ಈ ಪರಂಪರೆಗಳ ಅಧ್ಯಯನ ಇನ್ನೂ ಹೆಚ್ಚಾಗಬೇಕೆಂಬುದು ಇಲ್ಲಿಯ ಆಶಯ. ಈ ನಿಟ್ಟಿನಲ್ಲಿ ಆಗಿರುವ ಅಧ್ಯಯನಗಳನ್ನು ಮುಖ್ಯವೆಂದು ಪರಿಗಣಿಸಿಯೇ ಈ ಮಾತನ್ನು ಆಡುತ್ತಿದ್ದೇನೆ.

ಹೀಗೆ ಒಟ್ಟು ಶಿಷ್ಟ ಮತ್ತು ಮೌಖಿಕ ಪರಂಪರೆಯ ಕನ್ನಡ ಸಾಹಿತ್ಯದಲ್ಲಿ ವಚನ ಚಳುವಳಿಯನ್ನು ಬಂಡಾಯ ಪರಂಪರೆಯ ಮೊದಲ ಮುಖ್ಯ ಘಟ್ಟವೆಂದು ಕರೆಯಬಹುದು. ಇದರ ತರುವಾಯ ಅಂತಹದೇ ಮತ್ತೊಂದು ಘಟ್ಟ ಕಾಣಿಸಿಕೊಳ್ಳುವುದು ಕಳೆದ ಶತಮಾನದ ಎಪ್ಪತ್ತರ ದಶಕದಲ್ಲಿ. ಆದರೆ ಎಪ್ಪತ್ತರ ದಶಕದ ಸಂವೇದನೆಗಳು ಮೂಲ ಸಾಮಾಜಿಕ ಸ್ಮೃತಿಗಳಲ್ಲಿಯೇ ವ್ಯಕ್ತವಾದದ್ದು ವಿಶಿಷ್ಟ ಮತ್ತು ಚಾರಿತ್ರಿಕ ಮಹತ್ವದ ಸಂಗತಿ ಎನಿಸುತ್ತದೆ. ಅದನ್ನು ಎಸ್.ಎಸ್. ಹಿರೇಮಠರ ಮಾತಿನಲ್ಲಿ ಹೇಳುವುದಾದರೆ ''ಸಾವಿರಾರು ವರ್ಷಗಳ ಕನ್ನಡ ಸಾಹಿತ್ಯದ ಸುದೀರ್ಘ ಪರಂಪರೆಯಲ್ಲಿ ಶರಣರಾಗಿ ಮಾರ್ಪಡದೆ ಹೊಲೆಮಾದಿಗರಾಗಿಯೇ ಅನೇಕರು ಮಾತನಾಡಿದ ಸಾಹಿತ್ಯ ಸಿಗುವುದು ದಲಿತ-ಬಂಡಾಯ ಘಟ್ಟದಲ್ಲಿ ಮಾತ್ರ.'' ಅಂದರೆ ಕನ್ನಡ ಸಾಹಿತ್ಯದಲ್ಲಿ ಜಾತಿ ಮೌಲ್ಯದ ಸಾಚಾ ಸಂವೇದನೆಗಳು ಸಮಾಜವಾದಿ ನೆಲೆಯಲ್ಲಿ ಪ್ರಕಟವಾದದ್ದು ಈ ಕಾಲದಲ್ಲಿ ಮಾತ್ರ.

ಹೀಗೆ ಕರ್ನಾಟಕದಲ್ಲಿ ಬಹುತೇಕ ಜಾತಿ ಮೂಲದ ಸಂವೇದನೆಗಳು ಇತಿಹಾಸದ ಗರ್ಭದಿಂದ ಹೊರಬಂದು ಮಾತನಾಡಿದವು. ಕತೆ, ಕಾವ್ಯ, ನಾಟಕ, ಕಾದಂಬರಿ ಹೀಗೆ ಸಾಹಿತ್ಯದ ಬಹುತೇಕ ಪ್ರಕಾರಗಳನ್ನು ಇದು ಆವರಿಸಿತು. ಇಂತಹ ಸಾಹಿತ್ಯ ಸೃಷ್ಟಿಗೆ ಚಳುವಳಿಗಳು ಪೂರಕವಾಗಿದ್ದವು. ಇವುಗಳಲ್ಲಿ ದಲಿತ, ಸ್ತ್ರೀವಾದಿ ಚಳುವಳಿಗಳು ತೀವ್ರವಾಗಿದ್ದವಲ್ಲದೆ, ರೈತ, ಕನ್ನಡ ಮತ್ತು ಹಿಂದುಳಿದ ವರ್ಗಗಳಲ್ಲಿ ಮೂಡುತ್ತಿದ್ದ ಜಾಗೃತ ಪ್ರಜ್ಞೆಯೂ ಇವುಗಳಿಗೆ ಪೋಷಕವಾಗಿತ್ತು.

ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ

ಹೀಗೆ ಎಪ್ಪತ್ತು ಎಂಬತ್ತರ ದಶಕಗಳಲ್ಲಿ ಕಾಣಿಸಿಕೊಂಡ ಸಾಹಿತ್ಯದಲ್ಲಿ ಊಳಿಗಮಾನ್ಯ ಸಂಸ್ಕೃತಿಯ ಶೋಷಿತ ನೆಲೆಗಳು ಪ್ರಧಾನವಾಗಿ ಅನಾವರಣಗೊಂಡವಲ್ಲದೆ, ಸಾಮಾಜಿಕ ಮತ್ತು ಲಿಂಗ ತಾರತಮ್ಯದ ನೆಲೆಗಳು, ಇತಿಹಾಸದ ಪುನಾರಚನೆಯ ಪಾಠಗಳು ಮುಖ್ಯ ಸ್ಥಾಯಿಗಳಾಗಿ ಮೂಡಿಬಂದವು. ಇಲ್ಲಿ ಹೊಸ ಸಮಾಜದ ಕನಸು ಸಾಹಿತ್ಯವೇ ಅಲ್ಲದೆ ರಂಗಭೂಮಿ, ಚಿತ್ರಕಲೆ ಮೊದಲಾದ ವಿವಿಧ ಕಲಾಪ್ರಕಾರಗಳಿಗೆ ಹೊಸ ಆಯಾಮಗಳನ್ನು ಕಲ್ಪಿಸಿತು. ಇದಕ್ಕೆ ಪೋಷಕವಾಗಿ ಅಂಬೇಡ್ಕರ್, ಮಾರ್ಕ್ಸ್, ಲೋಹಿಯಾ, ಪೆರಿಯಾರ್ ಸಿದ್ಧಾಂತಗಳು ಆರೋಗ್ಯಕರ ಗುಂಪುಗಳನ್ನು ನಿರ್ಮಿಸುತ್ತಿದ್ದವು. ಇವೆಲ್ಲವುಗಳಿಗೆ ಚರ್ಚಾ ಮತ್ತು ಕ್ರಿಯಾ ವೇದಿಕೆಯಾಗಿ ಬಂಡಾಯ ಸಾಹಿತ್ಯ ಸಂಘಟನೆ ಮತ್ತು ಅದು ವ್ಯವಸ್ಥೆ ಮಾಡುತ್ತಾ ಬಂದ ತನ್ನ ಜಿಲ್ಲಾ ಮತ್ತು ತಾಲ್ಲೂಕು ಶಾಖೆಗಳ ಕಾರ್ಯಕ್ರಮಗಳು ಮತ್ತು ರಾಜ್ಯ ಸಮ್ಮೇಳನಗಳು ಪೋಷಕವಾಗಿದ್ದವು. ಇವೆಲ್ಲವುಗಳ ಭಾಗವಾಗಿಯೇ ಬೀದಿ ನಾಟಕ, ಪುಸ್ತಕ ಜಾಥಾ, ಧರಣಿ - ಪ್ರತಿಭಟನೆಗಳನ್ನು ಗುರುತಿಸಿಕೊಳ್ಳಬೇಕು.

ಹೀಗೆ ಅಂದಿನ ಬಂಡಾಯವು ಸಿದ್ಧಾಂತ, ಚಿಂತನೆ ಮತ್ತು ಕ್ರಿಯೆಗಳ ಸಂಲಗ್ನ ಸ್ಥಿತಿಯಲ್ಲಿ ಆರೋಗ್ಯಕರ ಸಮಾಜವಾದಿ 'ಕಲ್ಯಾಣ'ವನ್ನು ನಿರ್ಮಿಸುತ್ತಾ, ಯುವ ಜನಾಂಗವನ್ನು ಆಕರ್ಷಿಸಿದ್ದಲ್ಲದೆ, ಅಷ್ಟೊತ್ತಿಗಾಗಲೇ ಬರೆದು ನವ್ಯರೆಂದು ಪ್ರತಿಷ್ಠಿತರಾಗಿದ್ದ ಅನೇಕರನ್ನು ತನ್ನ ಪ್ರಭಾವಕ್ಕೆ ಒಳಪಡಿಸಿತ್ತು. ಇದರ ಪರಿಣಾಮವಾಗಿ ತೇಜಸ್ವಿಯಂಥವರಿಂದ 'ತಬರನ ಕತೆ'ಯಂತಹ ಕತೆಗಳು, ಲಂಕೇಶರಂಥವರಿಂದ 'ಅವ್ವ'ನಂತಹ ಪದ್ಯಗಳು, ಅನಂತಮೂರ್ತಿ ಅಂಥವರಿಂದ 'ಸಂಸ್ಕಾರ'ದಂತಹ ಕಾದಂಬರಿಗಳು ಮೂಡಲು ಸಾಧ್ಯವಾಯಿತು. ಈ ಬದಲಾವಣೆಯ ಪ್ರಕ್ರಿಯೆ ಎಷ್ಟರಮಟ್ಟಿಗೆ ತೀವ್ರವಾಗಿತ್ತೆಂದರೆ, ಬಂಡಾಯದ ಕಾಲವನ್ನು ಹಾದುಹೋಗುತ್ತಿದ್ದ ನವೋದಯ, ನವ್ಯ ಮೊದಲಾದ ಯಾವುದೇ ಮನೋಧರ್ಮದ ಲೇಖಕರಿಗೆ ಸಹೃದಯ ಪ್ರಭಾವ ವಲಯದಿಂದ ಹೊರಗುಳಿದು ಬರೆಯುವುದಕ್ಕೆ ಸಾಧ್ಯವಾಗಲಿಲ್ಲ. ಪ್ರಗತಿಶೀಲರೆ ಪ್ರಭಾವಕ್ಕೊಳಗಾಗಿ ಕುವೆಂಪುರವರು 'ಕಲ್ಕಿ' ಬರೆದಂತೆ ಇಲ್ಲಿಯೂ ವಿವಿಧ ಪಂಥಗಳ ಮುಖ್ಯ ಲೇಖಕರು ಬಂಡಾಯ ಸಂವೇದನೆಗಳಿಗೆ ಮಾತುಗಳಾಡತೊಡಗಿದರು. ಇದನ್ನು

ಡಿ. ಆರ್. ನಾಗರಾಜರು 'ಪರಿಷ್ಕೃತ ನವ್ಯ' ಎಂದು ಕರೆದದ್ದನ್ನು ಇಲ್ಲಿ ನೆನಪಿಸಿಕೊಳ್ಳಬೇಕು. ಹೀಗೆ ಎಪ್ಪತ್ತು ಮತ್ತು ಎಂಬತ್ತರ ದಶಕಗಳ ಬಂಡಾಯ ಸಾಹಿತ್ಯವು ಚಿಂತನೆ-ಸೈದ್ಧಾಂತಿಕತೆ ಮತ್ತು ಚಳುವಳಿಗಳ ಸಂಲಗ್ನ ಸ್ಥಿತಿಯಲ್ಲಿ ಹೆಚ್ಚು ತೀವ್ರವಾಗಿರುವುದಕ್ಕೆ ಸಾಧ್ಯವಾಯಿತು. ಇದರ ಪರಿಣಾಮವಾಗಿ ಈ ಸಾಹಿತ್ಯವು ಸಹಜವಾಗಿಯೇ ಜನಮುಖಿಯಾಗಿ ಹರಿಯಲು ಶಕ್ತವಾಯಿತು.

ಹೀಗೆ ತೀವ್ರ ಜನಪರತೆ ಮತ್ತು ಜನಮುಖಿತೆಗಳನ್ನು ಏಕಕಾಲಕ್ಕೆ ಪಡೆದಿದ್ದ ಅಂದಿನ ಬಂಡಾಯ ಸಾಹಿತ್ಯವು ಸೂಕ್ತ ವಿಮರ್ಶೆಯ ನ್ಯಾಯವನ್ನು ಮಾತ್ರ ಪಡೆಯದೆ ಹೋದದ್ದು ವಿಪರ್ಯಾಸ. ಆದರೆ ಆ ಕೊರತೆ ಇತ್ತೀಚಿನ ವರ್ಷಗಳಲ್ಲಿ ನೀಗುತ್ತಿರುವುದು ಆರೋಗ್ಯಕರ ಬೆಳವಣಿಗೆ ಎನಿಸುತ್ತದೆ. ಈ ಎಲ್ಲವುಗಳ ನಡುವೆಯೇ ಅಂದು ಸೂಕ್ತ ವಿಮರ್ಶೆಗೆ ಒಳಪಡದ ಕುಂ.ವೀ. ಮತ್ತು ಸಾ.ರಾ. ಅವರ ಕತೆ-ಕಾದಂಬರಿಗಳು ಇತ್ತೀಚೆಗೆ ಸೂಕ್ತ ವಿಮರ್ಶೆಗೆ ಒಳಪಡುತ್ತಿವೆ ಎನಿಸುತ್ತದೆ. ಅವರ ಕೃತಿಗಳಲ್ಲಿನ ದಲಿತ ಮತ್ತು ಮುಸ್ಲಿಂ ಬದುಕಿನ ಮೌಲ್ಯ ವ್ಯವಸ್ಥೆ ಉತ್ಪ್ರೇಕ್ಷೆಗೆ ಒಳಪಟ್ಟಿವೆಯೋ ಎಂಬ ಪ್ರಶ್ನೆಗಳನ್ನಿಟ್ಟುಕೊಂಡು ಇತ್ತೀಚಿನ ವಿಮರ್ಶೆಗಳು ನಡೆಯುತ್ತಿವೆ.

ಹೀಗೆ ಕೆಲವು ಅನುಮಾನಗಳ ನಡುವೆಯೇ ಸಿದ್ಧಗೊಂಡ ಬಂಡಾಯ ಸಾಹಿತ್ಯವು ಚಾರಿತ್ರಿಕವಾಗಿ ಮಹತ್ವದ್ದೆನಿಸುತ್ತದೆ.

ಬಂಡಾಯವು ಇವತ್ತಿಗೂ ಜೀವಂತ. ಈ ಮಾತನ್ನು ಹೇಳಲು ಕಾರಣವೆಂದರೆ, ಬಂಡಾಯವು ಅವತ್ತು ಇತ್ತು, ಇವತ್ತು ಇದೆಯೇ, ಎಂಬ ಪ್ರಶ್ನೆಗಳನ್ನು ಕೇಳುತ್ತಲೇ ವರ್ತಮಾನಕ್ಕೆ ಕುರುಡರಾದವರ ನಡುವೆ ನಾವಿರುವುದರಿಂದ ಇಂತಹ ಮಾತುಗಳು ಅಪೇಕ್ಷಣೀಯ. ಈ ಹಿನ್ನೆಲೆಯಲ್ಲಿ ದಲಿತ, ಮುಸ್ಲಿಂ, ಸ್ತ್ರೀ ಮೊದಲಾದ ಸಂವೇದನೆಗಳಲ್ಲಿ ಗಮನಾರ್ಹ ಸಾಹಿತ್ಯ ರಚನೆಯಾಗುತ್ತಿದೆ.

ಹೀಗೆ ಹೊಸ ತಲೆಮಾರಿನ ನೂರಾರು ಲೇಖಕರು ಬಂಡಾಯದ ಹಿಂದಿನ ಸಂವೇದನೆಗಳಿಗೆ ಇವತ್ತಿನ ವಿಸ್ತರಣೆಗಳಾಗಿ ನಿಂತಿರುವುದು ಸಾಂಸ್ಕೃತಿಕ ಮಹತ್ವದ ಸಂಗತಿಯೆನಿಸುತ್ತದೆ. ಈ ನೆಲೆಯಲ್ಲಿ ಕೋಮುವಾದ, ಶಿಕ್ಷಣದ ಕೇಸರೀಕರಣ, ಜಾಗತೀಕರಣಗಳ ಜತೆಗೆ ಹಳೆಯ ಸವಾಲುಗಳಾದ ಜಾತಿ ವೈಷಮ್ಯ, ಊಳಿಗಮಾನ್ಯ ವ್ಯವಸ್ಥೆ ಕ್ರೌರ್ಯ ಮೊದಲಾದವುಗಳು ಸಹ ಇವರನ್ನು ಕಾಡುತ್ತಿವೆ. ಇವರೊಂದಿಗೆ ಹಿರಿಯ ತಲೆಮಾರಿನ ಬಂಡಾಯ ಲೇಖಕರು ಸಹ ಗಮನಾರ್ಹ ಬರವಣಿಗೆಯಲ್ಲಿ ತೊಡಗಿರುವುದು ಮುಖ್ಯವೆನಿಸುತ್ತದೆ. ಇಂತಹ ಬರವಣಿಗೆ ವಿಶೇಷವಾಗಿ ಕಾವ್ಯ, ಕತೆ, ನಾಟಕ – ಈ ಪ್ರಕಾರಗಳಲ್ಲಿ ಕಾಣುತ್ತಿದೆ. ಈ ಸಾಲಿನ ಪ್ರಕಾರಗಳಲ್ಲಿ ವಿಚಾರ ಸಾಹಿತ್ಯಕ್ಕೆ ಮೊದಲ ಸ್ಥಾನವಿದೆ. ಕಾರಣ, ಇತರೆ ಎಲ್ಲಾ ಪ್ರಕಾರಗಳಿಗಿಂತ ವಿಚಾರ ಸಾಹಿತ್ಯದಲ್ಲಿ ಇವತ್ತಿನ ಸಂವೇದನೆಗಳ ತುಂಬು ಬೆಳೆ ಎದ್ದು ಕಾಣುತ್ತಿದೆ. ಈ ಹಿನ್ನೆಲೆಯಲ್ಲಿ ಇಲ್ಲಿ ಪ್ರಸ್ತಾಪಗೊಳ್ಳದ ಕಾದಂಬರಿ ರಚನೆಯಲ್ಲಿ ಜಾಗತೀಕರಣದಂತಹ ಹೊಸ ಸವಾಲುಗಳಿಗೆ ಮುಖಾಮುಖಿಯಾಗುವ ಪ್ರಜ್ಞೆ ಹೆಚ್ಚಾಗಬೇಕಿದೆ.

ಒಟ್ಟಾರೆ, ಬಂಡಾಯದ ಅವತ್ತಿನ ಸಂವೇದನೆಗಳೊಂದಿಗೆ ಇವತ್ತಿನ ಸಂವೇದನೆಗಳು ಸಹ ವರ್ತಮಾನದಲ್ಲಿ ಕಾಣುತ್ತಿರುವುದು ಬಂಡಾಯದ ಇವತ್ತಿನ ಸ್ವರೂಪವಾಗಿದೆ. ಈ ನೆಲೆಯಲ್ಲಿ ಬಂಡಾಯವೆಂಬುದು ನಿಂತ ನೀರಾಗದೆ, ಹರಿಯುವ ನೀರಾಗಿದೆ ಎಂಬುದು ಸ್ಪಷ್ಟ. ಇದು ಹರಿಯುವ ನೀರಾಗಿರುವುದರಿಂದ ಹೆಚ್ಚು ಆರೋಗ್ಯಕರವೂ, ಪ್ರಸ್ತುತವೂ ಆಗಿರಲು ಸಾಧ್ಯವಾಗಿದೆ. ಈ ಹಿನ್ನೆಲೆಯಲ್ಲಿ ಚಲನಶೀಲವೆನಿಸಿದ ಬಂಡಾಯವು ಭವಿಷ್ಯದಲ್ಲಿಯೂ ಜೀವಂತವಾಗಿದ್ದರೆ ಅದು ಆಶ್ಚರ್ಯವಲ್ಲ.

ಬಂಡಾಯ ಅಂದು-ಇಂದು ಎಂಬುದನ್ನು ಹೇಳುವಾಗಲೇ ಈ ಎರಡು ಘಟ್ಟಗಳ ಬಂಡಾಯದಲ್ಲಿನ ಭಿನ್ನತೆಗಳನ್ನು ಗುರುತಿಸಿಕೊಳ್ಳಬೇಕು. ಅವುಗಳನ್ನು ಸಂಕ್ಷೇಪಿಸುವುದಾದರೆ ಅಂದು ಸಾಮಾಜಿಕ ಚಳವಳಿಗಳು ತೀವ್ರ ಸ್ವರೂಪದಲ್ಲಿದ್ದವು. ಅವುಗಳಲ್ಲಿ ಸಾಹಿತಿ-ಚಿಂತಕರು, ಕಲಾವಿದರು ಗುರುತರವಾಗಿ ಭಾಗವಹಿಸುತ್ತಿದ್ದರು. ಅದರಿಂದ ಚಳುವಳಿಗಳಿಗೆ ಹೆಚ್ಚು ಗಂಭೀರ ಆಯಾಮಗಳು ಪ್ರಾಪ್ತವಾಗುತ್ತಿದ್ದವು. ಆದರೆ ಕಳೆದ ಒಂದು ದಶಕದಿಂದೀಚೆಗೆ ಅಂತಹ ಪರಿಪಾಠ ಮುಂದುವರಿಯದೆ, ಸಾಹಿತಿ ಮತ್ತು ಚಳವಳಿಗಳ ನಡುವೆ ಕಂದಕವೇರ್ಪಟ್ಟಿರುವುದು ಕಾಣುತ್ತಿದೆ. ಆದ್ದರಿಂದ ಇವತ್ತಿನ ಸಾಹಿತ್ಯವು ಅಂದಿನ ಪ್ರಖರತೆಯನ್ನು ಕಳೆದುಕೊಂಡಿದೆ. ಇದರ ಪರಿಣಾಮವಾಗಿ ಬಂಡಾಯವು ಎದುರಿಸುತ್ತಾ ಬಂದ ಕೋಮುವಾದಿ ಶಕ್ತಿಗಳು ಇಂದು ನೇಪಥ್ಯವನ್ನು ಬಿಟ್ಟು ಪ್ರತ್ಯಕ್ಷ ರಂಗಕ್ಕೇ ಬಂದು ವಿರಾಜಿಸಲು ಸಾಧ್ಯವಾಗಿದೆ. ಈ ಹಿನ್ನೆಲೆಯಲ್ಲಿ ಇವತ್ತಿನ ಚಳವಳಿಗಳು ಮತ್ತು ಬಂಡಾಯ ಸಾಹಿತ್ಯವನ್ನು ವಿವರಿಸಿಕೊಳ್ಳಲು ಯತ್ನಿಸಬೇಕಿದೆ.

ಹೀಗೆ ಅನೇಕ ಮಿತಿಗಳ ನಡುವೆಯೇ ಇವತ್ತಿನ ಬಂಡಾಯ ಸಂವೇದನೆಯು ಪ್ರಖರವಲ್ಲದ ಸ್ಥಿತಿಯಲ್ಲಿಯೋ ಅಥವಾ ಪ್ರಖರಗೊಳ್ಳುತ್ತಿರುವ ಸ್ಥಿತಿಯಲ್ಲಿಯೋ ಮುಂದುವರಿಯುತ್ತಿರುವುದು ಸಮಾಧಾನಕರ ಸಂಗತಿ ಎನಿಸುತ್ತದೆ. ಈ ನಿಟ್ಟಿನಲ್ಲಿ ಮೂಡುತ್ತಿರುವ ಸಾಹಿತ್ಯಕ್ಕೆ ಮುಖ್ಯ ಭಿತ್ತಿಗಳಾಗಿ ಸಂಕ್ರಮಣ, ಹೊಸತು, ಅನ್ವೇಷಣೆ ಮೊದಲಾದ ಸಣ್ಣ ಪತ್ರಿಕೆಗಳಲ್ಲದೆ ಪ್ರಜಾವಾಣಿ, ಜನವಾಹಿನಿಯಂತಹ ಕೆಲವು ದಿನಪತ್ರಿಕೆಗಳು ಸಹ ಒತ್ತಾಸೆಯಾಗಿರುವುದು ಗಮನಾರ್ಹ. ಇಂತಹ ಸಾಹಿತ್ಯ ಸೃಷ್ಟಿಗೆ ಬಂಡಾಯ ಸಾಹಿತ್ಯ ಸಂಘಟನೆಯ ಕಾರ್ಯಕ್ರಮಗಳು ರಾಜ್ಯವ್ಯಾಪಿಯಾಗುತ್ತಿರುವುದು ಪೋಷಕವಾಗಿದೆ.

ಹೀಗೆ ಬಂಡಾಯ ಸಾಹಿತ್ಯವು ಅಂದಿನಿಂದ ಇಂದಿನವರೆಗೂ ಹರಿಯುತ್ತಿರುವ ಜೀವನದಿಯಾಗಿದೆ. ಇದು ಕಾಲದ ದಡಗಳಲ್ಲಿ ಕೆಲವೊಮ್ಮೆ ಕಿರಿದಾಗಿ, ಮತ್ತೂ ಕೆಲವೊಮ್ಮೆ ಹಿರಿದಾಗಿ ಹರಿದದ್ದಿದೆ. ಈ ಮೂಲಕ ಇದು ಬತ್ತದ ಸೆಲೆ ಮತ್ತು ನಿತ್ಯನೂತನ ದೇಹಿ ಎಂಬ ಸತ್ಯ ಭವಿಷ್ಯಕ್ಕೆ ಚಾಚುವ ಆಶಾಚುಕ್ಕಿಯಾಗಿದೆ.


ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ
ಕನ್ನಡ ಅಧ್ಯಾಪಕ, ಸ್ನಾತಕೋತ್ತರ ಕೇಂದ್ರ
ಬೆಂಗಳೂರು ವಿಶ್ವವಿದ್ಯಾಲಯ
ಕೋಲಾರ-೫೬೩ ೧೦೧


## ಅಳಲು

ನೋಡ ಬಂದೆನೊ ತಂದೆ
ನಿನ್ನ ಅಯೋಧ್ಯೆ
ನೀನುಂಡ ಪ್ರತಿ ಹಣ್ಣು
ನೆಪ್ಪು ಹಿಡಿದು ಎದೆ.

ಉಡಿಯಲ್ಲಿ ಕಳಿತ ಹಣ್ಣು
ತುಂಬಿ ಉಣಿಸುವ
ಮಿಡಿತದಲಿ ಬರುವ
ದಾರಿಗೆ ಅಡ್ಡ ಇಕ್ಕಿದ ಕಿಚ್ಚು.

ಮಂಜುಗಟ್ಟಿದ ಕಣ್ಣಿಗೂ
ಕಿಚ್ಚ ಗಾವಿನ ಗಾಬು
ಸುಡುವುದೆಂದರೆ ಹೀಗೆಂದು
ಕಾಳ್ಗಿಚ್ಚಿಗೂ ಹೇಳಿಕೊಡುವಂತಿತ್ತು.

ಅಗ್ನಿದಿವ್ಯವಾಗಿದ್ದರೆ
ಹಾದು ಬರಬಹುದಿತ್ತು
ಜೀವಫಲ ಸುಡಲೆಂದೆ ಇಟ್ಟರಲು
ಹಾದು ಬರಲೆಂತೊ ನಿನ್ನ ಬಳಿಗೆ?



ಸುಟ್ಟ ಗಾಯಕೆ ಮದ್ದು ಮೂಲಿಕೆ
ತರಲು ಹೋಗಲೊ ಕಾಡಿಗೆ
ಇಲ್ಲಿ ಬರಲೇನೊ ಸುಮ್ಮನೆ
ನಿನ್ನ ದರುಶನಕೆ.

ಹೇಗೆ ಬರಲೊ ಬರಿ ಉಡಿಯಲ್ಲಿ
ತಂದದ್ದರಲ್ಲಿಷ್ಟು ಬೆಂಕಿಗಾಹುತಿ
ಇನ್ನಷ್ಟು ಚೆಲ್ಲಿ
ಕಾಲಡಿ ಅಪ್ಪಚ್ಚಿ
ಕುರುಡು ಕಣ್ಣಿಗೆ ಬೆಳಕು ಹರಿದರೆ
ಕಂಡೀತು ಆಲೆಮನೆ ಕೊಪ್ಪರಿಗೆ ಬೆಲ್ಲ
ಎಲ್ಲರೆದೆ ತಂಪಿಗೆ
ಮಾಡಿಕೊಡಲು ಪಾನಕ.


ಸ. ರಘುನಾಥ
ಶ್ರೀ ಲಕ್ಷ್ಮಿ ಪ್ರಾವಿಜನ್ ಸ್ಟೋರ್ಸ್ ರಸ್ತೆ ರಾಮಕೃಷ್ಣ ಬಡಾವಣೆ
ಶ್ರೀನಿವಾಸಪುರ - ೫೬೩ ೧೩೫.

ವಿಶ್ವ ವೀಕ್ಷಣೆ

# ಅಮೆರಿಕದ ಅಧಿನಾಯಕತ್ವ ಹಂಚಿಕೆಗೆ ಜನತೆಯ ವಿರೋಧ

ಇರಾಕಿನ ಮೇಲೆ ಯುದ್ಧ ನಡೆಸಲು ಸನ್ನದ್ಧವಾಗಿರುವ ಅಮೆರಿಕದ ಸಾಮ್ರಾಜ್ಯಶಾಹಿ ಯುದ್ಧಕೋರ ನೀತಿಯ ವಿರುದ್ಧ ಪ್ರಪಂಚದಾದ್ಯಂತ ಜನತೆ ಸಿಡಿದೆದ್ದಿರುವುದು ಒಂದು ಮಹತ್ವಪೂರ್ಣವಾದ ಬೆಳವಣಿಗೆ. ಆಸ್ಟ್ರೇಲಿಯದಿಂದ ಯೂರೋಪು ಖಂಡದವರೆಗೆ, ಹೆಚ್ಚು ಕಡಿಮೆ ಜಗತ್ತಿನ ಎಲ್ಲ ದೇಶಗಳ ಪ್ರಮುಖ ನಗರಗಳಲ್ಲಿ ಲಕ್ಷ ಲಕ್ಷ ಜನ ಯುದ್ಧ ವಿರೋಧಿ ಘೋಷಣೆಗಳ ಭಿತ್ತಿಪತ್ರಗಳನ್ನು ಹಿಡಿದು, ಬೀದಿಗಿಳಿದು ನಡೆಸಿದ ಪ್ರತಿಭಟನಾ ಪ್ರದರ್ಶನ ಅಭೂತಪೂರ್ವವಾದ್ದು. ಇತ್ತೀಚಿನ ವರ್ಷಗಳಲ್ಲಿ ಇಷ್ಟು ದೊಡ್ಡ ಪ್ರಮಾಣದಲ್ಲಿ ಸಾಮ್ರಾಜ್ಯಶಾಹಿ ಯುದ್ಧಕೋರರ ವಿರುದ್ಧ ಜನತೆ ಎಚ್ಚತ್ತು ತಮ್ಮ ಅಭಿಮತ ವ್ಯಕ್ತಗೊಳಿಸಿರುವುದು ಇದೇ ಮೊದಲ ಬಾರಿ. ಇದು ಯುದ್ಧ ಪಿಪಾಸು ಅಮೆರಿಕದ ಅಧ್ಯಕ್ಷ ಜಾರ್ಜ್ ಬುಷ್ ಹಾಗೂ ಸಹಚರ ಬ್ರಿಟಿಷ್ ಪ್ರಧಾನಿ ಟೋನಿ ಬ್ಲೇರ್‌ಗೆ ಜನತೆ ನೀಡಿರುವ ಎಚ್ಚರಿಕೆಯಾಗಿದೆ. ಅಮೆರಿಕದ ಅಧ್ಯಕ್ಷ ಜಾರ್ಜ್ ಬುಷ್ ಇರಾಕಿನ ಮೇಲೆ ಪ್ರತೀಕಾರ ಯುದ್ಧಕ್ಕಾಗಿ ಹವಣಿಸತೊಡಗಿದಾಗಿನಿಂದ ಅಲ್ಲಲ್ಲಿ, ಮುಖ್ಯವಾಗಿ ಅಮೆರಿಕದ ವಿಶ್ವವಿದ್ಯಾಲಯಗಳಲ್ಲಿ ಹಾಗೂ ಇತರ ದೇಶಗಳ ಪ್ರಮುಖ ನಗರಗಳಲ್ಲಿ ಯುದ್ಧ ವಿರೋಧಿ ಪ್ರತಿಭಟನೆಗಳೂ ನಡೆಯುತ್ತಿದ್ದವು. ಕಳೆದ ತಿಂಗಳ ಎರಡನೆ ವಾರದಲ್ಲಿ ಜರುಗಿದ ಪ್ರತಿಭಟನಾ ಪ್ರದರ್ಶನ ಇವೆಲ್ಲದರ ಕ್ರೋಢೀಕರಣ ಎನ್ನಬಹುದು. ಯುದ್ಧಾಸಕ್ತರನ್ನು ಹಿಮ್ಮೆಟ್ಟಿಸಲು ಇದು ಮೊದಲ ಹೆಜ್ಜೆ ಎಂದು ಪರಿಗಣಿಸಬಹುದು. ಜನತೆಯ ನಿರಂತರ ಬೃಹತ್ ಪ್ರತಿಭಟನೆಯೊಂದೇ ಸಾಮ್ರಾಜ್ಯಶಾಹಿಗಳ ಯುದ್ಧ ನೀತಿಗೆ ಕಡಿವಾಣವಾಗಲು ಸಾಧ್ಯ. ಮುಂಬರುವ ದಿನಗಳಲ್ಲಿ ಜನತೆಯ ಯುದ್ಧ ವಿರೋಧಿ ಹೋರಾಟ ಇನ್ನಷ್ಟು ತೀವ್ರಗೊಳ್ಳುವುದೆಂದು ಆಶಿಸೋಣ.

ವಿಶ್ವಸಂಸ್ಥೆಯ ಆಯುಧ ತಪಾಸಣೆಗಾರರ ಎರಡನೇ ವರದಿಯೂ ಇರಾಕ್‌ನಲ್ಲಿ ಸಾಮೂಹಿಕ ವಿನಾಶಕಾರಿ ಅಸ್ತ್ರಗಳ ಶೇಖರಣೆಯ ಸಾಕ್ಷ್ಯಾಧಾರಗಳೇನನ್ನೂ ಕಾಣದೇ ಹೋದುದು ಅಮೆರಿಕಾಗೆ ಇರಸುಮುರುಸಾಗಿದೆ. ಅಲ್ಲದೆ ಅದರ ಯುದ್ಧ ನೀತಿಗೆ ತನ್ನ ಮಿತ್ರ ರಾಷ್ಟ್ರಗಳಿಂದಲೇ ವಿರೋಧ ಬಂದಿರುವುದು ಅದಕ್ಕೆ ಇನ್ನಷ್ಟು ಕಸಿವಿಸಿಯಾಗಿದೆ. ಈ ಹಿನ್ನೆಲೆಯಲ್ಲೇ ಜಗತ್ತಿನಾದ್ಯಂತ ಜನತೆಯ ಪ್ರತಿಭಟನಾ ಪ್ರದರ್ಶನಗಳ ಅಲೆ ಅದನ್ನು ಇನ್ನಷ್ಟು ಅಧೀರವಾಗಿಸಿದೆ. ಹಾಗಿದ್ದರೂ ಅಮೆರಿಕ ಇರಾಕಿನ ಮೇಲೆ ದಾಳಿ ನಡೆಸುವ ತನ್ನ ಯೋಜನೆಯನ್ನು ಕೈಬಿಡಲು ಸಿದ್ಧವಾಗಿಲ್ಲ. ವಿಶ್ವಸಂಸ್ಥೆಯ ಭದ್ರತಾ ಮಂಡಳಿ ಅಂಗೀಕಾರ ದೊರೆಯದೇ ಹೋದಲ್ಲಿ ಏಕಾಂಗಿಯಾಗಿಯೇ ಇರಾಕಿನ ಮೇಲೆ ದಾಳಿ ನಡೆಸುವುದಾಗಿ ಅಧ್ಯಕ್ಷ ಜಾರ್ಜ್ ಬುಷ್ ಪುನರುಚ್ಚರಿಸಿದ್ದಾರೆ. ಇರಾಕನ್ನು ನಿರಾಯುಧೀಕರಣಗೊಳಿಸಲು ವಿಶ್ವಸಂಸ್ಥೆ ಅಂಗೀಕರಿಸಿದ್ದ ನಿರ್ಣಯವನ್ನು ಕಾರ್ಯಗತ ಮಾಡಲು ಇರಾಕಿನ ಅಧ್ಯಕ್ಷ ಸದ್ದಾಮ್ ಹುಸೇನ್ ಅನ್ನು ಪದಚ್ಯುತಗೊಳಿಸುವುದೊಂದೇ ಮಾರ್ಗ ಎನ್ನುವುದು ಅಮೆರಿಕದ ಹಠ. ವಿಶ್ವ ಸಂಸ್ಥೆಯ ಆಯುಧ ತಪಾಸಣೆಗಾರರ ತಂಡಕ್ಕೆ ಇನ್ನೂ ಹೆಚ್ಚಿನ ಅವಕಾಶ ನೀಡಬೇಕೆಂಬುದು ಭದ್ರತಾ ಮಂಡಳಿಯ ಬಹುತೇಕ ರಾಷ್ಟ್ರಗಳ ಅಭಿಮತ. ಇದುವರೆಗೆ ಫ್ರಾನ್ಸ್, ಜರ್ಮನಿ, ರಷ್ಯಾ, ಚೀಣಾ, ಇರಾಕಿನ ಮೇಲೆ ಯುದ್ಧ ನಡೆಸುವ ಅಮೆರಿಕದ ಧೋರಣೆಗೆ ವಿರೋಧ ವ್ಯಕ್ತಪಡಿಸಿವೆ. ಭದ್ರತಾ ಮಂಡಳಿಯ ಖಾಯಂ ಸದಸ್ಯ ರಾಷ್ಟ್ರಗಳಾದ ಇವು ಆಯುಧ ತಪಾಸಣೆಗಾರರಿಗೆ ಇನ್ನು ಹೆಚ್ಚು ಕಾಲಾವಕಾಶ ನೀಡಬೇಕೆಂದು ಒತ್ತಾಯಪಡಿಸುತ್ತಿವೆ. ಅಮೆರಿಕಾಗೆ ಇದಾವುದೂ ಬೇಡ, ಅದಕ್ಕೆ ತನ್ನ ಇರಾದೆಯೇ ಮುಖ್ಯ. ವಿಶ್ವಸಂಸ್ಥೆಯ ನಿರ್ಣಯ ಎತ್ತಿ ಹಿಡಿಯುವ ಯಜಮಾನಿಕೆ ತನ್ನದು ಎಂಬ ಅಹಮಿಕೆಯನ್ನು ಅದು ತೋರುತ್ತಿದೆ. ಅಮೆರಿಕ ಕೃಪಾ ಪೋಷಿತ 'ನ್ಯಾಟೋ' ಕೂಟದಲ್ಲೂ ಅಮೆರಿಕದ ನೀತಿಗೆ ಒಮ್ಮತದ ಬೆಂಬಲ ಲಭಿಸದೆ ಹೋಗಿದೆ. ಯಾವತ್ತೂ ಅಮೆರಿಕದ ನೀತಿಗಳಿಗೆ ಬೆಂಬಲ ನೀಡುತ್ತ ಬಂದಿದ್ದ ಫ್ರಾನ್ಸ್, ಜರ್ಮನಿ ಮೊದಲಾದ ಐರೋಪ್ಯ ದೇಶಗಳ ವಿರೋಧ ಅಮೆರಿಕದ ನಾಯಕರನ್ನು ಕೆರಳಿಸಿದೆ. ಅಮೆರಿಕದ ವಿದೇಶಾಂಗ ಕಾರ್ಯದರ್ಶಿ ಕಾಲಿನ್ ಪಾವೆಲ್ ಫ್ರಾನ್ಸ್, ಜರ್ಮನಿಗಳನ್ನು 'ಹಳೆಯ ಯೂರೋಪು' ಎಂದು ಮೂದಲಿಸಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಬ್ರಿಟನ್ ಹೊರತುಪಡಿಸಿ ಇತರ ಯೂರೋಪಿನ ರಾಷ್ಟ್ರಗಳು ಅಮೆರಿಕದ ಇರಾಕ್ ನೀತಿಗೆ ವಿರೋಧ ವ್ಯಕ್ತಗೊಳಿಸಿರುವುದು ಒಂದು ಹೊಸ ಬೆಳವಣಿಗೆ ಎನ್ನಬಹುದು. ಆದರೆ ಇದು ಪ್ರಪಂಚದಲ್ಲಿ ಶಕ್ತಿಗಳ ಪುನರ್ ಹೊಂದಾಣಿಕೆಗೆ ಎಡೆ ಮಾಡಿ ಕೊಟ್ಟೀತೆ ಎನ್ನುವುದು ಸಂದೇಹ. ಏಕೆಂದರೆ ಈ ದೇಶಗಳ ಮೇಲೆ ನಾನಾ ರೀತಿಯ ಒತ್ತಡಗಳನ್ನು ತರಬಲ್ಲ ಅಮೆರಿಕದ ಪ್ರಾಬಲ್ಯವನ್ನು ಕಡೆಗಣಿಸಲು ಸಾಧ್ಯವಿಲ್ಲ. ಇರಾಕಿನ ಮೇಲೆ ದಾಳಿ ನಡೆಸಿದಲ್ಲಿ ಅದರ ಪರಿಣಾಮವಾಗಿ ಸಂಭವಿಸಬಹುದಾದ ಅನಾಹುತಗಳ ಬಗೆಗೆ ಯೂರೋಪಿನ ರಾಷ್ಟ್ರಗಳಲ್ಲಿ ಆತಂಕವಿರುವುದು ಗಮನಿಸಬೇಕಾದ ಅಂಶ.

ಅಮೆರಿಕದ ಮಟ್ಟಿಗೆ ಗುರಿ ಸ್ಪಷ್ಟ. ಹನ್ನೆರಡು ವರ್ಷಗಳ ದ್ವೇಷ ಸಾಧನೆ ಒಂದು ಕಡೆಯಾದರೆ, ಇರಾಕ್‌ನ ಆಕ್ರಮಣ, ಸದ್ದಾಂ ಹುಸೇನನ ಪತನದಿಂದ ಇಡೀ ಮಧ್ಯಪ್ರಾಚ್ಯ ಪ್ರದೇಶದಲ್ಲಿ ಮೇಲುಗೈ ಸಾಧಿಸಲು ಅವಕಾಶ. ಈ ಮೂಲಕವಾಗಿ ಅಮೆರಿಕ ಜಗತ್ತಿನ ಅತ್ಯಧಿಕ ತೈಲ ನಿಕ್ಷೇಪ ಹೊಂದಿರುವ ಈ ಭೂಭಾಗವನ್ನು ತನ್ನ ಹತೋಟಿಯಲ್ಲಿರಿಸಿಕೊಳ್ಳಬಹುದು. ಆದ್ದರಿಂದಲೇ ಅದು ಅದಷ್ಟು ಬೇಗ ಇರಾಕಿನ ಮೇಲೆ ದಾಳಿ ನಡೆಸುವ ತರಾತುರಿಯಲ್ಲಿದೆ. ಇರಾಕನ್ನು ಆಕ್ರಮಿಸಿಕೊಂಡು ಅದನ್ನು ಕೆಲಕಾಲ ಅಮೆರಿಕದ ಸೇನಾಡಳಿತೆಯಲ್ಲಿಯೇ ಇರಿಸುವ ಯೋಜನೆಯನ್ನು ಬುಷ್ ಸರಕಾರ ರಹಸ್ಯವಾಗೇನಿರಿಸಿಲ್ಲ. ಇರಾಕನ್ನು ವಶಪಡಿಸಿಕೊಂಡರೆ ಇರಾನ್, ಸಿರಿಯ ಮತ್ತಿತರ ದೇಶಗಳ ಮೇಲೆ ಒತ್ತಡ ತರುವುದು ಅಮೆರಿಕಾಗೆ ಕಷ್ಟವೇನಲ್ಲ. ಮಧ್ಯಪ್ರಾಚ್ಯದ ಅಪಾರ ತೈಲ ಸಂಪತ್ತಿನ ಮೇಲೆ ಹತೋಟಿ ಸ್ಥಾಪಿಸಿಕೊಂಡಲ್ಲಿ ಇಡೀ ಜಗತ್ತಿನ ಮೇಲೆ ಹಿಡಿತವಿರಿಸಿಕೊಳ್ಳಲು ಸಾಧ್ಯ ಎನ್ನುವ ಪ್ರತೀತಿ ಇದೆ. ಜಗತ್ತಿನ ಮೇಲೆ ಅಧಿನಾಯಕತ್ವವನ್ನು ಸ್ಥಾಪಿಸುವ ಅಮೆರಿಕದ ಮಹತ್ವಾಕಾಂಕ್ಷೆಯಲ್ಲಿ ಇರಾಕ್‌ನ ಆಕ್ರಮಣ ಅತ್ಯಗತ್ಯ. ಅಮೆರಿಕದ ಈ ಹಂಚಿಕೆಗೆ ಮಧ್ಯಪ್ರಾಚ್ಯದ ಕೆಲದೇಶಗಳ ಒತ್ತಾಸೆ ಇರುವುದು ದುರದೃಷ್ಟಕರ. ಅಮೆರಿಕದ ಹಂಚಿಕೆಗಳು ಫಲಿಸಿದಲ್ಲಿ ಪರಿಣಾಮ ಗಂಭೀರ ಎನ್ನುವುದರಲ್ಲಿ ಸಂದೇಹವಿಲ್ಲ. ಮೊಟ್ಟಮೊದಲನೆಯದಾಗಿ ಕಳೆದ ಗಲ್ಫ್ ಯುದ್ಧದಲ್ಲಿ ಸಾಕಷ್ಟು ಕಷ್ಟನಷ್ಟಗಳನ್ನನುಭವಿಸಿದ ಇರಾಕಿನ ಜನತೆ ಕಳೆದ ಒಂದು ದಶಕಕ್ಕೂ ಹೆಚ್ಚಿನ ಕಾಲಾವಧಿಯಲ್ಲಿ ಅಮೆರಿಕ ಹೊರಿಸಿದ ಆರ್ಥಿಕ ದಿಗ್ಬಂಧನದಿಂದ ಇನ್ನಷ್ಟು ಬವಣೆ ಅನುಭವಿಸಿದ್ದಾರೆ. ಮುಖ್ಯವಾಗಿ ಮಕ್ಕಳು ಪೋಷಣೆ ಹಾಗೂ ಔಷಧೋಪಚಾರವಿಲ್ಲದೆ ಪರಿತಪಿಸಿವೆ. ಈಗ ಇದರ ಮೇಲೆ ಇನ್ನೊಂದು ಯುದ್ಧ ಮತ್ತಷ್ಟು ಭೀಕರ ಪರಿಣಾಮ ಉಂಟುಮಾಡಲಿದೆ. ಎರಡನೆಯದಾಗಿ ಈ ಯುದ್ಧ ಇಡೀ ಮಧ್ಯಪ್ರಾಚ್ಯದಲ್ಲಿ ಅಸ್ಥಿರತೆ ಉಂಟುಮಾಡುವುದರ ಜೊತೆಗೆ ಪ್ಯಾಲಸ್ತೈನ್ ಜನರ ಅರ್ಧ ಶತಮಾನದ ಸ್ವತಂತ್ರ ರಾಷ್ಟ್ರದ ಸ್ಥಾಪನೆಯ ಹೋರಾಟಕ್ಕೆ ಮಾರಕವಾಗಬಹುದಾಗಿದೆ. ತೈಲ ಸಂಪತ್ತಿನ ಹಿಡಿತ ಸಾಧಿಸಿಕೊಂಡ ಅಮೆರಿಕಾಗೆ ಪ್ರಪಂಚದ ದೇಶಗಳ ಮೇಲೆ ಒತ್ತಡ ತರುವುದಕ್ಕೆ ಹೆಚ್ಚು ಅವಕಾಶವಾಗುತ್ತದೆ. ಎಲ್ಲಕ್ಕಿಂತ ಮುಖ್ಯವಾಗಿ ವಿಶ್ವಸಂಸ್ಥೆಯ ಭದ್ರತಾ ಮಂಡಳಿಯನ್ನು ಧಿಕ್ಕರಿಸಿ ಅಮೆರಿಕ ಇರಾಕಿನ ಮೇಲೆ ದುರಾಕ್ರಮಣ ನಡೆಸಿದಲ್ಲಿ, ವಿಶ್ವಸಂಸ್ಥೆಯ ಅಸ್ತಿತ್ವಕ್ಕೇ ಧಕ್ಕೆಯಾಗುವ ಸಂಭವ ಹೆಚ್ಚು. ಅರ್ಧ ಶತಮಾನದಿಂದ ಶಾಂತಿಪಾಲನೆಯಲ್ಲಿ, ರಾಷ್ಟ್ರಗಳ ನಡುವೆ ವೈಮನಸ್ಸುಗಳನ್ನು ಬಗೆಹರಿಸುವ ದಿಶೆಯಲ್ಲಿ ಕಾರ್ಯಗತವಾಗಿರುವ ಈ ಸಂಸ್ಥೆ ಲೀಗ್ ಆಫ್ ನೇಷನ್‌ನಂತೆಯೇ ಕಣ್ಮರೆಯಾಗುವ ಭೀತಿ ಇದೆ. ಸ್ವಾತಂತ್ರ್ಯ, ಸಾರ್ವಭೌಮತ್ವಗಳನ್ನು ಎತ್ತಿ ಹಿಡಿಯುವ ಎಲ್ಲ ರಾಷ್ಟ್ರಗಳು ಮತ್ತು ಜಗತ್ತಿನ ಜನತೆ ಒಟ್ಟುಗೂಡಿ ಎದುರಿಸಿದಲ್ಲಿ ಮಾತ್ರ ಅಮೆರಿಕದ ಉದ್ಧಟತನವನ್ನು ತಡೆಯಲು ಸಾಧ್ಯ. ಯುದ್ಧ ವಿರೋಧಿ ಪ್ರತಿಭಟನಾ ಪ್ರದರ್ಶನಗಳು ಈ ದಿಶೆಯಲ್ಲಿ ಮೊದಲ ಹೆಜ್ಜೆ.


ಲಂಡನ್ನಿನಲ್ಲಿ ಬೃಹತ್ ಯುದ್ಧ ವಿರೋಧಿ ಪ್ರತಿಭಟನೆ

# ಮಾನವತಾವಾದಿ ಜೇನ್ ಗೂಡಾಲ್



ಜಗತ್ಪ್ರಸಿದ್ಧ ಪ್ರಾಣಿಶಾಸ್ತ್ರಜ್ಞೆ ಡಾ. ಜೇನ್ ಗೂಡಾಲ್ ಇತ್ತೀಚೆಗೆ 'ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಅಡ್ವಾನ್ಸ್‌ಡ್ ಸ್ಟಡೀಸ್'ನಲ್ಲಿ ನಡೆದ ''ವಿಜ್ಞಾನ ಮತ್ತು ಅದರಾಚೆಗೆ'' ಎಂಬ ವಿಚಾರ ಸಂಕಿರಣದಲ್ಲಿ ಭಾಗವಹಿಸಲು ಬೆಂಗಳೂರಿಗೆ ಬರುತ್ತಾರೆಂದು ತಿಳಿದು ನನಗೆ ಅತ್ಯಾನಂದವಾಯಿತು. ಏಕೆಂದರೆ, ನಾನು ವಿದ್ಯಾರ್ಥಿಯಾಗಿದ್ದಾಗಲೇ, ಇವರು ಆಫ್ರಿಕಾ ಖಂಡದ ಟಾನ್ಜೇನಿಯಾದಲ್ಲಿರುವ ಕಾಡಿನ ಚಿಂಪಾಂಜಿಗಳೊಡನೆ ನಡೆಸುತ್ತಿದ್ದ ರೋಮಾಂಚಕ ಸಂಶೋಧನೆಯ ಬಗ್ಗೆ ಕೇಳಿದ್ದೆ. ಬಳಿಕ ''ನ್ಯಾಷನಲ್ ಜಿಯೋಗ್ರಾಫಿಕ್ ಸೊಸೈಟಿ''ಯವರು ಡಾ॥ ಜೇನ್ ಗೂಡಾಲ್ ಬಗ್ಗೆ ಹಾಗೂ ಚಿಂಪಾಂಜಿ ನಡೆವಳಿಕೆಯ ಸಂಶೋಧನೆ ಬಗ್ಗೆ ಸುಂದರವಾಗಿ ಹಾಗೂ ಕೂಲಂಕಷವಾಗಿ ತಯಾರಿಸಿದ್ದ ಸಾಕ್ಷ್ಯಚಿತ್ರಗಳನ್ನು ಮತ್ತೆ ಮತ್ತೆ ನೋಡಿ ಆಕೆಯ ಅಸಾಧಾರಣ ವ್ಯಕ್ತಿತ್ವದ ಬಗ್ಗೆ ಕುತೂಹಲಗೊಂಡಿದ್ದೆ. ಈ ಸಾಹಸಶೀಲ ಮಹಿಳೆ ಭಾರತಕ್ಕೆ ಆಗಮಿಸಿದ್ದು ಇದೇ ಮೊಟ್ಟ ಮೊದಲು.

ಬೆಂಗಳೂರಿನ ಒಂದು ಹೋಟೆಲ್‌ನಲ್ಲಿ ತಂಗಿದ್ದ ಜೇನ್ ಗೂಡಾಲ್‌ಅನ್ನು ಭೇಟಿ ಮಾಡಲು ನಾನು ಹೋದಾಗ, ಅಂದೇ ಅಮೆರಿಕದಿಂದ ಬಂದಿದ್ದರೂ ಸಹ ೬೮ರ ಹರೆಯದ ಈ ಮಹಿಳೆ ನನ್ನನ್ನು ಪ್ರಸನ್ನಚಿತ್ತಳಾಗಿ ಆದರದಿಂದ ಸ್ವಾಗತಿಸಿದ್ದು ಇವರ ಸರಳ ವ್ಯಕ್ತಿತ್ವಕ್ಕೆ ನಿದರ್ಶನವೆನಿಸಿತು.

ಜೇನ್ ಗೂಡಾಲ್ ೧೯೩೪ರ ಏಪ್ರಿಲ್, ೩ರಂದು ಲಂಡನ್ನಿನಲ್ಲಿ ಜನಿಸಿದರು. ಮುಂದೆ ಬಾಲ್ಯದ ದಿನಗಳನ್ನು ಇಂಗ್ಲೆಂಡಿನ ದಕ್ಷಿಣ ಕರಾವಳಿಯಲ್ಲಿರುವ ಬೋರ್ನ್‌ಮೌತ್ ಎಂಬ ಚಿಕ್ಕ ನಗರದಲ್ಲಿ ಕಳೆದರು. ಬಾಲ್ಯದಿಂದಲೇ ಇವರು ಪಶುಪ್ರಾಣಿಗಳಲ್ಲಿ ಅತ್ಯಾಸಕ್ತರಾಗಿದ್ದು, ಭವಿಷ್ಯದಲ್ಲಿ ಇವುಗಳೊಂದಿಗೆ ಕೆಲಸದಲ್ಲಿ ನಿರತರಾಗುವ ಕನಸನ್ನು ಕಂಡಿದ್ದರು. ೧೯೬೦ರಲ್ಲಿ ಇವರ ಕನಸು ನನಸಾಯಿತು. ಪ್ರಸಿದ್ಧ ಪ್ರಾಚೀನ ಜೀವಶಾಸ್ತ್ರಜ್ಞ ಪ್ರೊ॥ ಲೂಯಿಸ್ ಲೀಕಿಯ ಸಹಾಯಕಳಾಗಿ ಕೀನ್ಯಾದ ನೈರೋಬಿಯಲ್ಲಿ ಕೆಲಸ ಆರಂಭ ಮಾಡಿದ್ದು ಜೇನ್ ಗೂಡಾಲ್‌ನ ಜೀವನದಲ್ಲಿ ಒಂದು ಮೈಲಿಗಲ್ಲು. ಟಾಂಗನೀಕ ಸರೋವರದ ಹತ್ತಿರದ ಕಾಡಿನಲ್ಲಿರುವ ಚಿಂಪಾಂಜಿಗಳ ವರ್ತನೆ ಬಗ್ಗೆ ಕೂಲಂಕಷವಾಗಿ, ಅವುಗಳ ಸಹಜ ವಾಸಸ್ಥಾನದಲ್ಲಿಯೇ ಸಂಶೋಧನೆ ನಡೆಸಲು ಪ್ರೊ॥ ಲೀಕಿ, ಯಾವುದೇ ಪದವಿ ಮತ್ತು ಅನುಭವವಿಲ್ಲದ ಜೇನ್ ಗೂಡಾಲ್ ಅನ್ನು ಆರಿಸಿದರು. ಜುಲೈ ೧೯೬೦ರಲ್ಲಿ ಇವರ ಚರಿತ್ರಾರ್ಹ ಹೊರಾಂಗಣ ಸಂಶೋಧನೆ ಟಾನ್ಜೇನಿಯಾದಲ್ಲಿರುವ ''ಗೊಂಬೆ ನ್ಯಾಷನಲ್ ಪಾರ್ಕ್''ನಲ್ಲಿ ಆರಂಭವಾಯಿತು. ಈ ಬಗೆಯ ಸಂಶೋಧನಾ ಕಾರ್ಯಕ್ಕೆ ಇವರೇ ಮೂಲಕರ್ತರು. ೧೯೬೫ರಲ್ಲಿ ಕೇಂಬ್ರಿಜ್ ವಿಶ್ವವಿದ್ಯಾಲಯದಿಂದ 'ಪ್ರಾಣಿಗಳ ನಡೆವಳಿಕೆ'ಯನ್ನು ಕುರಿತ ಸಂಶೋಧನೆಗೆ ಡಾಕ್ಟರೇಟ್ ಪದವಿ ಪಡೆದು ''ಗೊಂಬೆ ಸ್ಟ್ರೀಮ್ ರಿಸರ್ಚ್ ಸೆಂಟರ್''ನ್ನು ಸ್ಥಾಪಿಸಿದರು. ಜೇನ್ ಗೂಡಾಲ್ ನೇತೃತ್ವದಲ್ಲಿ, ಚಿಂಪಾಂಜಿ ಮತ್ತು ಆಲೀವ್ ಬಬೂನ್ಸ್ ಬಗ್ಗೆ ನಡೆಯುತ್ತಿರುವ ಹೊರಾಂಗಣ ಸಂಶೋಧನೆ ಮಾನವನಲ್ಲದ ಪ್ರೈಮೇಟ್‌ಗಳ (ಸಸ್ತನಿಗಳ) ನಡೆವಳಿಕೆಯ ಬಗ್ಗೆ ನಮಗೆ ಪರಿಜ್ಞಾನವನ್ನು ತಂದುಕೊಟ್ಟಿದೆ. ಇದು ನಿರಂತರವಾಗಿ ೪ ದಶಕಗಳಿಂದ ನಡೆಯುತ್ತಿರುವ ದೀರ್ಘಾವಧಿಯ ಸಂಶೋಧನೆ.

ಜೇನ್ ೧೯೭೭ರಲ್ಲಿ ಸ್ಥಾಪಿಸಿದ ''ಜೇನ್ ಗೂಡಾಲ್ ಇನ್‌ಸ್ಟಿಟ್ಯೂಟ್'' ಶಾಂತಿಯುತ ನಾಳೆ ನಮ್ಮದಾಗಿಸುವುದಕ್ಕೆ ದೇಶ ವಿದೇಶಗಳಲ್ಲಿ ಸತತವಾಗಿ ಕಾರ್ಯನಿರತವಾಗಿದೆ. ವನ ಸಂರಕ್ಷಣೆ, ಪ್ರಾಣಿ ಸಂರಕ್ಷಣೆ ಮತ್ತು ಇತರೇ ಪರಿಸರ ಸಂರಕ್ಷಣೆಯಲ್ಲದೆ, ಜಾತಿ, ಕುಲ, ಮತಗಳ ಭೇದವಿಲ್ಲದೆ ನಾವೆಲ್ಲರೂ ಈ ಭೂಮಿಯ ಮೇಲೆ ಶಾಂತಿ ಸೌಹಾರ್ದತೆಯಿಂದ ಬಾಳಬೇಕೆಂದು ಪ್ರಪಂಚದ ಮೂಲೆ ಮೂಲೆಗಳಲ್ಲಿ ಈ ಸಂಘ ಪ್ರಚಾರ ಕೈಗೊಂಡಿದೆ. ಅಮೆರಿಕ, ಕೆನಡಾ, ಚೀಣಾ, ಜರ್ಮನಿ, ಹಾಲೆಂಡ್, ಇಟಲಿ, ದಕ್ಷಿಣ ಆಫ್ರಿಕಾ, ಉಗಾಂಡಾ, ಟಾನ್ಜೇನಿಯಾ, ಹಾಗೂ ಬ್ರಿಟನ್‌ನಲ್ಲಿ ಈ ಸಂಘದ ಶಾಖೆಗಳು ಸಕ್ರಿಯವಾಗಿ ಕೆಲಸ ಮಾಡುತ್ತಿವೆ. ಡಾ॥ ಜೇನ್ ಗೂಡಾಲ್ ಗಳಿಸಿರುವ ಪುರಸ್ಕಾರ ಬಹುಮಾನಗಳನ್ನು ವಿವರವಾಗಿ ಬರೆದಲ್ಲಿ ಅದು ಹಲವಾರು ಪುಟಗಳೇ ಆಗಬಹುದು. ೧೯೮೪ರಲ್ಲಿ ಇವರಿಗೆ 'ಪಾಲ್‌ಗೆಟ್ಟಿ' ವನ್ಯಜೀವಿ ಸಂರಕ್ಷಣಾ ಪುರಸ್ಕಾರ ದೊರೆಯಿತು. ಅತಿ ಮಹತ್ತಾದ 'ಕ್ಯೋಟೊ ಪುರಸ್ಕಾರ' ಹಾಗೂ ನ್ಯಾಷನಲ್ ಜಿಯೋಗ್ರಾಫಿಕ್ ಸೊಸೈಟಿಯ 'ಹಬ್ಬರ್ಡ್ ಪುರಸ್ಕಾರ'ದಿಂದ ಇವರು ಗೌರವಿಸಲ್ಪಟ್ಟಿದ್ದಾರೆ. ಬ್ರಿಟನ್ನಿನ ರಾಣಿ ಎಲಿಜಬೆತ್, ಇವರನ್ನು 'ಬ್ರಿಟಿಷ್ ಸಾಮ್ರಾಜ್ಯದ ಕಮ್ಯಾಂಡರ್' ಎಂದು ಹೆಸರಿಸಿದ್ದಾರೆ. ಅಲ್ಲದೆ ಹುಟ್ಟಿನಿಂದ ಟಾನ್ಜೇನಿಯಾದ ಪ್ರಜೆ ಅಲ್ಲದಿದ್ದರೂ



**ಜೇನ್ ಗೂಡಾಲ್ ೧೯೩೪ರ ಏಪ್ರಿಲ್, ೩ರಂದು ಲಂಡನ್ನಿನಲ್ಲಿ ಜನಿಸಿದರು. ಮುಂದೆ ಬಾಲ್ಯದ ದಿನಗಳನ್ನು ಇಂಗ್ಲೆಂಡಿನ ದಕ್ಷಿಣ ಕರಾವಳಿಯಲ್ಲಿರುವ ಬೋರ್ನ್‌ಮೌತ್‌ನಲ್ಲಿ ಕಳೆದರು. ಬಾಲ್ಯದಿಂದಲೇ ಇವರು ಪಶುಪ್ರಾಣಿಗಳಲ್ಲಿ ಅತ್ಯಾಸಕ್ತರಾಗಿದ್ದು, ಭವಿಷ್ಯದಲ್ಲಿ ಇವುಗಳೊಂದಿಗೆ ಕೆಲಸದಲ್ಲಿ ನಿರತರಾಗುವ ಕನಸನ್ನು ಕಂಡಿದ್ದರು. ೧೯೬೦ರಲ್ಲಿ ಇವರ ಕನಸು ನನಸಾಯಿತು. ಪ್ರಸಿದ್ಧ ಪ್ರಾಚೀನ ಜೀವ ಶಾಸ್ತ್ರಜ್ಞ ಪ್ರೊ॥ ಲೂಯಿಸ್ ಲೀಕಿಯ ಸಹಾಯಕಳಾಗಿ ಕೀನ್ಯಾದ ನೈರೋಬಿಯಲ್ಲಿ ಕೆಲಸ ಆರಂಭ ಮಾಡಿದ್ದು ಜೇನ್ ಗೂಡಾಲ್ ಜೀವನದಲ್ಲಿ ಒಂದು ಮೈಲಿಗಲ್ಲು.**

●

ಸಂದರ್ಶಕಿ : ಡಾ॥ ವೀಣಾ ರಾವ್

''ಟಾಂಜೇನಿಯಾದ ಮೆಡಲ್''ನ್ನು ಪಡೆದವರಲ್ಲಿ ಜೇನ್ ಗೂಡಾಲ್ ಏಕೈಕರು. ಡಾ|| ಜೇನ್ ಗೂಡಾಲ್ ಮಕ್ಕಳಿಗಾಗಿ, ವಯಸ್ಕರಿಗಾಗಿ ಹಲವಾರು ಪುಸ್ತಕಗಳನ್ನು ಬರೆದು ಜನರಲ್ಲಿ ಪ್ರಾಣಿಗಳ ಬಗ್ಗೆ ತಿಳಿವಳಿಕೆ ಮೂಡಿಸಲು ಶ್ರಮಿಸಿದ್ದಾರೆ. ಪ್ರಮುಖವಾಗಿ ಈ ಪುಸ್ತಕಗಳನ್ನು ಹೆಸರಿಸಬಹುದು: ''ಇನ್ ದ ಷಾಡೋ ಆಫ್ ಮ್ಯಾನ್'', ''ವೈಲ್ಡ್ ಚಿಂಪಾಂಜೀಸ್'', ''ರೀಸನ್ ಫಾರ್ ಹೋಪ್'', ''ಚಿಂಪಾಂಜೀಸ್ ಆಫ್ ಗೊಂಬೆ'', ಜೇನ್ ಗೂಡಾಲ್ಸ್ ಎನಿಮಲ್ ವರ್ಲ್ಡ್ಸ್, 'ಡಾ|| ವೈಟ್' ಹಾಗೂ ''ಮೈ ಲೈಫ್ ವಿತ್ ಚಿಂಪಾಂಜೀಸ್''. ಇವರು ವಿಶ್ವರಾಷ್ಟ್ರ ಸಂಸ್ಥೆಯ ಮನ್ನಣೆ ಪಡೆದಿರುವ ಶಾಂತಿದೂತರಾಗಿಯೂ ಕಾರ್ಯನಿರತರಾಗಿದ್ದಾರೆ. ವೈಜ್ಞಾನಿಕ ನಿಯತಕಾಲಿಕಗಳಲ್ಲಿ ಇವರ ಲೇಖನಗಳು ಯಥೇಚ್ಛವಾಗಿ ಪ್ರಕಟಗೊಂಡಿವೆ. ಚಿಂಪಾಂಜಿಗಳ ನಡೆವಳಿಕೆಯನ್ನು ಅವುಗಳ ಸ್ವಾಭಾವಿಕ ವಾಸಸ್ಥಾನದಲ್ಲಿಯೇ, ೨೫ ವರ್ಷಗಳ ಕಾಲ ನಿರಂತರವಾಗಿ ಗಮನಿಸಿ ೧೯೮೬ರಲ್ಲಿ ಮಾನವಶಾಸ್ತ್ರದ ತಮ್ಮ ಸಂಶೋಧನೆಯ ದಾಖಲೆಗಳನ್ನು ಪ್ರಕಟಿಸಿ ಚಿಂಪಾಂಜಿಗಳ ಮತ್ತು ಮನುಷ್ಯನ ಪುರಾತನ ಪೂರ್ವಜರು ಒಬ್ಬರೇ ಎಂದು ಸ್ಪಷ್ಟಪಡಿಸಿದ್ದಾರೆ.

ಪ್ರಾಣಿಗಳ ಬಗ್ಗೆ ನಿಮ್ಮ ಆಸಕ್ತಿ, ಪ್ರೀತಿ ಆರಂಭವಾಗಿದ್ದು ಹೇಗೆ ಎಂಬ ನನ್ನ ಪ್ರಶ್ನೆಗೆ ಜೇನ್ ಗೂಡಾಲ್ ತಮ್ಮ ನೆನಪಿನ ಸುಳಿಯನ್ನು ಬಿಚ್ಚುತ್ತಾ ''ನನಗೆ ಜ್ಞಾಪಕವಿದ್ದಂತೆ ನಾನು ಒಂದೂವರೆ ವರ್ಷದವಳಿದ್ದಾಗಿನಿಂದ ಪ್ರಾಣಿಗಳೆಂದರೆ ಪಂಚಪ್ರಾಣ. ಆದರೆ ಅದು ಆನುವಂಶಿಕವಾಗಿ ಬಂದಿರಲು ಸಾಧ್ಯವಿಲ್ಲ. ಪ್ರಾಯಶಃ ಯಾವುದೋ ಒಂದು ಘಟನೆ ಅಥವಾ ಅನುಭವ ನನ್ನ ಮನಸ್ಸಿನ ಮೇಲೆ ಗಾಢವಾದ ಪ್ರಭಾವ ಬೀರಿರಬೇಕು. ೨ ವರ್ಷದವಳಿದ್ದಾಗ ಎಲ್ಲ ಹೆಣ್ಣುಮಕ್ಕಳಂತೆ ಅಂದಚೆಂದದ ಬೊಂಬೆಗಳಿಗಾಗಿ ಹಾತೊರೆಯದೆ, ಆಡಲು ಚಿಂಪಾಂಜಿ ಬೇಕೆಂದು ಹಠ ಹಿಡಿದೆ. ನನ್ನ ಆಸೆಯನ್ನು ಪೂರೈಸಲು ನನ್ನ ತಂದೆ-ತಾಯಿ ಆಟದ ಚಿಂಪಾಂಜಿಯೊಂದನ್ನು ನನ್ನ ಹುಟ್ಟುಹಬ್ಬದಂದು ಕಾಣಿಕೆಯಾಗಿ ಕೊಟ್ಟರು. ಅಂದು ನನ್ನ ಆನಂದ ಹೇಳತೀರದು. ಅದನ್ನು ನಾನು 'ಜ್ಯುಬಿಲಿ' ಎಂದು ಕರೆದೆ. ಇಂದಿಗೂ 'ಜ್ಯುಬಿಲಿ' ನನ್ನ ಜೊತೆ ಮನೆಯಲ್ಲಿದೆ. ಆಫ್ರಿಕಾ ಖಂಡವನ್ನು ನೋಡಬೇಕೆಂಬ ಆಕಾಂಕ್ಷೆ ಅಂದಿನಿಂದಲೇ ಶುರುವಾಗಿರಬಹುದು.''

**ಸಂ**: ನೀವು ಹುಟ್ಟಿ ಬೆಳೆದದ್ದು ಇಂಗ್ಲೆಂಡ್‌ನಲ್ಲಿ, ಆಫ್ರಿಕಾದ ಗೀಳು ನಿಮಗೆ ಏಕೆ ಹುಟ್ಟಿತು ? ನಿಮ್ಮ ಬಾಲ್ಯದಲ್ಲಿ ಪ್ರಾಣಿಗಳೊಂದಿಗೆ ಬೆಳೆದಿರಾ ? ಇದಕ್ಕೆ ಮನೆಯವರು ಉತ್ತೇಜನ ನೀಡಿದರೆ ?

**ಜೇನ್** : ೨ನೇ ಮಹಾಯುದ್ಧದ ಕಾರಣ, ನಾವೆಲ್ಲಾ ಲಂಡನ್ ನಗರ ಬಿಟ್ಟು ಇಂಗ್ಲಿಷ್ ಕಡಲ್ಗಾಲುವೆಯ ಹತ್ತಿರ ಇರುವ ಬೋರ್ನ್‌ಮೌತ್‌ಗೆ ಪ್ರಯಾಣ ಬೆಳೆಸಿ, ಅಲ್ಲಿ ನನ್ನ ತಾಯಿ, ನನ್ನ ಸೋದರಿ, ನನ್ನ ಅಜ್ಜಿ ''ಡ್ಯಾನಿ'' ಮತ್ತಿತರ ಹತ್ತಿರ ಸಂಬಂಧಿಗಳ ಜೊತೆ ''ದ ಬರ್ಚಸ್'' ಎಂಬ ಸುಂದರ ಕೆಂಪು ಇಟ್ಟಿಗೆಯ ವಿಸ್ತಾರವಾದ ಮನೆಯಲ್ಲಿ ವಾಸಿಸತೊಡಗಿದೆವು. ಅಲ್ಲಿ ಕೋಳಿಗಳೂ, ಬಾತುಕೋಳಿಗಳೂ ಹೇರಳವಾಗಿ ಇದ್ದವು. ರೇಸ್ ಕುದುರೆಗಳ ಲಾಯ ಸಹ ಇತ್ತು. ನನಗೆ ಶಾಲೆಯ ಪಾಠಗಳಲ್ಲಿ ಅಷ್ಟೇನೂ ಆಸಕ್ತಿ ಇರಲಿಲ್ಲ. ಸಮಯ ದೊರೆತಾಗಲೆಲ್ಲಾ, ಹತ್ತಿರದ ಗುಡ್ಡ ಬೆಟ್ಟಗಳಲ್ಲಿ ಅಥವಾ ಇಂಗ್ಲಿಷ್ ಕಡಲ್ಗಾಲುವೆ ತೀರದ ಬಳಿ, ಪಕ್ಷಿಗಳ ಕಲರವ ಆಲಿಸುತ್ತಾ ಕಾಲವನ್ನು ಕಳೆಯುತ್ತಿದ್ದೆ. ಚಿಕ್ಕಂದಿನಿಂದಲೇ ಪುಸ್ತಕ ಓದುವ ಹವ್ಯಾಸವನ್ನು ನನ್ನ ತಾಯಿ ನನ್ನಲ್ಲಿ ಬಿತ್ತಿದ್ದರು. ಹ್ಯೂ ಲಾಫ್ಟಿಂಗ್ ಬರೆದ ''ಡಾ|| ಡೂಲಿಟಲ್'' ಕತೆಯನ್ನು ನಾನು ಎಷ್ಟು ಸಾರಿ ಓದಿದ್ದೇನೋ ನನಗೇ ಗೊತ್ತಿಲ್ಲ. ನನ್ನ ಮೇಲೆ ಗಾಢವಾದ ಪ್ರಭಾವ ಬೀರಿದಂತಹ ಪುಸ್ತಕವಿದು. ರುಡ್ಯಾರ್ಡ್ ಕಿಪ್ಲಿಂಗ್‌ನ ''ಜಂಗಲ್ ಬುಕ್'' ಹಾಗೂ ಎಡ್ಗರ್ ರೈಸ್ ಬರೋಸ್‌ನ ''ಟಾರ್ಜಾನ್'' ಪುಸ್ತಕಗಳು, ನಾನು ಭವಿಷ್ಯದಲ್ಲಿ ಆಫ್ರಿಕಾ ಖಂಡಕ್ಕೆ ಹೋಗಿಯೇತೀರಬೇಕೆಂಬ ನನ್ನ ಸಂಕಲ್ಪಕ್ಕೆ ಭದ್ರವಾದ ತಳಪಾಯವನ್ನು ಹಾಕಿದವು. ಎಲ್ಲಕ್ಕಿಂತ ಹೆಚ್ಚಾಗಿ ನನ್ನ ಪ್ರಯತ್ನಗಳಿಗೆ ಉತ್ತೇಜನ ಹಾಗೂ ಪ್ರೋತ್ಸಾಹ ನೀಡಿ ನನ್ನ ಬೆನ್ನೆಲುಬಾಗಿ ನಿಂತವರು ಬರಹಗಾರ್ತಿಯಾದ ನನ್ನ ತಾಯಿ ವಾನ್ನೇ ಗೂಡಾಲ್.

ಬಾಲ್ಯದಲ್ಲಿ ಸಿಹಿ ನೆನಪುಗಳನ್ನು ಮೆಲಕು ಹಾಕುತ್ತಾ ಜೇನ್ ಗೂಡಾಲ್ ಮುಂದುವರಿಸಿ ''ಒಮ್ಮೆ, ಕೋಳಿಯಿಂದ ಮೊಟ್ಟೆ ಹೇಗೆ ಹೊರಬರುತ್ತೆ ಎಂಬ ಸಂದೇಹ ನನ್ನನ್ನು ಕಾಡುತ್ತಿತ್ತು. ಮನೆಯಲ್ಲಿ ಯಾರೂ ಸಮರ್ಪಕವಾಗಿ ಉತ್ತರವನ್ನು ನೀಡಲಿಲ್ಲ. ಕೊನೆಗೆ ನಾನೇ ಒಂದು ತೀರ್ಮಾನಕ್ಕೆ ಬಂದು, ಕೋಳಿಗಳ ಮನೆಯಲ್ಲಿ ನುಗ್ಗಿ, ಸದ್ದು ಮಾಡದೆ ಬಚ್ಚಿಟ್ಟುಕೊಂಡು ಕುಳಿತೆ. ಹಲವಾರು ಘಂಟೆಗಳ ನಂತರ ಒಂದು ಕೋಳಿ, ಮೊಟ್ಟೆ ಇಟ್ಟಿದ್ದನ್ನು ಬಿಟ್ಟ ಕಣ್ಣು ತೆರೆದಬಾಯಿ ಇಟ್ಟುಕೊಂಡು ನೋಡಿದೆ. ಏನೋ ಸಾಧಿಸಿದ ತೃಪ್ತಿ ನನ್ನಲ್ಲುಂಟಾಯಿತು. ಮನೆಗೆ ಹಿಂದಿರುಗಿದಾಗ, ಅಲ್ಲಿನ ವಾತಾವರಣ ಅತಿ ಸೂಕ್ಷ್ಮವಾಗಿತ್ತು. ಏಕೆಂದರೆ ನಾನು ಎಲ್ಲೋ ತಪ್ಪಿಸಿಕೊಂಡಿದ್ದೇನೆಂದು ಮನೆಯವರು ಆತಂಕಪಟ್ಟಿದ್ದರು. ಪೊಲೀಸ್‌ಠಾಣೆಯ ತನಕ ದೂರು ಹೋಗಿತ್ತು. ಇಂಥ ಸಂದರ್ಭದಲ್ಲೂ ನನ್ನ ಒಲುಮೆಯ ತಾಯಿ ನನ್ನ ಮೇಲೆ ಕಿಂಚಿತ್ತೂ ಕೋಪಗೊಳ್ಳದೆ, ನನ್ನ ಉತ್ಸಾಹದ ಬುಗ್ಗೆಗೆ ತಣ್ಣೀರೆರಚದೆ, ಕೋಳಿಮೊಟ್ಟೆಯ ಕಥೆಯನ್ನು ನನ್ನಿಂದ ಸಂಪೂರ್ಣವಾಗಿ ಕೇಳಿ ನನ್ನ ಸಂತೋಷದಲ್ಲಿ ತಾನೂ ಭಾಗಿಯಾದಳು. ಬಹುಶಃ ಇದು ಪ್ರಾಣಿಗಳೊಡನೆ ನಾನು ನಡೆಸಿದ ಮೊಟ್ಟಮೊದಲ ಪ್ರಯೋಗವೆನ್ನಬಹುದು.

**ಸಂ** : ನಿಮ್ಮ ಕನಸು ನನಸಾಗಲು ನೀವು ನಡೆದ ದಾರಿ ಸುಗಮವಾಗಿತ್ತೆ ? ಅದರಲ್ಲೂ ಒಬ್ಬ ಇಂಗ್ಲಿಷ್ ಹುಡುಗಿ ಅಂದಿನ ದಿನಗಳಲ್ಲಿ ಆಫ್ರಿಕಾಗೆ ಹೋಗಬೇಕೆಂದರೆ ಸಾಕಷ್ಟು ತೊಡಕುಗಳು, ಉತ್ಸಾಹ ಕುಗ್ಗಿಸುವ ಮಾತುಗಳು ಹೇರಳವಾಗಿದ್ದಿರಬೇಕು, ಅಲ್ಲವೇ ?

**ಜೇನ್** : ಹೌದು. ಅಂದಿನ ದಿನಗಳಲ್ಲಿ ಆಫ್ರಿಕಾ ಖಂಡವನ್ನು 'ಕತ್ತಲೆಯ ಖಂಡ' ಎಂದು ಕರೆಯುತ್ತಿದ್ದರು. ಅಲ್ಲಿಗೆ ಪ್ರಯಾಣ ಬೆಳೆಸಲು ಹಣ ನಮ್ಮ ಬಳಿ ಇರಲಿಲ್ಲ. ನನ್ನ ತಾಯಿ ಮಾತ್ರ ನನಗೆ ಉತ್ತೇಜನ ನೀಡಿ 'ಮನಸ್ಸಿದ್ದಲ್ಲಿ ಮಾರ್ಗವಿದೆ', 'ಕಷ್ಟಪಟ್ಟರೆ ಫಲವುಂಟು' ಎಂದು ಪದೇ ಪದೇ ನನ್ನ ಉತ್ಸಾಹ ಕುಗ್ಗಿದಾಗಲೆಲ್ಲಾ ಹೇಳಿ ಹುರಿದುಂಬಿಸುತ್ತಿದ್ದರು.



*ಗೆದ್ದಲು ಹುಳ ಹಿಡಿಯಲು ಕಡ್ಡಿಯ ಬಳಕೆ* *ಚಿತ್ರ ಕೃಪೆ : www.janegoodall.net*

**ಸಂ** : ಕೊನೆಗೂ ನೀವು ಆಫ್ರಿಕಾ ತಲುಪಿದಿರಿ. ನೈರೋಬಿಯಲ್ಲಿ, ನಿಮ್ಮ ಜೀವನಕ್ಕೇ ಹೊಸ ತಿರುವು ಕೊಟ್ಟ ಪ್ರೊ|| ಲೂಯಿಸ್ ಲೀಕಿಯೊಡನೆ ನಿಮ್ಮ ಭೇಟಿಯಾಗಿ, ಅವರೊಂದಿಗೆ ಕೆಲಸ ಮಾಡತೊಡಗಿದಿರಿ. ಅಲ್ಲಿಂದ ಮುಂದೆ ನೀವು ''ಗೊಂಬೆ ನ್ಯಾಷನಲ್ ಪಾರ್ಕ್''ಗೆ ತೆರಳಿ ಅಲ್ಲಿರುವ ಕಾಡಿನ ಚಿಂಪಾಂಜಿಗಳ ನಡೆವಳಿಕೆಯ ಬಗ್ಗೆ ಸಂಶೋಧನೆ ಮಾಡುವಿರೆಂದು ನೀವು ಎಂದಾದರೂ ಊಹಿಸಿದ್ದೀರಾ ?

**ಜೇನ್** : ಶಾಲೆಯ ವ್ಯಾಸಂಗ ಮುಗಿದ ಬಳಿಕ ಹಣದ ಕೊರತೆಯಿಂದ ವಿಶ್ವವಿದ್ಯಾನಿಲಯದಲ್ಲಿ ಕಲಿಯಲು ಹೋಗಲಾಗಲಿಲ್ಲ. ಹೀಗಾಗಿ, ಸೆಕ್ರೆಟರಿಯಾಗಲು ತರಬೇತಿ ಪಡೆದು ಅಲ್ಲಿ ಇಲ್ಲಿ ಸಣ್ಣಪುಟ್ಟ ಕೆಲಸಗಳನ್ನು ಮಾಡಲಾರಂಭಿಸಿದೆ. ಈ ಸಮಯದಲ್ಲಿ ನಡೆದ ಅಚ್ಚರಿಯ ಸಂಗತಿಯೆಂದರೆ, ಕೀನ್ಯಾಗೆ ಹೋಗಿ ನೆಲೆಸಿದ್ದ ನನ್ನ ಹಳೆಯ ಗೆಳತಿ ಒಬ್ಬಳಿಂದ ಅಲ್ಲಿಗೆ ಬರುವಂತೆ ಆಮಂತ್ರಣ ಬಂತು. ಕೀನ್ಯಾಗೆ ಪ್ರಯಾಣ ಬೆಳೆಸಲು ಸಾಕಷ್ಟು ಹಣ ಇರಲಿಲ್ಲವಾದ್ದರಿಂದ, ನಾನು ಹೋಟೆಲ್ ಒಂದರಲ್ಲಿ ಪರಿಚಾರಿಕೆಯಾಗಿ ಕೆಲಸ ಮಾಡಲಾರಂಭಿಸಿದೆ. ಕೊನೆಗೊಂದು ದಿನ ಕೀನ್ಯಾ ತಲುಪಿದೆ. ಅದೃಷ್ಟವಶಾತ್ ಪ್ರಾಚೀನ ಪ್ರಾಣಿಶಾಸ್ತ್ರಜ್ಞ ಲೂಯಿಸ್ ಲೀಕಿಯ ಜೊತೆ ಕೆಲಸ ಮಾಡುವ ಸದವಕಾಶ ಲಭಿಸಿತು. ಹೀಗೆ ಆರಂಭವಾಯ್ತು ನನ್ನ ಸಂಶೋಧನಾ ಚರಿತ್ರೆ. ೧೯೫೭ರಲ್ಲಿ ಪ್ರೊ|| ಲೂಯಿಸ್ ಲೀಕಿ ಟಾನ್ಜೇನಿಯಾದಲ್ಲಿರುವ ''ಓಲ್ಡುವಾಯ್'' ಕಣಿವೆಯಲ್ಲಿ ಪಳೆಯುಳಿಕೆ ಬಗ್ಗೆ ತಮ್ಮ ಹೆಂಡತಿ ಮೇರಿಯ ಜೊತೆ ಸಂಶೋಧನೆ ನಡೆಸುತ್ತಿದ್ದರು. ಹೀಗಿರುವಾಗ ಟಾನ್ಜೇನಿಯಾದ ಟ್ಯಾಂಗನೀಕ ಸರೋವರ ತೀರದ ಕಾಡುಗಳಲ್ಲಿ ಸಾಕಷ್ಟು ಹೇರಳವಾಗಿ ಚಿಂಪಾಂಜಿಗಳಿವೆಯೆಂದು ತಿಳಿದುಬಂತು. ಆಗ ಪ್ರೊ|| ಲೀಕಿಯವರ ಮನಸ್ಸಿನಲ್ಲಿ ಒಂದು ಯೋಚನೆ ಹುಟ್ಟಿತು. ಚಿಂಪಾಂಜಿಗಳು ಮಾನವನ ನಿಕಟ ಸಂಬಂಧಿ

ಎಂದು ತಿಳಿದೇ ಇತ್ತು. ಆದ್ದರಿಂದ, ಅವುಗಳ ವರ್ತನೆ, ಜೀವನದ ರೀತಿಗಳನ್ನು ಅರಿತಲ್ಲಿ ನಮ್ಮ ಶಿಲಾಯುಗದ ಪೂರ್ವಜರ ಜೀವನದ ರೀತಿಯ ಬಗ್ಗೆ ಸ್ವಲ್ಪ ತಿಳಿವಳಿಕೆ ಪಡೆಯುವ ಸಾಧ್ಯತೆ ಇದೆ ಎಂದು ಪ್ರೊ|| ಲೀಕಿ ಯೋಚಿಸಿದರು. ನವೀನ ರೀತಿಯ ಈ ಯೋಜನೆಗೆ ತೊಡಕುಗಳು ನೂರಾರಿದ್ದರೂ, ಅದು ಯಶಸ್ವಿಯಾದಲ್ಲಿ, ವಿಜ್ಞಾನ ಲೋಕದಲ್ಲಿ ಹೊಸ ಅಲೆಗಳನ್ನುಂಟುಮಾಡುವುದರಲ್ಲಿ ಯಾರಿಗೂ ಸಂದೇಹವಿರಲಿಲ್ಲ. ಆದರೆ ಈ ತಳಸ್ಪರ್ಶಿ ಸಂಶೋಧನಾ ಕಾರ್ಯಕ್ಕೆ ಹಣ ಹೇಗೆ ಒದಗಿಸುವುದು ? ಯಾರನ್ನು ಕಳುಹಿಸುವುದು ? ಇದು ಪ್ರೊ|| ಲೀಕಿಯವರ ಸಮಸ್ಯೆಯಾಗಿತ್ತು. ಮಿಕ್ಕ ಎಲ್ಲ ಹುಡುಗಿಯರಂತೆ ನಾನಲ್ಲ ಎಂದು ಪ್ರೊ|| ಲೀಕಿಯವರಿಗೆ ಆಗಲೇ ಮನದಟ್ಟಾಗಿತ್ತು. ನಗರದ ಜೀವನದ ಕಡೆ ನಾನು ಎಂದೂ ಆಕರ್ಷಿತಳಾಗಿರಲಿಲ್ಲ. ನನ್ನ ದಿನನಿತ್ಯದ ಅವಶ್ಯಕತೆಗಳು ಮಿಕ್ಕವರಿಗಿಂತ ತೀರಾ ಕಡಿಮೆಯದಾಗಿದ್ದವು. ಸುಮಾರು ಸಮಯ, ನನ್ನಲ್ಲಿದ್ದ ಪ್ರಾಣಿಪ್ರೇಮ, ತಾಳ್ಮೆ, ಧೈರ್ಯ ಮತ್ತು ಹುಮ್ಮಸ್ಸನ್ನು ದೃಷ್ಟಿಯಲ್ಲಿಟ್ಟುಕೊಂಡು, ಪ್ರೊ|| ಲೀಕಿ ನನ್ನನ್ನು ''ಟಾನ್ಜೇನಿಯಾ''ದ ಗೊಂಬೆ ನ್ಯಾಷನಲ್ ಪಾರ್ಕ್‌ಗೆ ಅವರ ಪ್ರತಿನಿಧಿಯಾಗಿ ಕಳಿಸಲು ಒಪ್ಪಿದರು.

**ಸಂ :** ಚಿಂಪಾಂಜಿಗಳ ನಡೆವಳಿಕೆಯ ಬಗ್ಗೆ ಹೊರಾಂಗಣ ಸಂಶೋಧನೆಯಲ್ಲಿ ಮೊದಲಿಗರೆನಿಸಿಕೊಂಡಿರಿ. ಮೊದಲಲ್ಲಿ ನೀವು ಎದುರಿಸಿದ ಸಮಸ್ಯೆಗಳಾವುವು ?

**ಜೇನ್ :** ಮೊದಲನೆಯದಾಗಿ ಹಣದ ಬಿಕ್ಕಟ್ಟು. ಅದೃಷ್ಟವಶಾತ್ ಪ್ರೊ|| ಲೀಕಿಯ ಅಭಿಮಾನಿಯಾಗಿದ್ದ ಅಮೆರಿಕದ ಮಿ. ವಿಲ್ಕೀ ಎಂಬಾತ ಮೊದಲ ೬ ತಿಂಗಳ ಸಂಶೋಧನಾ ಕಾರ್ಯಕ್ಕೆ ಹಣ ಒದಗಿಸಲು ಮುಂದಾದರು. ಆದರೆ ಬ್ರಿಟಿಷ್ ಸರ್ಕಾರ, ನಾನು ಒಬ್ಬಳೇ ಕಾಡಿನಲ್ಲಿ ವಾಸಿಸಲು ಅನುಮತಿ ನೀಡಲಿಲ್ಲ. ಆಗ ಸದಾ ನನ್ನನ್ನು ಉತ್ತೇಜಿಸುತ್ತಿದ್ದ ನನ್ನ ತಾಯಿ ವಾನ್ನೆ ಗೂಡಾಲ್ ನನ್ನ ಸಂಗಡ ಬಂದಿರಲು ತಯಾರಾದರು.



*ಚಿಂಪಾಜಿಯೊಂದಿಗೆ ಸಂವಾದ*

*ಚಿತ್ರ ಕೃಪೆ : www.janegoodall.net*

ಹಿಂದಿನ ನೆನಪಿನ ಸುಳಿಯಲ್ಲಿ ಸಿಕ್ಕಿ ಭಾವುಕರಾದ ಜೇನ್ ಗೂಡಾಲ್ ತಮ್ಮ ಮಾತನ್ನು ಮುಂದುವರಿಸುತ್ತಾ,

''ಗೊಂಬೆ ನ್ಯಾಷನಲ್ ಪಾರ್ಕ್''ನಲ್ಲಿ ವಾಸವಾಗಿದ್ದ ಚಿಂಪಾಂಜಿಗಳ ಸ್ನೇಹ ವಿಶ್ವಾಸ ಗಳಿಸಲು ಸ್ವಲ್ಪ ಸಮಯ ಬೇಕಾಯಿತು. ನಾನು ಎಲ್ಲಾ ಚಿಂಪಾಂಜಿಗಳಿಗೆ ಒಂದೊಂದು ಹೆಸರು ಕೊಟ್ಟಿದ್ದೆ. ಆಗ ವಿಜ್ಞಾನಿಗಳು ಇದನ್ನು ಖಂಡಿಸಿ, ಪ್ರಾಣಿಗಳಲ್ಲಿ ಯಾವ ಭಾವನೆಗಳೂ ಇಲ್ಲವಾದ್ದರಿಂದ ಅವುಗಳನ್ನು ಬರಿಯ ಸಂಖ್ಯೆ ಕೊಟ್ಟು ಕರೆಯಬೇಕೆಂದು ವಾದಿಸಿದರು. ಆದರೆ, ಹಲವು ವರ್ಷದ ಬಳಿಕ ಪ್ರಾಣಿಗಳಿಗೂ ನಮ್ಮಂತೆ ಭಾವನೆಗಳಿವೆ ಎಂದು ವಿಜ್ಞಾನಿಗಳು ಘೋಷಿಸಿದರು !

ಒಮ್ಮೆ ನಾನು ಚಿಂಪಾಂಜಿಗಳ ನಡುವೆ ಇದ್ದಾಗ ''ಡೇವಿಡ್ ಗ್ರೇ ಬಿಯರ್ಡ್'' ಎಂಬ ಚಿಂಪಾಂಜಿ, ಗೆದ್ದಲು ಹುತ್ತದಿಂದ ಗೆದ್ದಲು ಹುಳಗಳನ್ನು ತಿನ್ನುವುದಕ್ಕಾಗಿ ಹಿಡಿಯಲು, ಅಲ್ಲೇ ಒಂದು ಕೊಂಬೆಯನ್ನು ಮುರಿದು, ಅದರಿಂದ ಎಲೆಗಳನ್ನು ಸುಲಿದು ಅದನ್ನೇ ಒಂದು ಸಾಧನವಾಗಿ ಪರಿವರ್ತಿಸಿಕೊಂಡು ಉಪಯೋಗಿಸುವುದನ್ನು ಕಂಡೆ. ಅಲ್ಲಿಯ ತನಕ ಇಂಥ ಹತ್ಯಾರು ಮಾಡುವ ಶಕ್ತಿ ಕೇವಲ ಮನುಷ್ಯನಲ್ಲಿದೆ ಎಂದು ವಿಜ್ಞಾನಿಗಳು ನಂಬಿದ್ದರು. ರೋಮಾಂಚನಗೊಂಡ ನಾನು ತಕ್ಷಣ ಪ್ರೊ|| ಲೀಕಿಗೆ ಟೆಲಿಗ್ರಾಮ್ ಕೊಟ್ಟೆ. ಆಗ ಅವರು ಉದ್ರೇಕಗೊಂಡು ಹೇಳಿದ ಕೆಲವು ವಾಕ್ಯಗಳು ಇನ್ನೂ ನನ್ನ ನೆನಪಿನಲ್ಲಿವೆ. ಹಾಗಾದರೆ, ಈಗ ''ಪುನಃ ಸಾಧನಗಳ ಹೊಸ ಸೂತ್ರ ನಿರ್ಮಾಣವಾಗಬೇಕು.'' ''ಚಿಂಪಾಂಜಿಗಳು ಮನುಷ್ಯ ಜಾತಿಗೆ ಸೇರಿದವು ಎಂದೊಪ್ಪಿಕೊಳ್ಳಬೇಕು.''

ಈ ಘಟನೆ ಅಂತರರಾಷ್ಟ್ರೀಯ ಮಟ್ಟದಲ್ಲಿ ವಿಜ್ಞಾನಿಗಳ ಗಮನ ಸೆಳೆದಾಗ, ನಮ್ಮ ಸಂಶೋಧನೆಗೆ ಹಣ ಒದಗಿಸಲು ''ನ್ಯಾಷನಲ್ ಜಿಯೋಗ್ರಾಫಿಕ್ ಸೊಸೈಟಿ'' ಮುಂದೆ ಬಂತು. ನ್ಯಾಷನಲ್ ಜಿಯೋಗ್ರಾಫಿಕ್ ಸೊಸೈಟಿ ಚಿಂಪಾಂಜಿಗಳೊಡನೆ ತಯಾರಿಸಿರುವ ಸುಂದರ, ಶೈಕ್ಷಣಿಕ ಸಾಕ್ಷ್ಯ ಚಿತ್ರಗಳು ಬಹು ಜನಪ್ರಿಯವಾಗಿವೆ.

**ಸಂ :** ಚಿಂಪಾಂಜಿಗಳು ಮನುಷ್ಯನನ್ನು ನೂರಾರು ರೀತಿಯಲ್ಲಿ ಹೋಲುತ್ತವೆ ಎಂಬ ನಿಮ್ಮ ಸಂಶೋಧನೆಯ ಬಗ್ಗೆ ಸ್ವಲ್ಪ ತಿಳಿಸುತ್ತೀರಾ ?

**ಜೇನ್ :** ಚಿಂಪಾಂಜಿಗಳ ದೇಹದಲ್ಲಿರುವ ರಕ್ತ, ನರವ್ಯೂಹ ನಮ್ಮಲ್ಲಿರುವಂತೆಯೇ ಇದೆ. ಮನುಷ್ಯನಿಗೆ ಅಂಟುವ ರೋಗಗಳು ಇವಕ್ಕೂ ಅಂಟಬಹುದು. ಅವುಗಳಲ್ಲೂ ಪ್ರೀತಿ, ಪ್ರೇಮ, ಸ್ನೇಹ, ಕರುಣೆ, ವಾತ್ಸಲ್ಯ ಮುಂತಾದ ಭಾವನೆಗಳಿವೆ. ಆದರೆ ಅದನ್ನು ಮಾತಿನ ಮೂಲಕ ಪ್ರಕಟಿಸಲು ಚಿಂಪಾಂಜಿಗಳು ಅಸಮರ್ಥರು. ಏಕೆಂದರೆ, ಇವುಗಳ ದೇಹದಲ್ಲಿ ಧ್ವನಿಪೆಟ್ಟಿಗೆ ಇಲ್ಲ. ಆದ್ದರಿಂದ ಭಾವನೆಗಳನ್ನು ಅಂಗಸನ್ನೆಯ ಮೂಲಕ ಪ್ರಕಟಿಸುತ್ತವೆ. ಮಾತಿಗೆ ಬದಲಾಗಿ, ಇವುಗಳಲ್ಲಿ ೩೦ಕ್ಕೂ ಹೆಚ್ಚಿನ, ವಿವಿಧ ಬಗೆಯ ಕೂಗುಗಳಿವೆ. ಒಂದೊಂದು ರೀತಿಯ ಕೂಗಿಗೂ ಅದರದೇ ಆದ ಅರ್ಥವಿದೆ. ಚಿಂಪಾಂಜಿಗಳಲ್ಲಿ ಹಲವಾರು ಗುಂಪುಗಳಿರುತ್ತವೆ. ಒಂದು ಗುಂಪಿನ ಚಿಂಪಾಂಜಿಗಳಲ್ಲಿ ಪ್ರೀತಿಯ ಬಂಧನವಿರುತ್ತೆ. ತಾಯಿ ಮಕ್ಕಳ ನಡುವಿನ ನಿಕಟ ಸಂಬಂಧವನ್ನಂತೂ ನೋಡೇ ಅನುಭವಿಸಬೇಕು. ತಾಯಿ, ತನ್ನ ಮಗುವನ್ನು ಸುಮಾರು [illegible] ವರ್ಷಗಳ ಕಾಲ ಮುಚ್ಚಟೆಯಿಂದ ನೋಡಿಕೊಳ್ಳುತ್ತದೆ. ಇವುಗಳಲ್ಲಿ ಜ್ಞಾಪಕ ಶಕ್ತಿ, ಕಲಿಯುವ ಶಕ್ತಿ ಮತ್ತು ಹಾಸ್ಯಪ್ರಜ್ಞೆ ಸಹ ಇದೆ ಎಂದು ಪ್ರಯೋಗಗಳಿಂದ ತಿಳಿದುಬಂದಿದೆ. ನಮ್ಮಲ್ಲಿರುವಂತೆ ಚಿಂಪಾಂಜಿಗಳಲ್ಲಿ ಗಂಡು, ದಂಡಿನ ಮುಖಂಡ. ವರ್ಗಶ್ರೇಣಿಯೂ ಅಸ್ತಿತ್ವದಲ್ಲಿದೆ. ಕ್ರೌರ್ಯ, ಹಿಂಸಾ ಪ್ರವೃತ್ತಿ ಹಾಗೂ ನಿಷ್ಕರುಣೆಯ ಭಾವನೆಗಳನ್ನು ಸಹ ಇವುಗಳಲ್ಲಿ ಕಾಣಬಹುದು. ಉದಾಹರಣೆಗೆ, ಗಂಡು ಚಿಂಪಾಂಜಿಗಳು ಎಷ್ಟೋ ಬಾರಿ ಬೇರೆ ಗುಂಪಿನವುಗಳನ್ನು ದುರಾಕ್ರಮಣದಿಂದ ಕೊಂದೇಬಿಡುತ್ತವೆ. ಶತ್ರುವಿನ ಗುಂಪಿನಲ್ಲಿರುವ ಹೆಣ್ಣು ಚಿಂಪಾಂಜಿಗಳಿಗೆ ಮಾತ್ರ, ಜೀವದಾನ ಮಾಡಿ ತಮ್ಮ ಗುಂಪಿಗೆ ಸೇರಿಸಿಕೊಳ್ಳುತ್ತವೆ.

ಇನ್ನೊಂದು ವಿಸ್ಮಯದ ವಿಷಯವೆಂದರೆ, ಕೆಲವು ಬಾರಿ ಗಂಡು ಚಿಂಪಾಂಜಿಗಳು ಮುಂಚಿತವಾಗಿಯೇ ಯೋಚಿಸಿ, ಈ ರೀತಿಯ ಹಿಂಸಾಕೃತ್ಯದಲ್ಲಿ ತೊಡಗಿ ಬೇರೆ ಗುಂಪಿನ ಇಡೀ ಸಮೂಹವನ್ನೇ ನಿರ್ನಾಮ ಮಾಡುತ್ತವೆ...

ಜೇನ್ ಗೂಡಾಲ್ ಇಲ್ಲಿ ಒಂದು ನಿಮಿಷ ನಿಲ್ಲಿಸಿ ಮತ್ತೊಂದು ವಿಷಯ ತಿಳಿಸಿದರು.

''ನಾನು ಚಿಂಪಾಂಜಿಗಳಲ್ಲಿ ನೋಡಿದ ಕ್ರೌರ್ಯ, ಹಿಂಸಾಪ್ರವೃತ್ತಿ ಮತ್ತು ನಿಷ್ಕರುಣೆಯ ಬಗ್ಗೆ ವಿಜ್ಞಾನ ಲೋಕಕ್ಕೆ ವರದಿ ಮಾಡಿದಾಗ ಅವರು ನನ್ನ ವರದಿಯನ್ನು ಖಂಡಿಸಿದರು. ಕ್ರೌರ್ಯ, ಹಿಂಸಾಪ್ರವೃತ್ತಿ ಹಾಗೂ ನಿಷ್ಕರುಣೆ, ಆನುವಂಶಿಕವಾಗಿ ನಮ್ಮ ಪೂರ್ವಜರಿಂದ ಬಂದಿರುವುದರಿಂದ, ಅದಕ್ಕೆ ತಾನು ಜವಾಬ್ದಾರನಲ್ಲ ಎಂದು ಮನುಷ್ಯರು ಭಾವಿಸಿದರೇನು ಗತಿ ಎಂಬ ಹೆದರಿಕೆ ವಿಜ್ಞಾನಿಗಳನ್ನು ಕಾಡಿತ್ತು''. ಜೇನ್ ಗೂಡಾಲ್ ಇಂದೂ ಸಹ ಭಾವುಕರಾಗಿ ''ಇದನ್ನು ನಾನು ಒಪ್ಪುವುದಿಲ್ಲ. ಕೆಡುಕನ್ನು ಉಂಟುಮಾಡುವ ಭಾವನೆಗಳು ನಮ್ಮ ಪೂರ್ವಜರಿಂದ ಬಂದಿದ್ದರೆ ಒಳಿತನ್ನು ಉಂಟುಮಾಡುವ ಸದ್ಭಾವನೆಗಳೂ ಅವರಿಂದ ನಮಗೆ ಲಭಿಸಿವೆ. ಚಿಂಪಾಂಜಿಗಳಲ್ಲಿ ಸ್ವಾಭಾವಿಕ ಉದಾರ ಮನೋಭಾವ ಇರುವುದನ್ನು ನೋಡಿದ್ದೇನೆ. ಪ್ರಾಣಿಗಳಲ್ಲಿ ಭಾವನೆಗಳನ್ನು ನಿಯಂತ್ರಿಸುವ ಶಕ್ತಿ ಇಲ್ಲ. ಆದರೆ ಮನುಷ್ಯನಲ್ಲಿ ಈ ಅಪರೂಪದ ಶಕ್ತಿ ಇದೆ. ಹಾಗಿದ್ದಲ್ಲಿ ಕೆಟ್ಟ ಭಾವನೆಗಳನ್ನು ದೂರವಿಟ್ಟು ನಾವೇಕೆ ಪ್ರೀತಿ ಶಾಂತಿ, ಸೌಹಾರ್ದತೆಯಿಂದ ಜೀವನ ನಡೆಸಬಾರದು ?''

**ಸಂ :** ಚಿಂಪಾಂಜಿಗಳಲ್ಲಿ ನಮ್ಮಂತೆ ಎಲ್ಲಾ ತರಹದ ಭಾವನೆಗಳಿವೆ ಎಂದು ನೀವು ಸ್ಪಷ್ಟಪಡಿಸಿದ್ದೀರಿ. ಹಾಗಿದ್ದಲ್ಲಿ ನೀವು ನೋಡಿದಂತೆ ಅವುಗಳಲ್ಲಿ ಸದಭಿರುಚಿ ಇದೆಯೇ ? ಆಧ್ಯಾತ್ಮಿಕ ಮನೋಭಾವನೆ ಇರುವ ಸೂಚನೆಗಳನ್ನೆಂದಾದರೂ ನೀವು ನೋಡಿದ್ದುಂಟೆ ?

**ಜೇನ್ :** ನಾನು ನೋಡಿದಂತೆ ಚಿಂಪಾಂಜಿಗಳು ಪ್ರಕೃತಿಯಲ್ಲಿ ಸುಂದರವಾದ ದೃಶ್ಯವನ್ನು ವೀಕ್ಷಿಸಿದಾಗ, ಉದಾಹರಣೆಗೆ, ಸುಂದರ ಜಲಪಾತವನ್ನು ನೋಡಿದಾಗ, ಅವುಗಳಲ್ಲಿ ಒಂದು ಬಗೆಯ ಭಯಮಿಶ್ರಿತ ಆಶ್ಚರ್ಯ ಹಾಗೂ ವಿಸ್ಮಯದ ಭಾವನೆ ಹುಟ್ಟುತ್ತೆ. ಕೆಲವು ಗಂಡು ಚಿಂಪಾಂಜಿಗಳು ಇಂಥ ಅದ್ಭುತ ನೋಟವನ್ನು

ವೀಕ್ಷಿಸಿದ ತಕ್ಷಣ, ತಮ್ಮ ಕಾಲಿನ ಮೇಲೆ ಹಿಂದಕ್ಕೂ ಮುಂದಕ್ಕೂ ತಾಳ ಬದ್ಧವಾಗಿ ಓಲಾಡುವುದನ್ನು ನಾನು ಸ್ವತಃ ನೋಡಿದ್ದೇನೆ. ಇನ್ನೂ ಕೆಲವು ಬಾರಿ, ಹತ್ತಿರದಲ್ಲಿರುವ ಗಿಡದ ಬಳ್ಳಿಗಳನ್ನು ಹಿಡಿದು ಜೋಕಾಲೆ ಆಡುವುದರ ಮೂಲಕ, ಜಲಪಾತದಿಂದ ಹೊರಹೊಮ್ಮುವ ತುಂತುರು ಹನಿಗಳ ಹತ್ತಿರ ಹೋಗಲು ಪ್ರಯತ್ನಿಸುತ್ತಿರುವುದನ್ನೂ ಸಹ ಕಂಡಿದ್ದೇನೆ. ನಾನು ಸಂಜೆಯ ವೇಳೆ ಸೂರ್ಯಾಸ್ತದ ಸೊಬಗನ್ನು ಏಕಾಂತದಲ್ಲಿ ಅನುಭವಿಸಲು ಕಾಡಿನಲ್ಲಿ ಒಂದೆಡೆ ಕುಳಿತಿದ್ದಾಗ, ನನ್ನಂತೆ ಕೆಲವು ಚಿಂಪಾಂಜಿಗಳು ಸೂರ್ಯನನ್ನೇ ದಿಟ್ಟಿಸುತ್ತಾ ಶಾಂತವಾಗಿ ಒಂದು ಬಂಡೆಯ ಮೇಲೆ ಕುಳಿತಿರುವುದೂ ಉಂಟು.

ಜೇನ್ ಗೂಡಾಲ್ ಇಲ್ಲಿ ನಿಧಾನಿಸಿ ತಮ್ಮ ಒಂದು ಅನಿಸಿಕೆಯನ್ನು ಮುಂದಿಟ್ಟರು.

ಚಿಂಪಾಂಜಿಗಳಲ್ಲಿ ವಾಕ್ ಶಕ್ತಿ ಇಲ್ಲವಾದ್ದರಿಂದ ತಮ್ಮ ಈ ಅನುಭವಕ್ಕೆ ಹೆಸರು ಕೊಡುವುದಕ್ಕಾಗಲೀ ಹಂಚಿಕೊಳ್ಳುವುದಕ್ಕಾಗಲೀ ಆಗದೇ ಇರುವುದು ಒಂದು ರೀತಿಯಲ್ಲಿ ಒಳ್ಳೆಯದೇ ಅನ್ನಬಹುದು. ಏಕೆಂದರೆ, ನಾವು ಎಲ್ಲಾ ಸುಂದರ ಅನುಭವಗಳಿಗೆ ಹೆಸರಿಟ್ಟು, ಪರಿಶೀಲಿಸಿ ಅದರಿಂದ ನಮಗೆ ಸಿಗಬಹುದಾದ ಅನಿರ್ವಚನೀಯ ಆನಂದವನ್ನು ನಾವು ಕಳೆದುಕೊಂಡಿದ್ದೇವೆ ಎಂದೆನಿಸುತ್ತದೆ. ಇಂದು, ನಮ್ಮ ಬಳಿ ಪ್ರಕೃತಿಯ ಸೌಂದರ್ಯವನ್ನು ಅನುಭವಿಸುವುದಕ್ಕಾಗಲೀ, ಗೌರವಿಸುವುದಕ್ಕಾಗಲೀ ಸಮಯವಿಲ್ಲ. ಆಸಕ್ತಿಯೂ ಇಲ್ಲ. ಈ ಅದ್ಭುತ ಶಕ್ತಿ ನಮ್ಮ ಕೈಬಿಟ್ಟು ಹೋಗುತ್ತಿದೆ. ಇದರಿಂದಾಗಿಯೇ ಅರಣ್ಯಗಳ ನಾಶವಾಗಿ ಅಲ್ಲಿನ ಪಶುಪಕ್ಷಿಗಳು ನಿರ್ನಾಮವಾಗುತ್ತಿವೆ.



*ಜೇನ್‌ರ ಭೇಟಿಗೆ ಬಂದ ಯುವತಿಯರು*

**ಸಂ :** ಹಲವು ವರ್ಷಗಳಿಂದ ನೀವು ಟಾನ್ಜೇನಿಯಾದ 'ಗೊಂಬೆ ಸ್ಟ್ರೀಮ್ ರಿಸರ್ಚ್ ಸೆಂಟರ್'ನಲ್ಲಿ ಹೆಚ್ಚು ಕಾಲ ವಾಸಿಸದೆ, ವರ್ಷದಲ್ಲಿ ೩೦೦ ದಿನಗಳು ದೇಶ-ವಿದೇಶಗಳಿಗೆ ತೆರಳಿ, ವನ್ಯಜೀವನ ಸಂರಕ್ಷಣೆ, ಪರಿಸರ ಸಂರಕ್ಷಣೆ ಹಾಗೂ ಜನರಲ್ಲಿ ಶಾಂತಿ ಸೌಹಾರ್ದತೆಯ ಬಗ್ಗೆ ಪ್ರಚಾರದಲ್ಲಿ ತೊಡಗಿರುವಿರಿ. ಈ ಪ್ರಚಾರ ಆರಂಭವಾದ ಬಗೆ ಹೇಗೆ ?

**ಜೇನ್ :** ನಾನು ಟಾನ್ಜೇನಿಯಾದಲ್ಲಿದ್ದಾಗಲೇ ಆಫ್ರಿಕಾದಲ್ಲಿರುವ ಚಿಂಪಾಂಜಿಗಳ ಸಂಖ್ಯೆ ದಿನೇದಿನೇ ಕಡಿಮೆಯಾಗುತ್ತಾ ಬಂದಿತ್ತು. ಕಾರಣ, ಅಲ್ಲಿ ಹೆಚ್ಚಾಗುತ್ತಿರುವ ಜನಸಂಖ್ಯೆ, ಬಡತನ, ಅನಕ್ಷರತೆ ಮತ್ತು ಯುದ್ಧದ ಹಾವಳಿ. ಜನ ಕಾಡಿನ ಮರಗಳನ್ನು ಕಿಂಚಿತ್ತೂ ಯೋಚಿಸದೆ ಕಡಿದುಹಾಕಿ ಪ್ರಾಣಿಗಳ ಸಹಜ ವಾಸಸ್ಥಾನಗಳನ್ನು ನಿರ್ನಾಮ ಮಾಡುತ್ತಾ ಬಂದಿದ್ದಾರೆ. ಅಲ್ಲದೆ ಪ್ರಾಣಿಗಳನ್ನು ಅವುಗಳ ಮಾಂಸಕ್ಕಾಗಿ ಕೊಲ್ಲುತ್ತಿದ್ದಾರೆ. ಸುಮಾರು ೧೦ ಲಕ್ಷ ಮೆಟ್ರಿಕ್ ಟನ್‌ಗಳಷ್ಟು ಪ್ರಾಣಿ ಮಾಂಸ ಕಾಂಗೋ ಬೇಸಿನ್ ಕಾಡುಗಳಿಂದ ಪ್ರತಿವರ್ಷ ಮಾರಾಟಕ್ಕೆ ಹೋಗುತ್ತದೆ. ೧೯೦೦ರಲ್ಲಿ ಚಿಂಪಾಂಜಿಗಳು ೧೦-೨೦ ಲಕ್ಷ ಇದ್ದವು. ಇವತ್ತು ಬಹುಶಃ ೧೫,೦೦೦ ಇರಬಹುದು. ಪ್ರಪಂಚದ ಎಲ್ಲಾ ಹಸಿರುಕಾಡಿನ ೧/೪ ಭಾಗ ಕಾಂಗೋ ಬೇಸಿನ್‌ನಲ್ಲಿದೆ. ಜಗತ್ತಿನ ವನ್ಯಜೀವಿಗಳಲ್ಲಿ ೧/೨ ಭಾಗ ಸಹ ಇಲ್ಲಿದೆ. ಈ ಸ್ಥಳದ ಸಂರಕ್ಷಣೆ ಇಂದು ಅತ್ಯಗತ್ಯ. ಇದೂ ನಿರ್ನಾಮವಾದರೆ ಪ್ರಪಂಚದಲ್ಲಿರುವ ಎಲ್ಲಾ ಜನಾಂಗಕ್ಕೆ ಕೆಡುಕಾದೀತು.

ಈ ಎಲ್ಲಾ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು ನಾನು ೧೯೭೭ರಲ್ಲಿ ''ಜೇನ್ ಗೂಡಾಲ್ ಇನ್‌ಸ್ಟಿಟ್ಯೂಟ್'' ಸ್ಥಾಪಿಸಿದೆ. ಈ ಸಂಘದ ಮೂಲಕ ವನ್ಯ ಜೀವಿಗಳ ಬಗ್ಗೆ ತಿಳಿವಳಿಕೆ, ಸಂಶೋಧನೆ, ವನ್ಯ ಸಂರಕ್ಷಣೆ ಹಾಗೂ ಪಶು ಪ್ರಾಣಿಗಳ ಕಲ್ಯಾಣಕ್ಕಾಗಿ ಹಲವಾರು ಯೋಜನೆಗಳು ಜಗತ್ತಿನಾದ್ಯಂತ ಕಾರ್ಯನಿರತವಾಗಿವೆ. 'TACARE' ಜೇನ್ ಗೂಡಾಲ್ ಇನ್‌ಸ್ಟಿಟ್ಯೂಟ್‌ನ ಒಂದು ಶಾಖೆ. ಇದು ಟಾನ್ಜೇನಿಯಾದ ೩೦ ಹಳ್ಳಿಗಳಲ್ಲಿ ಕೆಲಸ ಮಾಡಿ, ಅಲ್ಲಿನ ಜನರ ಜೀವನದ ಗುಣಮಟ್ಟವನ್ನು ಸುಧಾರಿಸುವುದರಲ್ಲಿ ಸಫಲತೆಯನ್ನು ಪಡೆದಿದೆ. ಅಲ್ಲಿನ ಜನಾಂಗದ ಏಳಿಗೆಯಾದರೆ ಮಾತ್ರ ಅಲ್ಲಿನ ಅರಣ್ಯ ಸಂರಕ್ಷಣೆ ಸಾಧ್ಯ ಎಂದು ನನ್ನ ನಂಬಿಕೆ. ಈ ಶಾಖೆಯ ಶ್ಲಾಘನೀಯವಾದ ಹಲವು ಚಟುವಟಿಕೆಗಳು ಹೆಂಗಸರ ಆರೋಗ್ಯ ರಕ್ಷಣೆ, ಕುಟುಂಬ ನಿಯಂತ್ರಣ, HIV/AIDS ಬಗ್ಗೆ ತಿಳಿವಳಿಕೆ. TACARE ಯಿಂದ ಹುಡುಗಿಯರಿಗೆ ಓದಲು ಸಾಲದ ತೆರದಲ್ಲಿ ಹಣ ದೊರೆಯುತ್ತಿದೆ. ಈ ಕಾರ್ಯಕ್ರಮ ಜನಪ್ರಿಯವಾಗಿದೆ. ಈ ವಿಷಯದ ಬಗ್ಗೆ ಚರ್ಚಿಸಲು, ನಾನು ಬಾಂಗ್ಲಾದೇಶದ ಶ್ರೀ ಮೊಹಮದ್ ಯುನಸ್‌ರನ್ನು ಭೇಟಿಮಾಡಲು ಹೋಗುತ್ತಿದ್ದೇನೆ.

ಇನ್‌ಸ್ಟಿಟ್ಯೂಟ್‌ನ ಇನ್ನೂ ಹಲವು ಶಾಖೆಗಳು ಬಂಧನದಲ್ಲಿರುವ ಚಿಂಪಾಂಜಿಗಳ ಹಾಗೂ ಅನಾಥ ಚಿಂಪಾಂಜಿಗಳ ಏಳಿಗೆಗಾಗಿ ದುಡಿಯುತ್ತಿವೆ.

ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳು ಆಫ್ರಿಕಾದ ಕಾಡಿನ ಮರಗಳನ್ನು ಕಡಿದು ಪರದೇಶಗಳಿಗೆ ಸಾಗಿಸಲು ಹೇರಳವಾಗಿ ಹಣವನ್ನು ವೆಚ್ಚ ಮಾಡುತ್ತಿವೆ.

ಪ್ರಾಣಿ ಮಾಂಸದ ವ್ಯಾಪಾರದಿಂದ ಹಲವಾರು ಅಪರೂಪದ ಜಾತಿಯ ವನ್ಯಜೀವಿಗಳಲ್ಲದೆ, ಚಿಂಪಾಂಜಿ, ಗೋರಿಲ್ಲಾ ಮತ್ತು ಆನೆಗಳ ಹತ್ಯೆಯೂ ನಡೆದಿದೆ. ಇವನ್ನೆಲ್ಲಾ ತಡೆಯುವುದು ಒಂದು ಬೃಹತ್ ಕಾರ್ಯ. ಒಬ್ಬರಿಬ್ಬರಿಂದ ಸಾಧ್ಯವಿಲ್ಲ. ಆದ್ದರಿಂದ, ನಮ್ಮಂತೆ ಯೋಚಿಸುವ ಹಲವಾರು ಸಂಘಗಳೊಡನೆ ಬೆರೆತು ನಾವು ಜಗತ್ತಿನಾದ್ಯಂತ ಈ ಕೆಲಸದಲ್ಲಿ ನಿರತರಾಗಿದ್ದೇವೆ. ಜೇನ್ ಗೂಡಾಲ್ ಇನ್‌ಸ್ಟಿಟ್ಯೂಟ್‌ನ ಮತ್ತೊಂದು ಪ್ರಧಾನ ಅಂಗ ''ರೂಟ್ಸ್ ಅಂಡ್ ಶೂಟ್ಸ್.'' ಇದನ್ನು ಯುವ ಜನಾಂಗಕ್ಕೆಂದೇ ಮೀಸಲಾಗಿಟ್ಟಿದೆ. ೧೯೯೧ರಲ್ಲಿ ಪ್ರಾರಂಭವಾದ ಈ ಅಂಗ ಅಮೆರಿಕ ಅಲ್ಲದೆ ೫೦ಕ್ಕೂ ಹೆಚ್ಚಿನ ದೇಶಗಳಲ್ಲಿ ಇದ್ದು ಅಲ್ಲಿನ ಯುವ ಜನಾಂಗಕ್ಕೆ ಪರಿಸರ ಹಾಗೂ ವನ್ಯ ಸಂರಕ್ಷಣೆಯ ಬಗ್ಗೆ ತಿಳಿವಳಿಕೆ ನೀಡುವುದಲ್ಲದೆ ಎಲ್ಲ ಪ್ರಾಣಿ ಜೀವಿಗಳನ್ನು ಪ್ರೀತಿಯಿಂದ ಕಾಣಬೇಕೆಂದು ಕಳಕಳಿಯಿಂದ ಮನವಿ ಮಾಡಿಕೊಳ್ಳುತ್ತಿದೆ.

ಅವರ ಕತ್ತಿನಲ್ಲಿದ್ದ ಒಂದು ಚಿಕ್ಕ ಘಂಟೆಯನ್ನು ತೋರಿಸಿ ಹೀಗೆಂದರು. ''ಇದನ್ನು ಶಾಂತಿಯ ಸಂಕೇತವಾಗಿ ಎಲ್ಲ ಕಡೆ ಬಾರಿಸುತ್ತೇನೆ. ಏಕೆಂದರೆ ಇದನ್ನು ಪೋಲ್‌ಪಾಟ್ ನಂತರದ ಕ್ಯಾಂಬೋಡಿಯಾದಲ್ಲಿನ ನೆಲದ ಗಣಿಯ ಲೋಹದಿಂದ ತಯಾರಿಸಿದೆ.''

ಡಾ|| ಜೇನ್ ಗೂಡಾಲ್, ಭವಿಷ್ಯದಲ್ಲಿ ೩ನೇ ಮಹಾಯುದ್ಧವಾಗುವ ಹೆದರಿಕೆಯನ್ನು ವ್ಯಕ್ತಪಡಿಸಿದರು. ಜಾರ್ಜ್ ಬುಶ್ ಹಾಗೂ ಟೋನಿ ಬ್ಲೇರ್, ಇರಾಕ್‌ನಲ್ಲಿ ಏನು ಮಾಡಲು ಹೊರಟಿದ್ದಾರೆ ಎಂದು ಚಿಂತಾಕ್ರಾಂತರಾದರು. ಭಾರತ ಮತ್ತು ಪಾಕಿಸ್ತಾನ ಎರಡೂ ನ್ಯೂಕ್ಲಿಯರ್ ಶಕ್ತಿ ಇರುವ ದೇಶಗಳಾಗಿದ್ದು ಇವೆರಡರ ನಡುವೆ ದಿನೇ ದಿನೇ ಹದಗೆಡುತ್ತಿರುವ ಸಂಬಂಧದ ಬಗ್ಗೆ ವಿಷಾದ ವ್ಯಕ್ತಪಡಿಸಿದರು.

**ಸಂ :** ಪ್ರಪಂಚದಲ್ಲಿ ಎಲ್ಲೆಡೆ ಪ್ರತಿದಿವಸ ದೌರ್ಜನ್ಯ, ಹಿಂಸಾಚಾರ, ದುರಾಕ್ರಮಣ ಇವುಗಳೇ ಹೆಚ್ಚಾಗುತ್ತಿವೆ. ವಿಶ್ವಸಂಸ್ಥೆಯ ಮನ್ನಣೆ ಪಡೆದ ಶಾಂತಿದೂತರಾದ ನಿಮ್ಮ ಅನಿಸಿಕೆ ಏನು ?

**ಜೇನ್ :** ನಾನು ಆಶಾವಾದಿ. ಆಫ್ರಿಕಾದಲ್ಲಿ ಜನಾಂಗ ವೈಷಮ್ಯ ಒಂದು ದಿನ ಕೊನೆಗೊಳ್ಳುತ್ತೆ ಎಂದು ಯಾರೂ ಕನಸು ಕಂಡಿರಲಿಲ್ಲ. ಮನುಷ್ಯನ ಪ್ರಯತ್ನದ ಮುಂದೆ ಯಾವುದೂ ಅಸಾಧ್ಯವಲ್ಲ. ನೆಲ್ಸನ್ ಮಂಡೇಲಾ ಅವರು ರಾಬಿನ್ ಐಲೆಂಡ್ ಸೆರೆಮನೆಯಲ್ಲಿ ೧೭ ವರ್ಷ ತಾಳ್ಮೆಯಿಂದಿದ್ದು ತಮ್ಮ ಗುರಿಯನ್ನು ಕೊನೆಗೂ ಮುಟ್ಟಿದರು. ಈ ಸಫಲತೆಯ ಸ್ಮರಣಾರ್ಥ ಆ ಸೆರೆಮನೆಯಲ್ಲಿದ್ದ ಸುಣ್ಣದ ಕಲ್ಲೊಂದನ್ನು ಸದಾ ನನ್ನ ಜೊತೆ ಇಟ್ಟುಕೊಂಡಿರುತ್ತೇನೆ. ಅಂತೆಯೇ ಬರ್ಲಿನ್ ಗೋಡೆಯ ಒಂದು ಕಲ್ಲು ಸಹ ನನ್ನ ಬಳಿ ಇದೆ. ಇವು ನೆಮ್ಮದಿಯ ನಾಳೆಯ ಬಗ್ಗೆ ಭರವಸೆ ನೀಡುವ ಸಂಕೇತವಾಗಿವೆ.

ಡಾ|| ವೀಣಾ ರಾವ್
[illegible]
[illegible]

# ಮಂದ್ರಗತಿಯಲ್ಲಿ ಸಾಗುವ 'ಮಂದ್ರ' ಕಾದಂಬರಿ

ಜನಪ್ರಿಯ ಕಾದಂಬರಿಕಾರರಾದ ಡಾ|| ಎಸ್.ಎಲ್. ಭೈರಪ್ಪ ಅವರ ಇತ್ತೀಚಿನ ಕಾದಂಬರಿ 'ಮಂದ್ರ' ಅತ್ಯಂತ ಕುತೂಹಲವನ್ನು ಹುಟ್ಟಿಸಿರುವ ಕಾದಂಬರಿ. ಭೈರಪ್ಪನವರ ಜನಪ್ರಿಯತೆಯ ಬಗ್ಗೆ ಸೂಕ್ಷ್ಮವಾಗಿ ಅವಲೋಕಿಸುವ ಕೆಲಸವನ್ನು ಈ ಸಂದರ್ಭದಲ್ಲಿ ಅಗತ್ಯವಾಗಿ ಮಾಡಬೇಕಾಗಿದೆ. ಅವರು ಕಾದಂಬರಿಯ ಮೂಲಕ ಪ್ರತಿಪಾದಿಸುತ್ತಿರುವ ಮೌಲ್ಯಗಳಾವುವು, ಅವು ಇಂದು ಎಷ್ಟು ಪ್ರಸ್ತುತ ಎಂಬುದನ್ನು ವಿಮರ್ಶಿಸಬೇಕಾಗಿದೆ. ಅವರ ಕಾದಂಬರಿಗಳೆಲ್ಲ ಬಹುಮಟ್ಟಿಗೆ ಸಾಮಾಜಿಕ ಸಮಸ್ಯೆಗಳನ್ನು ಕುರಿತದ್ದಾದರೂ ಆ ಕಾದಂಬರಿಗಳಲ್ಲಿ ಸಾಮಾಜಿಕ ಬದ್ಧತೆ ಇದೆಯೇ? ಇವೇ ಮುಂತಾದ ಪ್ರಶ್ನೆಗಳಿಗೆ ಉತ್ತರಗಳನ್ನು ಓದುಗರು ಹುಡುಕಬೇಕಾಗುತ್ತದೆ.

ಡಾ|| ಎಸ್. ಎಲ್. ಭೈರಪ್ಪ ಅವರು ಕನ್ನಡದ ಜನಪ್ರಿಯ ಲೇಖಕರು ಎಂಬುವುದರಲ್ಲಿ ಎರಡು ಮಾತಿಲ್ಲ. ಆದರೆ ಅವರು ಕಾದಂಬರಿಗಳ ಮೂಲಕ ಪ್ರತಿಪಾದಿಸುತ್ತಿರುವ ಪ್ರಗತಿ ವಿರೋಧಿ ಮೌಲ್ಯಗಳು ಓದುಗರ ಮೇಲೆ ಎಂತಹ ದುಷ್ಪರಿಣಾಮ ಬೀರುತ್ತಿದೆ ಎಂಬುವುದನ್ನು ಅಗತ್ಯವಾಗಿ ವಿಚಾರ ಮಾಡಬೇಕಾಗಿದೆ. ಉದಾಹರಣೆಗೆ, 'ವಂಶವೃಕ್ಷ'ದಲ್ಲಿ ವಿಧವಾ ವಿವಾಹದ ವಿರೋಧೀ ಮೌಲ್ಯಗಳು, 'ತಬ್ಬಲಿಯು ನೀನಾದೆ ಮಗನೆ' ಕಾದಂಬರಿಯಲ್ಲಿ ಮಾಂಸ ಭಕ್ಷಣೆಯ ವಿರೋಧ ಮೌಲ್ಯಗಳು, 'ಜಲಪಾತ' ಕಾದಂಬರಿಯಲ್ಲಿ ಜನಸಂಖ್ಯೆ ನಿಯಂತ್ರಣಕ್ಕೆ ವಿರೋಧ, 'ಧರ್ಮಶ್ರೀ'ಯಲ್ಲಿನ ಧಾರ್ಮಿಕ ಅಂಧತೆ.... ಹೀಗೆ ಪಟ್ಟಿ ಮಾಡುತ್ತಾ ಹೋಗಬಹುದು. ಕಾದಂಬರಿಯ ಮಾಧ್ಯಮವನ್ನು ತಮ್ಮ ಪ್ರತಿಗಾಮಿ ವಿಚಾರಗಳ ಅಭಿವ್ಯಕ್ತಿಗೆ ಕಾದಂಬರಿಕಾರರು ಪರಿಣಾಮಕಾರಿಯಾಗಿ ಬಳಸಿಕೊಂಡಿದ್ದಾರೆ ಎಂದು ಧಾರಾಳವಾಗಿ ಹೇಳಬಹುದು.




ಅವರ ಯಾವುದೇ ಕಾದಂಬರಿಯನ್ನು ತೆಗೆದುಕೊಂಡರೂ ಕಾದಂಬರಿಯ ಕಥೆ-ಪಾತ್ರಗಳಲ್ಲಿ ಕಾದಂಬರಿಕಾರರ ವಿಚಾರಗಳು ಮೈಗೂಡಿಸಿಕೊಂಡು ಭೈರಪ್ಪನವರ ವಿಚಾರಗಳಾಗಿ ಬೆಳೆಯುತ್ತ ವೆಯೇ ಹೊರತು ಅದರಲ್ಲಿನ ಪಾತ್ರಗಳಿಗೂ-ವಿಚಾರಗಳಿಗೂ ಸಾವಯುವ ಸಂಬಂಧವೇ ಬರದೆ ವಿಚಾರಗಳು ಪ್ರತ್ಯೇಕವಾಗಿಯೇ ನಿಂತು, ಓದುಗರನ್ನು ವಿಚಿತ್ರ ರೀತಿಯ ಗೊಂದಲದಲ್ಲಿ ಸಿಲುಕಿಸುತ್ತವೆ. ಇದರಿಂದಾಗಿ ಅವರ ಕಾದಂಬರಿಗಳು ಸೃಜನಶೀಲ ಕೃತಿಗಳಾಗಿ ಬೆಳೆಯದೆ ಜನಪ್ರಿಯತೆಯ ಗುಂಗಿನಲ್ಲಿ ಕೇವಲ ಅವರ ಸ್ವಂತ ವಿಚಾರಗಳ ಅಭಿವ್ಯಕ್ತಿಯಾಗಿ ಉಳಿದುಬಿಡುತ್ತವೆ. ಹೀಗೆಂದ ಮಾತ್ರಕ್ಕೆ ಕಾದಂಬರಿಕಾರರ ವಿಚಾರಗಳು ಕಾದಂಬರಿಯಲ್ಲಿ ಬರಬಾರದೆಂಬುದೇನೂ ಅಲ್ಲ. ನಿರಂಜನರ ಧೋರಣೆಗಳು ಅವರ 'ಚಿರಸ್ಮರಣೆ', 'ಮೃತ್ಯುಂಜಯ' ಮುಂತಾದ ಕಾದಂಬರಿಗಳಲ್ಲಿ ಬಂದಿರುವುದಷ್ಟೇ ಅಲ್ಲದೆ ಕಾದಂಬರಿಯ ಪಾತ್ರಗಳೂ ಕೂಡ ಅಷ್ಟೇ ಸೂಕ್ಷ್ಮವಾಗಿ, ಪರಿಣಾಮಕಾರಿಯಾಗಿ ವಿಚಾರಗಳ ಭದ್ರ ಬುನಾದಿಯಿಂದಲೇ ಪ್ರಾರಂಭವಾಗುತ್ತವೆ ಎನ್ನಲಡ್ಡಿಯಿಲ್ಲ. ಹಾಗೆಯೇ ಬೆಳೆಯುತ್ತವೆ ಕೂಡ. ಇಂತಹ ಆಂತರಿಕ ಬೆಳವಣಿಗೆ ಭೈರಪ್ಪನವರ ಬಹುಪಾಲು ಕಾದಂಬರಿಗಳ ಪಾತ್ರಗಳಲ್ಲಿ ಕಂಡುಬರುವುದಿಲ್ಲ.

ಈ ವಿಚಾರಗಳ ಹಿನ್ನೆಲೆಯಲ್ಲೇ ಭೈರಪ್ಪನವರ 'ಮಂದ್ರ' ಕಾದಂಬರಿಯನ್ನು ವಿಶ್ಲೇಷಿಸಬಹುದು.

ಕಾದಂಬರಿಯ ನಾಯಕ ಮೋಹನಲಾಲ ಪ್ರಖ್ಯಾತ ಕಲಾವಿದ, ಸಂಗೀತಗಾರ. ಈತನ ರಾಸಕ್ರೀಡೆಗಳ ನೀರಸ ನಿರೂಪಣೆಯು ಕಾದಂಬರಿಯ ಉದ್ದಕ್ಕೂ ಪುನರಾವೃತ್ತಿಗೊಂಡು ತಾರಕಕ್ಕೇರದೆ ಮಂದ್ರಗತಿಯಲ್ಲಿ ಸಾಗುತ್ತದೆ. ಅಥವಾ ಒಂದು ರೀತಿಯಲ್ಲಿ ಭೈರಪ್ಪನವರ ಮಾನಸಿಕ ವಿಕೃತಿಯ ಸ್ವರೂಪವೋ ಎಂಬ ಗುಮಾನಿ ಬರುತ್ತದೆ. ಇವರ 'ಸಾಕ್ಷಿ' ಕಾದಂಬರಿಯಲ್ಲಿ ನಾಯಕ (ಮಂಜಪ್ಪ)ನೂ ಕೂಡ ಭೋಗಿಸದೆ ಬಿಟ್ಟ ಹೆಣ್ಣುಗಳೇ ಇಲ್ಲ. ಕೊನೆಗೆ ನಾಯಕ ತಾಯಿ - ಮಗಳು ಇಬ್ಬರನ್ನೂ ಭೋಗಿಸುವ ವಿಪರ್ಯಾಸಕ್ಕೆ ಹೋಗಿ ಓದುಗರಲ್ಲಿ ಜಿಗುಪ್ಸೆ ಮೂಡಿಸುತ್ತದೆ. ಅಲ್ಲಿನ ನಾಯಕ ಹೆಣ್ಣನ್ನು ಭೋಗಿಸಬೇಕಾದಾಗಲೆಲ್ಲ ಹೆಣ್ಣುಗಳು ಗಂಧದ ಸಾಬೂನಿನಿಂದ ತಿಕ್ಕಿತಿಕ್ಕಿ ಸ್ನಾನ ಮಾಡಿ ಪರಸ್ಪರ ಕಾಮನೆಯನ್ನು ಉದ್ದೀಪಿಸುವರು. ಇದು ಉದ್ದಕ್ಕೂ ಪುನರಾವೃತ್ತಿಗೊಂಡು ಓದುಗರಿಗೆ ಬೇಸರ ಹುಟ್ಟಿಸುತ್ತದೆ. ಹಾಗೆಯೇ 'ಮಂದ್ರ' ಕಾದಂಬರಿಯಲ್ಲೂ ಮೋಹನಲಾಲನ ಭೋಗಜೀವನದ ಘಟನೆಗಳ ಪುನರಾವೃತ್ತಿ ಎಷ್ಟೆಂದರೆ ಸಂಭಾಷಣೆ, ವಿವರಣೆ – ಗಂಡಾಗಲೀ, ಹೆಣ್ಣಾಗಲೀ – ಅವರ ವಿಚಾರಗಳು – ಯಾವುದರಲ್ಲೂ ವಿಶೇಷತೆ ಇರದೆ ಏಕತಾನತೆಯಿಂದ ಓದುಗನ ಸಹನೆಯನ್ನು ಪರೀಕ್ಷಿಸುತ್ತದೆ. ಅದೇ ಹತ್ತು ಘಟನೆಗಳಿಗೆ ಬದಲಾಗಿ ಇಂತಹ ಒಂದೇ ಘಟನೆ – ವಿವರಣೆ ಇದ್ದರೆ ಸಾಕು ಎಂಬ ತೀರ್ಮಾನಕ್ಕೆ ಬರುವಂತಾಗುತ್ತದೆ. ಮೋಹನ ಲಾಲನ ಕಾಮ ಕ್ರೀಡೆಗಳಾಗಲೀ, ಅವನ ಸಂಗೀತ ಪ್ರತಿಭೆಯಾಗಲೀ, ಕಾದಂಬರಿಯ ಕಥೆಯೊಂದಿಗೆ, ಪಾತ್ರದ ಬೆಳವಣಿಗೆಯೊಂದಿಗೆ ತಾದಾತ್ಮ್ಯತೆಯನ್ನು ಪಡೆದು ಕೊಳ್ಳುವುದೇ ಇಲ್ಲ. ಕಂಡ ಕಂಡ ಹೆಣ್ಣುಗಳನ್ನೆಲ್ಲಾ ಭೋಗಿಸುವ ಮೋಹನಲಾಲ ವ್ಯಕ್ತಿ ಸಂಬಂಧವನ್ನು ಪಡೆಯುವಾಗ ಸಾಮಾಜಿಕ ಕಟ್ಟುಪಾಡುಗಳ ಗೊಡವೆಗೇ ಹೋಗುವುದಿಲ್ಲ. ಮೋಹನಲಾಲನಂತಹ ಕಲಾವಿದನ ಪಾತ್ರ ನಿರೂಪಿಸುವಾಗ (ಕಾದಂಬರಿಕಾರರಿಗೆ) ಪುರಾಣದ ಕೃಷ್ಣನ ಪಾತ್ರ ಗಮನದಲ್ಲಿದೆ ಎಂಬುವುದು ಓದುಗರಿಗೆ ಮನದಟ್ಟಾಗುತ್ತದೆ. ಆದರೆ ಪುರಾಣದ ಕೃಷ್ಣನ ಪಾತ್ರಕ್ಕೆ ಇರುವ ಗಟ್ಟಿತನ ಈ ಪಾತ್ರದ ಹತ್ತಿರಕ್ಕೂ ಸುಳಿಯಲಾರದು! ಮೋಹನಲಾಲ ಕಲಾವಿದನಾಗಿದ್ದರೂ ಯಾವ ಸೂಕ್ಷ್ಮತೆಯೂ ಇಲ್ಲದ ಅತ್ಯಂತ ದುರ್ಬಲ ವ್ಯಕ್ತಿ . ಇಂತಹ ದುರ್ಬಲ ವ್ಯಕ್ತಿಗೆ ಕೂಡ ತನ್ನ ಕಾಮತೃಷೆ ಅಡಗಿದ ಮೇಲೆ ಪಾಪಪ್ರಜ್ಞೆ ಕಾಡಲು ಪ್ರಾರಂಭವಾಗುತ್ತದೆ. ಆತ ಮಾಡುವ ಯಾವ ಪಾಪ ಕಾರ್ಯಕ್ಕೂ ಕಾದಂಬರಿಕಾರರು ತಮ್ಮದೇ ಆದ ರೀತಿಯಲ್ಲಿ (ಉಳಿದ ಕಾದಂಬರಿಗಳಲ್ಲಿದ್ದಂತೆ) ಸಮರ್ಥಿಸುತ್ತಾ ಹೋಗುವುದು ಕಾದಂಬರಿಕಾರರ ಉದ್ದೇಶ ವನ್ನು ಸ್ಪಷ್ಟಪಡಿಸುತ್ತದೆ. ಈ ಉದ್ದೇಶವೂ ಕಾದಂಬರಿಕಾರರ ಉದ್ದೇಶವಾಗಿ ನಿಲ್ಲುತ್ತದೆಯೇ ಹೊರತು ಕಾದಂಬರಿಯ ಪಾತ್ರದ ಚಿಂತನೆಯಲ್ಲಿಲ್ಲ!

ಈ ಕಾದಂಬರಿಯ ವಿಶೇಷತೆಯೆಂದರೆ ನಾಯಕನ ಕಾಮಕ್ರೀಡೆಯ ವಿವರಗಳನ್ನು ಸಂಗೀತದ ಸ್ವರ ಸ್ಥಾಯಿಗಳೊಂದಿಗೆ ಸಮೀಕರಿಸಿರುವುದು. ಸಂಗೀತದ ವಿವರಗಳು ಕೂಡ ಕಾದಂಬರಿಕಾರರ ಸಂಗೀತದ ಪಾಂಡಿತ್ಯದ ಪ್ರದರ್ಶನವಾಗಿ ನಿಲ್ಲುತ್ತದೆಯೇ ಹೊರತು ವಸ್ತುವಿನ ಅಂತರಂಗದ ದನಿಯಾಗಿ ಮಿಡಿದಿಲ್ಲ.

ಮೋಹನಲಾಲ ಪ್ರಖ್ಯಾತ, ಜನಪ್ರಿಯ, ಅದ್ಭುತ ಸಂಗೀತಕಾರ. ದಿನ ಕಳೆದಂತೆ ಆತ ಸಂಗೀತದಿಂದ ಹೆಚ್ಚು ಹೆಚ್ಚು ಹಣ ಸಂಪಾದಿಸತೊಡಗುತ್ತಾನೆ. ಅದರ ಜೊತೆಯಲ್ಲಿಯೇ ಹಿಂದೂಸ್ತಾನೀ ರಾಗಗಳನ್ನು ವಶಪಡಿಸಿಕೊಳ್ಳುತ್ತಾನೆ. ಅನೇಕ ಹೆಂಗಳೆಯರ ಸ್ನೇಹ ಸಂಪಾದಿಸುತ್ತಾನೆ. ಇಂತಹ ಸಂದರ್ಭದಲ್ಲಿ ತ.ರಾ.ಸು. ಅವರ 'ಹಂಸಗೀತೆ', ಅ.ನ.ಕೃ. ಅವರ 'ನಟಸಾರ್ವಭೌಮ' ಕಾದಂಬರಿಗಳೂ ನೆನಪಿಗೆ ಬರುತ್ತವೆ. ಈ ಕಾದಂಬರಿ ಯಲ್ಲಿ ಬರುವ ನಾಯಕನೂ ಸಂಗೀತಗಾರನೇ. ವೇಶ್ಯೆಯ ಸಂಪರ್ಕವನ್ನು ಹೊಂದಿರುವ ವನು. ಆದರೆ ತ.ರಾ.ಸು., ಅ.ನ.ಕೃ., ಅವರ ನೇರ ನಿರೂಪಣೆಯಲ್ಲಿಯೂ ಪಾತ್ರಗಳ ಸೂಕ್ಷ್ಮತೆ-ಬೆಳವಣಿಗೆಯನ್ನು ಓದುಗರು ಗುರುತಿಸಲು ಸಾಧ್ಯವಿದೆ. ಆದರೆ ಭೈರಪ್ಪನವರ ಕಾದಂಬರಿಯಲ್ಲಿ ಮೋಹನಲಾಲನ ಸಂಗೀತ ಮತ್ತು ಕಾಮಕ್ರೀಡೆಗಳು ಹಲವು ಪುಟಗಳಲ್ಲಿ ಬಂದಿದ್ದರೂ ಓದುಗ-ಕಲಾವಿದನ ಸೂಕ್ಷ್ಮ ಮಾನಸಿಕ ಬೆಳವಣಿಗೆಯನ್ನು ಕಾಣಲು ಸಾಧ್ಯವೇ ಇಲ್ಲ. ಪಾತ್ರಗಳ ನಡುವೆ ಭಾವನಾತ್ಮಕ ಸಂಬಂಧವೇ ಇಲ್ಲದ ಪಾತ್ರಗಳು ಸೊರಗುತ್ತವೆ. ಓದುಗನ ಮನಸ್ಸನ್ನು ತಟ್ಟುವುದೇ ಇಲ್ಲ. ಓದುಗನಲ್ಲಿ ಒಂದು ಬಗೆಯ ಹತಾಶಾಭಾವನೆ ಮೂಡಿಬರುತ್ತದೆ. ಕಾದಂಬರಿಯ ನಾಯಕ ತಾನು ಸೂಕ್ಷ್ಮ ಸಂವೇದನೆಯ ಕಲಾವಿದ ಎಂದು ಹೇಳಿಕೊಂಡರೂ [illegible] [illegible] ಕೆಳದರ್ಜೆಯ - ಕೀಳು ಅಭಿರುಚಿಯ ದುರ್ಬಲ ವ್ಯಕ್ತಿಯಾಗಿ ಉಳಿಯುತ್ತಾನೆ. ತನ್ನ ಸಂಪರ್ಕಕ್ಕೆ ಬರುವ ಹೆಂಗಳೆಯರೊಬ್ಬಗೆ

ಡಾ|| ಸಿ. ವಿ. ವತ್ಸಲಾ

ಮೋಹನಲಾಲ ಸೂಕ್ಷ್ಮವಾಗಿ ನಡೆದುಕೊಳ್ಳುವ ಪ್ರಯತ್ನ ಮಾಡಿದರೂ ಆ ಎಲ್ಲ ಹೆಂಗಸರೂ ಆತನನ್ನ ತಿರಸ್ಕರಿಸುತ್ತಾರೆ. ಮೋಹನಲಾಲನ ನಿಜವಾದ ವ್ಯಕ್ತಿತ್ವ ಜಿಗುಪ್ಸೆ ಮೂಡಿಸುತ್ತದೆ. 'ಮೋಹನ ಲಾಲ' ಒಬ್ಬ ವಿಟನಂತೆ ಚಿತ್ರಿತವಾಗಿರುವ ವ್ಯಕ್ತಿತ್ವ. ಇದು ಒಬ್ಬ ಕಲಾವಿದನ ಕಥೆ. ಕಲಾವಿದರ ಬದುಕು ಹೀಗೂ ಇರಬಹುದೇನೋ. ಆದರೆ ಅದು ಈ ಕಾದಂಬರಿಯಲ್ಲಿ ಸಹಜವಾಗಿ ಮೂಡಿ ಬಂದಿಲ್ಲ ಎಂಬುವುದೇ ನನ್ನ ಅಭಿಪ್ರಾಯ. ಹೆಂಗಳೆಯರೊಂದಿಗಿನ ಆತನ ಸಂಪರ್ಕ ಆತನ ಸಂಗೀತದೊಂದಿಗೆ ಥಳುಕು ಹಾಕಿಕೊಂಡಿಲ್ಲ. ಮೋಹನಲಾಲ ಜೀವನದುದ್ದಕ್ಕೂ ತಪ್ಪುಗಳನ್ನು ರಾಜಾರೋಷವಾಗಿ ಮಾಡುವ ವ್ಯಕ್ತಿ. ಆತನ ಎಲ್ಲ ತಪ್ಪುಗಳಿಗೂ 'ಸಮಜಾಯಿಷಿ' ಕೊಡುವುದು ಬಹುಶಃ ಭೈರಪ್ಪನವರ ಚಿಂತನಾಕ್ರಮ !

ಮೋಹನಲಾಲ ಕಾನೂನಿಗೆ ವಿರುದ್ಧವಾಗಿ ಎರಡು ಮದುವೆ ಮಾಡಿಕೊಳ್ಳುತ್ತಾನೆ. ಇಬ್ಬರನ್ನೂ ಯಾವುದೇ ಮುಲಾಜಿಲ್ಲದೆ ದೂರ ಮಾಡುತ್ತಾನೆ. ತನ್ನ ಶಕ್ತ್ಯಾನುಸಾರ ಮಕ್ಕಳನ್ನು ಹುಟ್ಟಿಸುತ್ತಾನೆ. ಆದರೆ ಕೌಟುಂಬಿಕ ಜವಾಬ್ದಾರಿಯನ್ನು ಮರೆಯುತ್ತಾನೆ.

ಜನಪ್ರಿಯ ನರ್ತಕಿ ಮನೋಹರಿ ದಾಸ್‌ಳ ಜೊತೆ ದೈಹಿಕ ಸಂಪರ್ಕವಿಟ್ಟುಕೊಂಡು ಕೆಲವು ವರ್ಷಗಳು ಆಕೆಯೊಂದಿಗೆ ಇದ್ದು ಒಂದು ಘಟ್ಟದಲ್ಲಿ ಆಕೆಯನ್ನು ನಿರ್ದಾಕ್ಷಿಣ್ಯವಾಗಿ ದೂರ ಮಾಡುತ್ತಾನೆ. ಮದುವೆಗೆ ಮೊದಲೇ ಚೆನ್ನು ಎಂಬ ಹಿಂದುಳಿದ ವರ್ಗದ ಸಾಧಾರಣ ಹೆಣ್ಣಿನ ಸಂಪರ್ಕವಿಟ್ಟುಕೊಂಡು ಆಕೆಗೆ ಮಕ್ಕಳನ್ನು ''ದಯಪಾಲಿಸುತ್ತಾನೆ''. ಸೂಳೆಯರ ಮನೆಗೂ ಹೋಗಿ ಅಲ್ಲಿ ಒಬ್ಬ ವೇಶ್ಯೆಯಿಂದ ''ನಿಮ್ಮಂತಹವರು ಇಲ್ಲಿಗೆ ಬರಬಾರದು'', ಎಂದು ಹೇಳಿಸಿಕೊಂಡು ಹಿಂದಿರುಗುತ್ತಾನೆ. ಆತನ ಕಾಮ ತೃಷೆಗೆ ಕೊನೆ ಮೊದಲೇ ಇರುವುದಿಲ್ಲ. ಅವನು ಭೋಗಿಸಬೇಕೆಂದರೆ ಯುವತಿಯರಾಗಲೀ, ಗೃಹಿಣಿಯರಾಗಲೀ, ವಿದೇಶದಲ್ಲಿರಲೀ, ಸ್ವದೇಶದಲ್ಲಿರಲೀ, ಏಕಪ್ರಕಾರವಾಗಿ ಅಖಂಡವಾಗಿ ಅನುಭವಿಸುತ್ತಾನೆ. ವಿದೇಶಿಯಳಾದ ಲಾರೆನ್ ಸ್ಮಿತಾಳನ್ನೂ ಬಿಡುವುದಿಲ್ಲ.

ಮಧುಮಿತ ಈತನ ಸಂಪರ್ಕಕ್ಕೆ ಬರುವ ಒಬ್ಬ ನಿಷ್ಠಾವಂತ ಗೃಹಿಣಿ. ಈಕೆ ಈತನನ್ನು ಗೌರವಿಸುವಂತೆಯೇ ಗಂಡನನ್ನು ಅದಮ್ಯವಾಗಿ ಪ್ರೀತಿಸುವವಳು. ಈಕೆ ಮೋಹನಲಾಲನನ್ನು ಕೂಡಲು ತಿರಸ್ಕರಿಸಿದಾಗ – ''ಮಹಾ ಗರತಿಯ ಹಾಗೆ ಹಠ ಮಾಡ್ತಾಳೆ, ಲೌಡಿ!'' ಎಂದು ಉದ್ಗರಿಸುತ್ತಾನೆ. ಕೊನೆಗೆ ಈಕೆಗೆ ಸಂಗೀತದಿಂದ ತೃಪ್ತಿ ಸಿಕ್ಕಾಗ, (ಮೋಹನಲಾಲನ ಸಾಥಿಯನ್ನೇ ಗುರುವಾಗಿ ಸ್ವೀಕರಿಸಿ) ''ಕಾಕಿ, ಈಗ ನಾನು ಚೆನ್ನಾಗಿ ಹಾಡಿದೆ ಅಂತ ಅನ್ನಿಸುತ್ತೆ. ಆದರೆ ವಿಕ್ರಂ ಇದನ್ನು ಕೇಳಬೇಕಾಗಿತ್ತು'' ಎಂದು ಹೇಳುವ ತನ್ನ ಗಂಡನೇ (ವಿಕ್ರಂ) ತನ್ನ ಸಂಗೀತದಿಂದ ವಂಚಿತನಾಗಿದ್ದಾನೆ ಎಂಬ ತೀರ್ಮಾನಕ್ಕೆ ಬರುವುದು ತುಂಬಾ ತಮಾಷೆಯಾಗಿ ಕಾಣುತ್ತದೆ.

ಕಾದಂಬರಿಯಲ್ಲಿ ಮೋಹನಲಾಲನು ಎಷ್ಟೋ ಹೆಣ್ಣುಗಳನ್ನು ಭೋಗಿಸಿ ಕೊನೆಯಲ್ಲಿ ಎಲ್ಲರನ್ನೂ ಭೇಟಿಯಾಗುವ ಪ್ರಸಂಗ – ಎಲ್ಲರೂ ಆತನನ್ನು ತಿರಸ್ಕರಿಸುವ ಪ್ರಸಂಗ, ಇವೆಲ್ಲಾ ಮೋಹನಲಾಲನ ಪಾಪಪ್ರಜ್ಞೆಯ ಸಂಕೇತವೋ, ಆತನ ದೌರ್ಬಲ್ಯದ ಸಂಕೇತವೋ ಓದುಗನಿಗೆ ಅರ್ಥವಾಗುವುದಿಲ್ಲ. ಸಮಸ್ಯೆಗಳಿಗೆ ಕಾದಂಬರಿಕಾರರಿಗೆ ಸಿಕ್ಕ ಉತ್ತರ – ಪಾಪಪ್ರಜ್ಞೆ ಕಾಡುವುದು ಎಂಬ ಗುಮಾನಿ ಓದುಗನಿಗೆ ಬರದೇ ಇರುವುದಿಲ್ಲ. ಮದುವೆಯಾದ ಹೆಂಗಳೆಯ ಮಕ್ಕಳಿಗೆ, ಕದ್ದು ಬಸುರಾದ ಹೆಂಗಳೆಯ ಮಕ್ಕಳಿಗೆ ಈತ ಹಣ ಬಿಸಾಕುವುದು, ಅವರು 'ಅಪ್ಪ'ನಿಗೆ ಹಪಹಪಿಸುವುದು ತೀರ ಅಸಹಜವೆಂದೆನಿಸುತ್ತದೆ. ಹೀಗೆ ಹಿಂದಿನ ಸಂಬಂಧಗಳನ್ನೆಲ್ಲ ಹುಡುಕುತ್ತ ಹೋಗುವ ನಾಯಕನ ಕಥೆ, ಅದರೊಳಗೊಂದು ಕಥೆ, – ಹೀಗೆ ನೀರಸವಾಗಿ ಸಾಗುತ್ತದೆ ಕಾದಂಬರಿ. ಯಾವ ಪಾತ್ರಗಳಿಗೂ ಜೀವ ಇಲ್ಲದೆ ಕಾದಂಬರಿ ತೀರ ಜಾಳಾಗಿ, ಓದಿಸಿಕೊಂಡು ಹೋಗುವ ಶಕ್ತಿಯನ್ನೂ ಕಳೆದುಕೊಳ್ಳುತ್ತದೆ.

ಭೈರಪ್ಪನವರು ಪತ್ರಿಕೆಗಳ ಮೂಲಕ, ದೃಶ್ಯ ಮಾಧ್ಯಮಗಳ ಮೂಲಕ ಸಾಕಷ್ಟು ಪ್ರಚಾರ ಪಡೆದುಕೊಂಡಿದ್ದಾರೆ. ಅವರಿಗೆ ಸಿಕ್ಕಿರುವ ಜನಪ್ರಿಯತೆಯಿಂದಾಗಿ ಸಾಮಾನ್ಯ ವರ್ಗದ ಜನರ ಆಶೋತ್ತರಗಳನ್ನು ತಮ್ಮ ಕಾದಂಬರಿಗಳ ಆಶಯವನ್ನಾಗಿಸುವ ಕಾದಂಬರಿಕಾರರು ಅದಕ್ಕೆ ಪೂರಕ ಸಾಮಗ್ರಿಗಳನ್ನು, ಅಂದರೆ ಭಾಷೆ, ತಂತ್ರ, ವಸ್ತು ಇವನ್ನು ಅತ್ಯಂತ ಚಾಣಾಕ್ಷತನದಿಂದ ಬಳಸಿಕೊಂಡು ಜನರ ನಾಡಿ ಹಿಡಿಯುವ ಪ್ರಯತ್ನ ಮಾಡುತ್ತಾರೆ. 'ಮಂದ್ರ' ಕಾದಂಬರಿಯಲ್ಲಿಯೂ ಈ ಪ್ರಯತ್ನ ಜರುಗಿ ಮುಗ್ಗರಿಸಿದೆ. ಅವರ ಸಂಗೀತದ ಭಾಷೆಯಲ್ಲಿಯೇ ಹೇಳುವುದಾದರೆ ಕಾದಂಬರಿಯ ನಾಯಕ ಮಂದ್ರ ಸ್ಥಾಯಿಯಿಂದ ಪಂಚಮವನ್ನು ತಲುಪುವುದಿಲ್ಲ. ಹೀಗಾಗಿ ಕಾದಂಬರಿ, ಮಂದ್ರವಾಗಿಯೇ ಹರಿಯುವ ಸಾಧಾರಣ ಕಾದಂಬರಿಯಾಗಿಯೇ ಉಳಿದಿದೆಯೇ ಹೊರತು ಕಲಾತ್ಮಕ ಕೃತಿಯಾಗದೆ ಭೈರಪ್ಪನವರ ವಿಚಾರಗಳ ಅಭಿವ್ಯಕ್ತಿ ಮಾಧ್ಯಮವಾಗಿ ಮಾತ್ರ ನಿಲ್ಲುತ್ತದೆ.

ಡಾ॥ ಸಿ.ವಿ. ವತ್ಸಲಾ
೯೫೮, ೩ನೇ ಮುಖ್ಯರಸ್ತೆ, ವಿಜಯನಗರ
ಬೆಂಗಳೂರು-೫೬೦ ೦೪೦

## ಒಳ್ಳೆಯ ಓದು

### ವಿಭೂತಿ ವಿಭಾವನೆ (ಲೇಖನಗಳು)

ಡಾ|| ಸಿ. ಪಿ. ಕೃಷ್ಣಕುಮಾರ್

ಪುಟ : ೧೨೮ ಬೆಲೆ : ರೂ. ೮೦

**ಚಿತ್ರಭಾನು ಪ್ರಕಾಶನ,** ೨೨೬೫/೧೯, ಭಾರತಿ, ೬ನೇ ಅಡ್ಡರಸ್ತೆ, ೪ನೇ ಮುಖ್ಯರಸ್ತೆ, ವಿ.ನಗರ, ಮೈಸೂರು -೧೨

ಸಾಮಾನ್ಯವಾಗಿ ಒಳ್ಳೆಯ ಆಲೋಚನೆ-ಒಳ್ಳೆಯ ಮಾತುಗಳು-ಒಳ್ಳೆಯ ಕೆಲಸಗಳು ಈ ಮೂರನ್ನೂ ಕೈಗೊಂಡಿರುವ ಹಾಗೂ ಇವೆಲ್ಲವನ್ನೂ ಮನುಕುಲದ ಏಳ್ಗೆಗಾಗಿ ವ್ಯಯಿಸುತ್ತಿರುವವರು ವಿಭೂತಿ ಪುರುಷರೆಂದು ಖ್ಯಾತನಾಮರಾಗುತ್ತಾರೆ. ಅಂಥ ಧಾರ್ಮಿಕ -ಆಧ್ಯಾತ್ಮಿಕ ಚಿಂತನೆ ಅಪರೂಪವಾದುದು. ಇಲ್ಲಿ ಅಂತಹ ಕೆಲವು ವ್ಯಕ್ತಿ ಚಿತ್ರಗಳನ್ನೂ ಸಾಧನೆಗಳನ್ನೂ ಕಾಣಬಹುದು. ಇನ್ನುಳಿದ ಕೆಲವು ವಿಚಾರಪರ ಲೇಖನಗಳೂ ನಮ್ಮ ಚಿಂತನೆಯನ್ನು ಹಲವು ಪಟ್ಟು ಹೆಚ್ಚಿಸುವಲ್ಲಿ ಯಶಸ್ವಿಯಾಗಿವೆ. ಒಟ್ಟು ೨೧ ಲೇಖನಗಳಿವೆ.

### ತಪ್ಪಂಡ (ಕಥಾ ಸಂಕಲನ)

ಬಸವರಾಜ ಸಾದರ

ಪುಟ : ೧೦೪ ಬೆಲೆ : ರೂ. ೪೫

**ಲೋಹಿಯಾ ಪ್ರಕಾಶನ,** ಕ್ಷಿತಿಜ, ಕಪ್ಪಗಲ್ಲು ರಸ್ತೆ, ಬಳ್ಳಾರಿ - ೫೮೩ ೧೦೩

ಇಂದಿನ ಉನ್ನತ ಶಿಕ್ಷಣದಿಂದ ತಾನು ನಾಗರಿಕನಾಗಿದ್ದೇನೆಂದು ಭ್ರಮಿಸಿ ಬೀಗುತ್ತಿರುವ ಮನುಷ್ಯನಿಗೆ ಆತ ಮರೆತಿರಬಹುದಾದ ಉನ್ನತ ಮೌಲ್ಯ - ಜೀವನ ಪ್ರೀತಿಗಳನ್ನು ನೆನಪಿಸುತ್ತ ಸಾಗುವ ಕಥೆಗಳು. ಧನದಾಹಿಯಾದ ವರ್ಗಗಳಿಗೆ ಬಲಿಯಾಗುತ್ತ ಜೀವಚ್ಛವದಂತೆ ಬಾಳುವ ಸಮಾಜದ ಇನ್ನೊಂದು ವರ್ಗದವರ ನೋವಿನ ಎಳೆ-ಎಳೆ ಬಿಡಿಸಿ ಗುರುತಿಸುವ ಚಿತ್ರಣ ಇದಾಗಿದೆ. ಇಲ್ಲಿನ 'ಬಿಕ್ರ', 'ತಪ್ಪಂಡ'ದಂತಹ ಕಥೆಗಳು ಮುಗ್ಧ ಜನರಿಂದ ಎಲ್ಲವನ್ನೂ ದೋಚುವ ಗಣ್ಯವ್ಯಕ್ತಿಗಳ ಬಗ್ಗೆ ಎಚ್ಚರಿಕೆ ನೀಡುತ್ತವೆ.

### ಒಳ-ಹೊರಗು (ವಿಮರ್ಶಾ ಲೇಖನಗಳು)

ಸುಬ್ರಾಯ ಚೊಕ್ಕಾಡಿ

ಪುಟ : ೧೨೪ ಬೆಲೆ : ರೂ. ೬೦

**ಇಂಚರ ಪ್ರಕಾಶನ,** ನಂ. ೧೬೭, ೧೦ನೇ ಮುಖ್ಯರಸ್ತೆ, ೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು - ೫೮

ಆಂತರಿಕ ದುಗುಡಗಳನ್ನು ಹೊರ ಜಗತ್ತಿಗೆ ತಿಳಿಸಲು, ಸಮಾಜದ ನಡುವೆ ಸ್ಪಷ್ಟ ಸ್ವಂತಿಕೆಯನ್ನು ಗುರುತಿಸಿಕೊಳ್ಳಲು ಸಾಹಿತ್ಯಕ್ಕೆ ಮೊರೆಹೋದ ಚೊಕ್ಕಾಡಿಯವರ ಚಿಂತನ-ಮಂಥನದ ನವನೀತವೇ ಇಲ್ಲಿನ ಬರಹಗಳು. ತಾನು ಸೃಷ್ಟಿಸಿದ ಸಾಹಿತ್ಯದ ಸ್ವ-ವಿಮರ್ಶೆಯ ಜೊತೆಗೆ ಇತರ ಸಾಹಿತಿ ಮಿತ್ರರ ಕೃತಿಗಳ ವಿಮರ್ಶೆಯನ್ನೂ ಮಾಡಿದ್ದಾರೆ. ಈ ಸಂಕಲನವನ್ನು ಕೃತಿಗಳ ಶೋಧನೆಯೆಂದರೂ ತಪ್ಪಾಗಲಾರದು. ಕೃತಿಯ ಓದಿನ ನಂತರದ ಅನಿಸಿಕೆಯನ್ನು ದಾಖಲಿಸಿದ್ದಾರೆ.

### ಓದಿ ಅಳುವುದು (ಹಿಂದಿ ಕವಿತೆಗಳು)

ಅನುವಾದಕ ಸಂಪಾದಕ : ಡಾ|| ಕಾಶೀನಾಥ ಅಂಬಲಗೆ

ಪುಟ : ೧೦೬ ಬೆಲೆ : ರೂ. ೮೦

**ಪ್ರಗತಿ ಪ್ರಕಾಶನ,** ಜಯನಗರ, ಕಲಬುರ್ಗಿ - ೫೮೫ ೧೦೫

ನದಿಯ ನೀರನ್ನು ಕಾಲುವೆಗಳ ಮೂಲಕ ಎಲ್ಲ ಪ್ರದೇಶಗಳಿಗೆ ಹರಿಸುವಂತೆ ಸಾಹಿತ್ಯ ವಾಹಿನಿಯನ್ನೂ ಭಾಷಾಂತರಗೊಳಿಸಿ ಸಾರ್ವತ್ರಿಕವಾಗಿಸುವುದು ಸಾಧ್ಯ! ಅಂಥ ಪ್ರಯತ್ನವೆಂಬಂತೆ ಹಿಂದೀ ಭಾಷೆಯ ವಿಚಾರವಂತ-ಪ್ರತಿಭಾವಂತ ಕವಿಗಳನ್ನಾಯ್ದು ಕನ್ನಡದ ಕಾವ್ಯಪೇಮಿಗಳಿಗಾಗಿ ಅನುವಾದಿಸಿ ತಂದ ಕವಿತೆಗಳಿವು. ಶೋಷಿತ ಜನರ ಪರವಾಗಿ ಇಲ್ಲಿನ ದನಿಗಳು ಕೇಳಿಸುತ್ತಿದ್ದು ಇಂದಿನ ಸಮಕಾಲೀನ ವ್ಯವಸ್ಥೆಯನ್ನು ವಿಡಂಬನೆ-ವ್ಯಂಗ್ಯಗಳ ಮೂಲಕ ಸೆರೆ ಹಿಡಿಯಲಾಗಿದೆ.

### ಸಲ್ಲಲಿತ ಸನ್ಮಾರ್ಗ

ಚೆನ್ನಬಸವಪ್ಪ ಬೆಟ್ಟದೂರು

ಪುಟ : ೧೦೮ ಬೆಲೆ : ರೂ. ೩೦

**ಲೋಹಿಯಾ ಪ್ರಕಾಶನ,** ಕ್ಷಿತಿಜ, ಕಪ್ಪಗಲ್ಲು ರಸ್ತೆ, ಬಳ್ಳಾರಿ - ೫೮೩ ೧೦೩

ಈ ಪುಸ್ತಕದಲ್ಲಿ ವಿಸ್ತಾರವಾಗಿ ಚರ್ಚಿಸಲ್ಪಟ್ಟಿರುವುದು ಮುಖ್ಯವಾಗಿ 'ಧರ್ಮ' ಎಂಬ ಪದದ ಬಳಕೆ ಹಾಗೂ ಆ ಪದವು ಭಾರತೀಯರಲ್ಲಿ ಉಂಟುಮಾಡಿದ ಅಸಂಖ್ಯಾತ ಗೊಂದಲದ ಪ್ರಕರಣಗಳ ವ್ಯಾಖ್ಯೆ. ಒಳ್ಳೆಯ ದಾರಿಯನ್ನು ತೋರಬೇಕಾದ ಧರ್ಮ ಇಂದು ಜನರನ್ನು ಅಡ್ಡದಾರಿಗೆಳೆದು ಅಪಾಯಕಾರಿ ಸನ್ನಿವೇಶವನ್ನು ನಿರ್ಮಿಸಿದ್ದಾದರೂ ಹೇಗೆ? ಸನ್ಮಾರ್ಗದಲ್ಲಿ ಕ್ರಮಿಸಬೇಕಾದ ಸದುಪದೇಶದ ಕೊರತೆಯಿಂದ ಹೀಗಾಗಿರಬಹುದು. ಲೇಖಕರು ಧರ್ಮ ಪದದ ಸ್ಥಾನದಲ್ಲಿ ಸನ್ಮಾರ್ಗ ಎಂಬ ಪದವನ್ನು ಹೋಲಿಸಿ ನೋಡಿದ್ದಾರೆ.

### ಥೇಮ್ಸ್‌ದಿಂದ ಟೈಬರ್‌ವರೆಗೆ (ಪ್ರವಾಸ ಕಥನ)

ವೆಂಕಟೇಶ ಮಾಚಕನೂರ

ಪುಟ : ೧೩೬ ಬೆಲೆ : ರೂ. ೫೦

**ಲೋಹಿಯಾ ಪ್ರಕಾಶನ,** ಕ್ಷಿತಿಜ, ಕಪ್ಪಗಲ್ಲು ರಸ್ತೆ, ಬಳ್ಳಾರಿ

ಒಬ್ಬ ಪ್ರವಾಸಿಯಾಗಿ ಯುರೋಪ್ ಸಂದರ್ಶಿಸಿದ ಶ್ರೀ ಮಾಚಕನೂರ ಅವರು ತಮ್ಮ ಅನುಭವವನ್ನು ನಮ್ಮೊಂದಿಗೆ ಹಂಚಿಕೊಂಡಿದ್ದಾರೆ. ಪ್ರವಾಸ ಕಥನಗಳನ್ನು ಒಂದೇ ವರ್ಗದವೆಂದು ಹೆಸರಿಸಿದರೂ ಪ್ರತಿಯೊಬ್ಬ ಪ್ರವಾಸಿಯ ಅನುಭವಗಳು ಖಂಡಿತವಾಗಿಯೂ ಬೇರೆ ಬೇರೆಯಾಗಿಯೇ ಇರುತ್ತವೆ. ಇಲ್ಲಿನ ನಿರೂಪಣೆಯಲ್ಲಿ ಚಾರಿತ್ರಿಕ-ಭೌಗೋಳಿಕ ಅಂಶಗಳಿಗೆ ಹೆಚ್ಚು ಒತ್ತು ನೀಡಲಾಗಿದ್ದು ಸುಮಾರು ಹನ್ನೊಂದು ವಿದೇಶೀ ನಗರಗಳ ಸಂಕ್ಷಿಪ್ತವಾದ ಅಚ್ಚುಕಟ್ಟಾದ ವಿವರಣೆಯಿದೆ. ವಿದೇಶವೆಂದರೆ ಬೆರಗಿನಿಂದ ಮೈಯೆಲ್ಲಾ ಕಿವಿಯಾಗಿ ಆಲಿಸುವವರಿಗೊಂದು ಹೊಸ ಪ್ರವಾಸ ಕಥನ.

### ಮಳೆಯೇ ಮಂಟಪ (ಕವನ ಸಂಗ್ರಹ)

ಹೆಚ್. ಎಸ್. ಶಿವಪ್ರಕಾಶ್

ಪುಟ : ೧೦೪ ಬೆಲೆ : ರೂ. ೫೦

**ಲೋಹಿಯಾ ಪ್ರಕಾಶನ,** ಕ್ಷಿತಿಜ, ಕಪ್ಪಗಲ್ಲು ರಸ್ತೆ, ಬಳ್ಳಾರಿ - ೫೮೩ ೧೦೩

ಏಳನೆಯ ಮುದ್ರಣವನ್ನು ಕಂಡ ವಿವಾದಿತ ಪಠ್ಯಪುಸ್ತಕ ''ಮಹಾಚೈತ್ರ'' ಕೃತಿಯ ಲೇಖಕ ಹೆಚ್. ಎಸ್. ಶಿವಪ್ರಕಾಶ್ ಅವರ ಕವಿತೆಗಳ ಸಂಗ್ರಹವಿದು. ಬದಲಾದ ಪರಿಸರಕ್ಕನುಗುಣವಾಗಿ ತನ್ನ ಹೆಜ್ಜೆ ಮೂಡಿಸುತ್ತ ಬಂದ ಇಲ್ಲಿನ ಕಾವ್ಯರಚನೆಯು ಸಹೃದಯ ಓದುಗನಲ್ಲಿ ಪ್ರತಿಸ್ಪಂದನದ ಅಲೆಯನ್ನು ಉಂಟುಮಾಡುವಲ್ಲಿ ಸಫಲವಾಗಿದೆ. ನಮ್ಮ ಪ್ರಜ್ಞೆಯ ಒಂದು ಭಾಗವೇ ಸುತ್ತಲಿನ ಪರಿಸರದೊಂದಿಗೆ ಭಾಷೆಯ ಮೂಲಕ ಸಂವಾದಿಯಾಗಿರುವ ವಿಶಿಷ್ಟ ಗುಣವನ್ನಿಲ್ಲಿ ಕಾಣಬಹುದು.

### ಸಾಕ್ಷಿ (ಸತ್ಯ ಘಟನೆಗಳು)

ಡಾ|| ಸರಜೂ ಕಾಟ್ಕರ್

ಪುಟ : ೧೪೦ ಬೆಲೆ : ರೂ. ೫೦

**ಲೋಹಿಯಾ ಪ್ರಕಾಶನ,** ಕ್ಷಿತಿಜ, ಕಪ್ಪಗಲ್ಲು ರಸ್ತೆ, ಬಳ್ಳಾರಿ - ೫೮೩ ೧೦೩

ವೃತ್ತಪತ್ರಿಕೆಗಳಲ್ಲಿ ಸುದ್ದಿಗಳು ಅಚ್ಚಾಗಿರುವಂತೆಯೇ ವರದಿ ಗಾರರ ಮನಃಪಟಲದ ಮೇಲೂ ಅತ್ಯಂತ ಸ್ವಾರಸ್ಯಕರ ವಿಷಯಗಳು ದಾಖಲಾಗಿರುತ್ತವೆ. ತಮ್ಮ ಇತಿಮಿತಿಗಳಿಂದಾಗಿ ಕೆಲವು ಸಂದರ್ಭದಲ್ಲಿ ಹೊರಗೆಡಹದೆ ಇರುವ ಅನೇಕ ನಿಜ ಸುದ್ದಿಗಳೂ ಅವರಲ್ಲಿರುತ್ತವೆ. ಪತ್ರಿಕಾ ವರದಿಗಾರ ಡಾ|| ಸರಜೂ ಕಾಟ್ಕರ್ ಇಂತಹ ಅನೇಕ ಘಟನೆಗಳಿಗೆ ಸಾಕ್ಷಿಯಾಗಿದ್ದಾರೆ. ಇಪ್ಪತ್ತೈದು ವರ್ಷಗಳ ತಮ್ಮ ಪತ್ರಿಕಾ ಜೀವನದ ಸ್ವಾರಸ್ಯವನ್ನು ಸಂದರ್ಭಗಳ ಸಹಿತ ನಮ್ಮ ಮುಂದಿರಿಸಿದ್ದಾರೆ. ಇವೆಲ್ಲ ನಡೆದ ನಿಜ ಘಟನೆಗಳು.

– ಇಂದಿರಾ ಕುಮಾರಿ

# ದೇಹದ ಸ್ವಾಭಾವಿಕ ವೇಗಗಳ ನಿಗ್ರಹ ಅನಾರೋಗ್ಯಕರ

ಮನುಷ್ಯನ ಆರೋಗ್ಯಕರ ಜೀವನವು ಆಹಾರ, ನಿದ್ರೆ, ಬ್ರಹ್ಮಚರ್ಯಗಳ ಸಮರ್ಪಕ ಆಚರಣೆಯಿಂದ ಸಾಧ್ಯ. ಅದು ನಮ್ಮ ದೇಹದ ಸ್ವಾಭಾವಿಕ ವೇಗಗಳ ಸಮರ್ಪಕ ವಿಸರ್ಜನೆ ಅಥವಾ ಹೊರ ಹೋಗುವಿಕೆಯನ್ನು ಅವಲಂಬಿಸಿದೆ. ಈ ವೇಗಗಳ ಬಲಾತ್ಪ್ರೇರಣೆ ಮತ್ತು ಬಲಾತ್ ರೋಧನೆಯಿಂದ ಪ್ರಾಯಶಃ ಎಲ್ಲಾ ಪ್ರಕಾರದ ರೋಗಗಳು ಅನಿವಾರ್ಯವಾಗಿ ಉಂಟಾಗುವುದರಿಂದ ಅಸ್ವಾಸ್ಥತೆಯುಂಟಾಗುತ್ತದೆ.

ಏತಾನ್ ಧಾರಯತೋ ಜಾತಾನ್ ವೇಗಾನ್ ರೋಗಾ ಭವಂತಿ ಯೇ|| (ಚರಕ : ಸೂತ್ರಸ್ಥಾನ ೭.೫). ಸ್ವಾಭಾವಿಕ ಪ್ರೇರೇಪಣೆಗಳ ತಡೆಗಟ್ಟುವಿಕೆ ವಿವಿಧ ತೆರನಾದ ರೋಗಗಳಿಗೆ ನಾಂದಿಯಾಗುತ್ತದೆ. ಚರಕನ ಪ್ರಕಾರ ಆಧಾರಣೀಯ ವೇಗ ಮತ್ತು ಧಾರಣೀಯ ವೇಗ ಎಂದು ಎರಡು ಪ್ರಕಾರಗಳಿವೆ.

''ಆಧಾರಣೀಯ ವೇಗ''ಗಳೆಂದರೆ - ಈ ವೇಗಗಳ ನಿಗ್ರಹದಿಂದ, ದೇಹದ ಕೆಲಸ ಕಾರ್ಯಗಳಲ್ಲಿ ಏರುಪೇರಾಗಿ ರೋಗಗಳುಂಟಾಗುತ್ತದೆ.

ಧಾರಣೀಯ ವೇಗಗಳ ನಿಗ್ರಹವೇ ದೇಹದ ಹಾಗೂ ಮಾನಸಿಕ, ಸಾಮಾಜಿಕ ಸ್ವಾಸ್ಥ್ಯಗಳನ್ನು ಕಾಪಾಡುತ್ತದೆ.

**ದೇಹದ ಸ್ವಾಭಾವಿಕ ವೇಗಗಳು**

ನ ವೇಗಾನ್ ಧಾರಯೇದ್ಧೀಮಾಂಜಾತಾನ್ ಮೂತ್ರ ಪುರೀಷಯೋಃ।
ನ ರೇತಸೋ ನ ವಾತಸ್ಯ ನ ಛರ್ದ್ಯಾಃ ಕ್ಷವಥೋರ್ನ ಚ ||
ನೋದ್ಗಾರಸ್ಯ ನ ಜೃಂಭಾಯಾ ನ ವೇಗಾನ್ ಕ್ಷುತ್ ಪಿಪಾಸಯೋಃ।
ನ ಬಾಷ್ಪಸ್ಯ ನ ನಿದ್ರಾಯಾ ನಿಃಶ್ವಾಸಸ್ಯ ಶ್ರಮೇಣ ಚ ||
(ಚರಕ ಸಂಹಿತ : ಸೂತ್ರಸ್ಥಾನ ೭.೩-೪).

ಅಂದರೆ ಮನುಷ್ಯನು ಯಾವಾಗಲೂ ತನ್ನ ದೇಹದ ಸ್ವಾಭಾವಿಕ ಪ್ರೇರೇಪಣೆಗಳಾದ ಮೂತ್ರ, ಮಲ, ಶುಕ್ರ (ರೇತಸ್), ಅಧೋಗತ ವಾತ, ವಾಂತಿ, ಸೀನು, ತೇಗು, ಆಕಳಿಕೆ, ಹಸಿವು, ಬಾಯಾರಿಕೆ, ಕಣ್ಣೀರು, ನಿದ್ರೆ ಮತ್ತು ಶ್ರಮದಿಂದುಂಟಾದ ಶ್ವಾಸ ಇವುಗಳನ್ನು ತಡೆಗಟ್ಟಬಾರದು. ಜೊತೆಯಲ್ಲಿ ಕೆಮ್ಮುವುದನ್ನು ತಡೆಗಟ್ಟುವುದು ಕೂಡ ಆರೋಗ್ಯಕ್ಕೆ ಹಾನಿಕಾರಕ ಎಂದು ವಾಗ್ಭಟ ತಿಳಿಸಿದ್ದಾನೆ.

ಮೂತ್ರವಿಸರ್ಜನೆಯ ನಿಗ್ರಹಣೆಯಿಂದ ಮೂತ್ರಕೋಶದಲ್ಲಿ ನೋವು, ಕಷ್ಟಮೂತ್ರತಾ, ತಲೆನೋವು, ದೇಹ ಬಾಗುವಿಕೆ, ಕೆಳಹೊಟ್ಟೆ ಉಬ್ಬರಿಸಿಕೊಳ್ಳುವಿಕೆ ಕಾಣಿಸಿಕೊಳ್ಳುತ್ತದೆ (ಸೂತ್ರಸ್ಥಾನ ೭.೬). ಮಲ ನಿಗ್ರಹದಿಂದ ಹೊಟ್ಟೆ ನೋವು, ತಲೆನೋವು, ಮಲ ಮತ್ತು ಅಧೋವಾತಗಳ ಸ್ತಂಭನ, ಮೀನಖಂಡಗಳ ಬಿಗಿಯುವಿಕೆ, ಹೊಟ್ಟೆ ಉಬ್ಬರಿಸುವಿಕೆ ಉಂಟಾಗುತ್ತದೆ. ಶುಕ್ರ ವೇಗವನ್ನು ನಿಗ್ರಹಿಸುವುದರಿಂದ, ಶಿಶ್ನ ಮತ್ತು ವೃಷಣಗಳಲ್ಲಿ ನೋವು, ದೇಹಾಲಸ್ಯ, ಹೃದಯದ ನೋವು ಮತ್ತು ಮೂತ್ರಬಂಧ ಉಂಟಾಗುತ್ತದೆ. ಅಧೋವಾಯುವಿನ ನಿಗ್ರಹವು ಮಲ, ಮೂತ್ರ, ವಾತವನ್ನು ತಡೆಯುವುದಲ್ಲದೆ ಹೊಟ್ಟೆ ಉಬ್ಬರಿಸುವಿಕೆ, ಹೊಟ್ಟೆ ನೋವು, ಆಯಾಸ, ವಾತದೋಷದಿಂದ ಉಂಟಾಗುವ ಉದರಕ್ಕೆ ಸಂಬಂಧಿಸಿದ ಕೆಲವು ಖಾಯಿಲೆಗಳನ್ನೂ ಉಂಟುಮಾಡುತ್ತದೆ. ವಾಂತಿ ನಿಗ್ರಹದಿಂದ ತುರಿಕೆ, ಕಜ್ಜಿ, ಅರುಚಿ, ಪಿತ್ತಗಂಧೆ, ಮುಖದಲ್ಲಿ ಕಪ್ಪುಕಲೆಗಳು, ಊತ, ರಕ್ತಹೀನತೆ, ಜ್ವರ, ಚರ್ಮರೋಗಗಳು, ತಲೆತಿರುಗುವಿಕೆ, ವಿಸರ್ಪ ಕಾಣಿಸಿಕೊಳ್ಳುತ್ತದೆ. ಸೀನಿನ ನಿಗ್ರಹದಿಂದ ಮನ್ಯಾ ಸ್ತಂಭ, ತಲೆನೋವು, ಮುಖದ ಪಕ್ಷವಾತ, ಅರ್ಧ ತಲೆ ನೋವು, ಇಂದ್ರಿಯಗಳ ದುರ್ಬಲತೆ ಉಂಟಾಗುತ್ತದೆ. ತೇಗಿನ ನಿಗ್ರಹದಿಂದ ಬಿಕ್ಕಳಿಕೆ, ಅಸ್ತಮ, ಅರುಚಿ, ನಡುಕ, ಹೃದಯ-ಪುಪ್ಪುಸಗಳ ಕಾರ್ಯಕ್ಕೆ ತಡೆಯುಂಟಾಗುತ್ತದೆ. ಆಕಳಿಕೆಯನ್ನು ನಿಗ್ರಹಿಸುವುದರಿಂದ ದೇಹ ಬಾಗುವಿಕೆ, ಅಪಸ್ಮಾರ, ಸಂಕುಚಿತತೆ, ನಡುಕ, ದೇಹದಲ್ಲಿ ದುರ್ಬಲತೆ ಉಂಟಾಗುತ್ತದೆ. ಹಸಿವಿನ ನಿಗ್ರಹದಿಂದ ಮನುಷ್ಯ ಕೃಶನಾಗುತ್ತಾನೆ, ಜೊತೆಗೆ ಅವನಲ್ಲಿ ದುರ್ಬಲತೆ, ದೇಹ ಬಣ್ಣದಲ್ಲಿ ಬದಲಾವಣೆ, ದೇಹಾಲಸ್ಯ, ಅರುಚಿ, ತಲೆ ತಿರುಗುವಿಕೆ ಉಂಟಾಗುತ್ತದೆ. ಬಾಯಾರಿಕೆಯ ನಿಗ್ರಹದಿಂದ ಬಾಯಿ ಮತ್ತು ಗಂಟಲಿನ ಒಣಗುವಿಕೆ, ಕಿವುಡತ್ವ, ದುರ್ಬಲತೆ, ಎದೆನೋವು ಕಾಣಿಸಿ ಕೊಳ್ಳುತ್ತದೆ. ಕಣ್ಣೀರಿನ ನಿಗ್ರಹಣೆಯಿಂದ ಮೂಗಿನಿಂದ ಸ್ರಾವ, ಅಕ್ಷಿರೋಗಗಳು, ಹೃದಯ ರೋಗಗಳು, ಅರುಚಿ, ತಲೆತಿರುಗುವಿಕೆ ಉಂಟಾಗುತ್ತದೆ. ಬರುತ್ತಿರುವ ನಿದ್ರೆಯನ್ನು ನಿಗ್ರಹಿಸುವುದರಿಂದ ತೂಕಡಿಸುವಿಕೆ, ದೇಹಾಲಸ್ಯ ತಲೆನೋವು, ಕಣ್ಣುಗಳ ಭಾರವಾಗುವಿಕೆ ಉಂಟಾಗುತ್ತದೆ. ಶ್ರಮದಿಂದ ಉಂಟಾದ ಶ್ವಾಸ ನಿಗ್ರಹದಿಂದ ಗುಲ್ಮ, ಹೃದಯ ರೋಗಗಳು ಮತ್ತು ಮೂರ್ಛೆ ಉಂಟಾಗುತ್ತದೆ. ಕೆಮ್ಮಿನ ವೇಗವನ್ನು ತಡೆಗಟ್ಟುವುದರಿಂದ, ಕೆಮ್ಮು ವರ್ಧಿಸಿ, ದಮ್ಮು, ಅರುಚಿ, ಹೃದ್ರೋಗ, ಕ್ಷಯ ಮತ್ತು ಬಿಕ್ಕಳಿಕೆ ಉಂಟಾಗುತ್ತದೆ.

ಮನುಷ್ಯನು ತಾನು ಈ ಎಲ್ಲಾ ರೋಗಗಳಿಂದ ದೂರವಿರಬಯಸಿದ್ದಾದಲ್ಲಿ, ಈ ಸ್ವಾಭಾವಿಕ ಪ್ರೇರಣೆಗಳನ್ನು ತಡೆಗಟ್ಟದೆ ಹೋಗಲು ಅನುವು ಮಾಡಿಕೊಡಬೇಕು.

ಇದೇ ಪ್ರಕಾರವಾಗಿ ನಮ್ಮ ಈಗಿನ ಮತ್ತು ನಂತರದ ಜೀವನದ ಒಳಿತಿಗಾಗಿ ಕೆಲವು ವೇಗಗಳನ್ನು, ಅಂದರೆ ಒರಟುತನ, ಕೋಪ, ರಾಕ್ಷಸೀ ಮನೋಭಾವಕ್ಕೆ ಸಂಬಂಧಪಟ್ಟವುಗಳನ್ನು ಮಾನಸಿಕವಾಗಿ, ದೈಹಿಕವಾಗಿ, ತಡೆಗಟ್ಟಬೇಕು.

ಲೋಭ ಶೋಕ ಭಯ ಕ್ರೋಧ ಮಾನ ವೇಗಾನ್ ವಿಧಾರಯೇತ್।
ನೈರ್ಲಜ್ಜ್ಯೇರ್ಷ್ಯಾತಿರಾಗಾಣಾಮಭಿಧ್ಯಾಯಾಶ್ಚ ಬುದ್ಧಿಮಾನ್||
(ಚರಕ ಸಂಹಿತ: ಸೂತ್ರಸ್ಥಾನ ೭.೨೭)

ಅಂದರೆ ಬುದ್ಧಿವಂತ ಮನುಷ್ಯ ಅತಿಯಾದ ಆಸೆ, ದುಃಖ, ಭಯ, ಕೋಪ, ಅಹಂಕಾರ, ನಿರ್ಲಜ್ಜೆ, ಹೊಟ್ಟೆಕಿಚ್ಚು, ಅತಿಯಾದ ಪ್ರೀತಿ, ಹಗೆತನ ಇವುಗಳಿಂದ ಮುಕ್ತವಾಗಿ ತೃಪ್ತ ಜೀವನ ನಡೆಸುತ್ತಾನೆ. ಮತ್ತು

ಪರುಷಸ್ಯಾತಿಮಾತ್ರಸ್ಯ ಸೂಚಕಸ್ಯಾನೃತಸ್ಯ ಚ।
ವಾಕ್ಯಸ್ಯಾಕಾಲಯುಕ್ತಸ್ಯ ಧಾರಯೇದ್ವೇಗ ಮುತ್ಥಿತಮ್ ||
(ಚರಕ ಸಂಹಿತ: ಸೂತ್ರಸ್ಥಾನ ೭.೨೮)

ಯಾವಾಗಲೂ ಅತಿಯಾದ ಒರಟು ಮಾತು, ಹಿಂದಿನಿಂದ ದೂರುವುದು, ಸುಳ್ಳು ಹೇಳುವುದು, ಅಕಾಲಿಕ ಪದಗಳ ಉಪಯೋಗ ಇವುಗಳಿಂದ ದೂರವಿರಬೇಕು. ಬೇರೆಯವರಿಗೆ ಹಿಂಸೆಯಾಗುವಂತಹ ವ್ಯಭಿಚಾರ, ಕಳ್ಳತನ, ಕಿರುಕುಳ ಕೊಡುವುದು, ಇವುಗಳೆಲ್ಲವನ್ನೂ ನಿಗ್ರಹಿಸಿಕೊಳ್ಳಬೇಕು.

ಮನಸ್ಸು, ಮಾತುಕತೆ, ಶಾರೀರಿಕ ಕ್ರಿಯೆಗಳ ದುರ್ಗುಣಗಳಿಂದ ಮುಕ್ತಿ ಹೊಂದಿರುವ ಸದ್ಗುಣಿ ನಿಜವಾಗಿಯೂ ಸಂತೋಷವಾಗಿರುತ್ತಾನೆ ಮತ್ತು ಅವನೊಬ್ಬನೇ ಧರ್ಮ, ಅರ್ಥಗಳ ಫಲವನ್ನು ಆನಂದಿಸುತ್ತಾ ಸುಖ ಅನುಭವಿಸುತ್ತಿರುತ್ತಾನೆ.

**ಡಾ|| ಕೆ. ಪೂರ್ಣಿಮಾ ಕೋಡೂರು**
'ಸಶಿಪ್ರ', ಆಯುರ್ವೇದಿಕ್ ಹೆಲ್ತ್‌ಝೋನ್, ಶ್ರೀ ದುರ್ಗಾ ಕಾಂಪ್ಲೆಕ್ಸ್, ಸಾಗರ ರಸ್ತೆ, ರಿಪ್ಪನ್‌ಪೇಟೆ - ೫೭೭ ೪೨೬

## ಸಾದರ ಸ್ವೀಕಾರ

**ಕೂಗಿಲ್ಲದ ಕೊರಳು - (ಕವನ ಸಂಕಲನ)**
*ಸಂ. ದೊಡ್ಡಣ್ಣ ಗದ್ದನಕೇರಿ*
**ಪುಟ : ೭೦** **ಬೆಲೆ : ರೂ. ೫೦**
**ಕಮಲ ಪ್ರಕಾಶನ**
ಚಿತ್ತವಾಡಗಿ, ಹುನಗುಂದ ತಾ. ಬಾಗಲಕೋಟೆ ಜಿ.

**ಬಳಿಕಾಗಿ - (ಸಣ್ಣ ಕಥೆಗಳು)**
*ಸಂ. ಉದಯ್‌ಕುಮಾರ್ ಹಬ್ಬು*
**ಪುಟ : ೯೮** **ಬೆಲೆ : ರೂ. ೫೦**
ಅನಂತ ಪ್ರತಿಭಾ ಪ್ರಕಾಶನ, ಕಿನ್ನಿಗೋಳಿ-೫೭೪ ೧೫೦

**ಪ್ರಸಿದ್ಧಿ ಪಡೆದವರು - (ಕಥಾ ಸಂಕಲನ)**
*ಸಂ. ಮಹೇಶ ಗು. ಉಣ್ಣಿ*
**ಪುಟ : ೫೪** **ಬೆಲೆ : ರೂ. ೨೦**
ಕರ್ನಾಟಕ ರಾಜ್ಯ ಸರಕಾರಿ ನೌಕರರ ಸಂಘ, ತಾಲ್ಲೂಕು ಘಟಕ, ಅಥಣಿ

**ಸುಗ್ಗಿಯ ಹಬ್ಬ ಸಂಕ್ರಾಂತಿ - (ಲೇಖನ ಸಂಗ್ರಹ)**
*ಸಂ. ಟಿ. ವಿ. ವೆಂಕಟರಮಣಯ್ಯ*
**ಪುಟ : ೩೨** **ಬೆಲೆ : ರೂ. ೨೦**
ಟಿ. ವಿ. ವೆಂಕಟರಮಣಯ್ಯ, ಇಡಬ್ಲ್ಯುಎಸ್ ೨೧೮, ಕೆ.ಎಚ್.ಬಿ. ಕಾಲೊನಿ, ೨ನೇ ಹಂತ, ೫ನೇ ಕ್ರಾಸ್, ಬಸವೇಶ್ವರನಗರ, ಬೆಂಗಳೂರು-೭೯

**ಬಸವ-ವಚನ ಸಂಗ್ರಹ**
*ಸಂ. ಸು. ರುದ್ರಮೂರ್ತಿ ಶಾಸ್ತ್ರಿ*
**ಪುಟ : ೯೬** **ಬೆಲೆ : ರೂ. ೨೦**

**ಸರ್ವಜ್ಞ ವಚನ ಸಂಗ್ರಹ**
*ಸಂ. ಸು. ರುದ್ರಮೂರ್ತಿ ಶಾಸ್ತ್ರಿ*
**ಪುಟ : ೯೬** **ಬೆಲೆ : ರೂ. ೨೦**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
ಭಾಗ್ಯಲಕ್ಷ್ಮಿ ಪ್ರಕಾಶನ, ೮೭, ೩ನೇ ಕ್ರಾಸ್, ೪ನೇ ಬ್ಲಾಕ್, ಬನಶಂಕರಿ ೩ನೇ ಹಂತ, ೩ನೇ ಫೇಸ್, ಬೆಂ-೮೫

# ಕರ್ನಾಟಕ ಪಶುಸಂಗೋಪನಾ ಕ್ಷೇತ್ರ – ಒಳರಚನೆ ಮತ್ತು ಬೆಳವಣಿಗೆ –

**ಭೂ**ಸಂಪತ್ತಿನ ಸೌಲಭ್ಯವಿಲ್ಲದ ಕೋಟ್ಯಂತರ ಪ್ರಜೆಗಳಿಗೆ ಪಶುಸಂಪತ್ತು ಜೀವನಾಧಾರವಾಗಿದೆ. ಪಶು ಸಂಗೋಪನೆ ಕೃಷಿಗೆ ಪೂರಕವೂ, ಅದೇ ಸಮಯ ಸ್ವತಂತ್ರವೂ ಆದ ವೃತ್ತಿ, ಅದು ಹಾಲು, ಮೊಟ್ಟೆ, ಮಾಂಸ, ಉಣ್ಣೆ, ಚರ್ಮ–ಮುಂತಾದ ಮಾನವನ ಅವಶ್ಯಕತೆಗಳನ್ನು ಪೂರೈಸುತ್ತದೆ. ಕೃಷಿಕರ ಆದಾಯವನ್ನು ಸುಸ್ಥಿತಿಯಲ್ಲಿರುವಂತೆ ಮಾಡುವುದರ ಜೊತೆಗೆ ನೈಸರ್ಗಿಕ ಗೊಬ್ಬರ ಮುಂತಾದವುಗಳನ್ನು ಒದಗಿಸುತ್ತದೆ. ಬರಗಾಲವನ್ನು ಎದುರಿಸುವ ಸಾಮರ್ಥ್ಯವನ್ನು ಹೆಚ್ಚಿಸುತ್ತಾ, ಅನೇಕ ರೀತಿಯಲ್ಲಿ ರೈತನ ಜೀವನಕ್ಕೆ ಪೂರಕವಾಗಿವೆ. ಯಾವ ರಾಜ್ಯದಲ್ಲಿಯೇ ಆಗಲಿ ಪಶುಸಂಪತ್ತು ಆಹಾರ ಪೂರೈಕೆ ಮತ್ತು ಅದರ ಪೌಷ್ಟಿಕತೆಗೆ ಅನುವು ಮಾಡಿಕೊಡುತ್ತದೆ. ಇತರೇ ಹಲವಾರು ಕ್ಷೇತ್ರಗಳ ಮೇಲೆ ಪರಿಣಾಮ ಬೀರುತ್ತದೆ ಹಾಗೂ ಆರ್ಥಿಕ ನೆಲೆಯನ್ನು ಅಭಿವೃದ್ಧಿಗೊಳಿಸುವುದರಲ್ಲಿ ಮುಖ್ಯ ಪಾತ್ರವನ್ನು ವಹಿಸಿ, ಅನೇಕ ಜನರಿಗೆ ಉದ್ಯೋಗ ಅವಕಾಶವನ್ನು ಒದಗಿಸಿಕೊಡುತ್ತದೆ. ಕರ್ನಾಟಕ ರಾಜ್ಯದಲ್ಲಿ ಈ ಕ್ಷೇತ್ರದ ನಿವ್ವಳ ಉತ್ಪತ್ತಿಯು ರೂ. ೫,೩೮೧ ದಶಲಕ್ಷಗಳಿಂದ (೧೯೮೦-೮೧) ಎರಡು ದಶಕಗಳಲ್ಲಿ ರೂ. ೭೦,೬೬೭ ದಶಲಕ್ಷಗಳಷ್ಟಕ್ಕೆ (೨೦೦೦-೦೧) ಮುಟ್ಟಿದೆ. ೧೯೯೦ರ ದಶಕದಲ್ಲಿ ಪಶುಸಂಪತ್ತಿನ ಕ್ಷೇತ್ರದ ಉತ್ಪತ್ತಿಯು ಕೃಷಿಕ್ಷೇತ್ರದ ಉತ್ಪತ್ತಿಯ ಐದನೇ ಒಂದು ಭಾಗಕ್ಕಿಂತ ಹೆಚ್ಚಾಗಿದ್ದಿತು. ಪ್ರಸ್ತುತ ಅಧ್ಯಯನದಲ್ಲಿ, ಹಲವಾರು ವರುಷಗಳಲ್ಲಿ ಜಿಲ್ಲಾಮಟ್ಟ ಹಾಗೂ ರಾಜ್ಯಮಟ್ಟಗಳಲ್ಲಿ ನಡೆದ ಪಶು ಸಂಪತ್ತಿನ ಗಣತಿಯ ಆಧಾರದ ಮೇಲೆ, ವಿವರಗಳನ್ನು ದನ, ಎಮ್ಮೆ ಕುರಿ ಹಾಗೂ ಆಡುಗಳಿಗೆ ಸೀಮಿತವಾಗಿಟ್ಟುಕೊಂಡು, ಪಶುಪಾಲನಾ ಕ್ಷೇತ್ರದ ಒಳರಚನೆ ಹಾಗೂ ಬೆಳವಣಿಗೆಗಳ ಬಗ್ಗೆ ಚರ್ಚಿಸಲಾಗಿದೆ.

**ಪಟ್ಟಿ-೧ : ವಿವಿಧ ಕಾಲಗಳಲ್ಲಿ ಪಶುಸಂಪತ್ತಿನ ಬೆಳವಣಿಗೆ**

| ವರ್ಗ | ೧೯೬೧* | ೬೧-೭೨ | ೭೨-೮೩ | ೮೩-೯೦ | ೯೦-೯೭ | ೧೯೬೧-೯೭ |
|---|---|---|---|---|---|---|
| ಹಸು | ೯೬.೭೩ | ೦.೩೨ | ೧.೧೦ | -೧.೪೯ | ೦.೯೦ | ೦.೩೧ |
| ಎಮ್ಮೆ | ೩೦.೨೬ | ೦.೫೬ | ೧.೧೫ | ೧.೪೬ | ೧.೧೩ | ೧.೦೨ |
| ಕುರಿ | ೪೭.೬೫ | -೦.೨೦ | ೦.೨೫ | -೦.೧೯ | ೭.೨೧ | ೧.೪೫ |
| ಆಡು | ೨೮.೯೪ | ೨.೩೨ | ೧.೮೩ | -೨.೨೧ | ೩.೨೮ | ೧.೪೬ |
| ಮೊತ್ತ | ೨೦೩.೫೮ | ೦.೫೫ | ೧.೦೬ | -೦.೮೮ | ೩.೦೦ | ೦.೯೦ |

(*'ಜಾನುವಾರು ಗಣತಿ-೧೯೬೧'ರ ಪ್ರಕಾರ ಪಶುಗಳ ಸಂಖ್ಯೆ – ಲಕ್ಷಗಳಲ್ಲಿ)

೧೯೬೧ ರಿಂದ ೧೯೯೭ರ ವರೆಗೆ ಹಸು ಜಾತಿಯ ಹಾಗೂ ಕುರಿ ಜಾತಿಯ ಒಟ್ಟು ಪಶುಸಂಪತ್ತಿನ ಸಂಖ್ಯೆ ೨೦೩.೫೮ ಲಕ್ಷಗಳಿಂದ ೨೮೦.೭೬ ಲಕ್ಷಗಳಿಗೆ ಹೆಚ್ಚಿ, ಪರಿಮಿತಗಳ ಮೂಲಕ ವಾರ್ಷಿಕ ಶೇಕಡಾ ೦.೯ರಷ್ಟು ಒಟ್ಟಾರೆ ಅಭಿವೃದ್ಧಿ ದರವನ್ನು ಸೂಚಿಸುತ್ತದೆ (ಪಟ್ಟಿ-೧). ದನ, ಕುರಿ ಮತ್ತು ಆಡುಗಳ ಸಂಖ್ಯೆಯನ್ನು ಮಾತ್ರ ಗಣನೆಗೆ ತೆಗೆದುಕೊಂಡಾಗ ೧೯೮೩ ರಿಂದ ೧೯೯೦ರ ವರೆಗೆ ಅಭಿವೃದ್ಧಿ ಇಳಿಮುಖವಾಗುತ್ತಿದೆ. ಎಮ್ಮೆಗಳ ಸಂಖ್ಯೆ ಮಾತ್ರ ಶೇಕಡಾ ೧.೪೬ರಷ್ಟು ವಾರ್ಷಿಕ ಅಭಿವೃದ್ಧಿಯಾಗುತ್ತಿದ್ದು ಇಡೀ ೯೦ರ ದಶಕದಲ್ಲಿ ಕುರಿ ಮತ್ತು ಆಡುಗಳ ಸಂಖ್ಯೆಯು ಮಾತ್ರ ದನ ಮತ್ತು ಎಮ್ಮೆಗಳಿಗಿಂತ ತೀವ್ರಗತಿಯಲ್ಲಿ ಅಭಿವೃದ್ಧಿಯಾಗಿರುವುದು ಕಂಡುಬರುತ್ತದೆ.

ಸಮಗ್ರ ಪಶುಸಂಪತ್ತಿನ ಅಭಿವೃದ್ಧಿಯು ೧೯೬೧-೧೯೯೭ರ ಸಮಯದಲ್ಲಿ ಅತಿ ಕಮ್ಮಿಯಾಗಿ (ಶೇಕಡಾ ೦.೩೧) ಕಂಡರೂ ಕುರಿ ಮತ್ತು ಆಡುಗಳ ಸಂಖ್ಯೆಯು ಶೇಕಡಾ ೧.೫ರಷ್ಟು ಹೆಚ್ಚಿದೆ. ಕುರಿ ಮತ್ತು ಆಡುಗಳ ಸಂಖ್ಯೆಯಲ್ಲಿ ಉತ್ತಮ ಅಭಿವೃದ್ಧಿ ಮಾಂಸಕ್ಕೆ ಬೇಡಿಕೆ ಹೆಚ್ಚಿರುವುದನ್ನು ಸೂಚಿಸುತ್ತಿರಬಹುದಾಗಿದೆ.



**ಪ್ರೊ|| ಎಂ. ಜೆ. ಭೆಂಡೆಯವರು ಇನ್‌ಸ್ಟಿಟ್ಯೂಟ್ ಫಾರ್ ಸೋಶಿಯಲ್ ಅಂಡ್ ಎಕನಾಮಿಕ್ ಛೇಂಜ್ ಸಂಸ್ಥೆಯಲ್ಲಿ ಕೃಷಿ ಅಭಿವೃದ್ಧಿ ಮತ್ತು ಗ್ರಾಮೀಣ ಮಾರ್ಪಾಡು ವಿಭಾಗದಲ್ಲಿ ಸಹ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ''ಹೊಸತು'' ದಿನಾಂಕ ೨೦.೧೧.೨೦೦೨ ರಂದು ''ಕರ್ನಾಟಕ ಸಂಪನ್ಮೂಲಗಳ ಆರ್ಥಿಕ ವಿಕಾಸ'' ಎಂಬ ವಿಷಯ ಕುರಿತು ''ಪ್ರಸ್ತುತ ಪರಿಸ್ಥಿತಿಯ ಅವಲೋಕನ ಮತ್ತು ಸಮಗ್ರ ಅಭಿವೃದ್ಧಿಗೆ ಪರ್ಯಾಯ ಚಿಂತನೆ''ಯನ್ನು ಪ್ರೊ|| ಅಬ್ದುಲ್ ಅಜೀಜ್‌ರವರ ನಿರ್ದೇಶನದಲ್ಲಿ ನಡೆಸಿದಾಗ ಪ್ರೊ|| ಎಂ. ಜೆ. ಭೆಂಡೆಯವರು ಮಂಡಿಸಿದ ''ಪಶು ಸಂಪತ್ತು'' ಕುರಿತ ವಿಚಾರಧಾರೆ ಇಲ್ಲಿದೆ. ಇನ್ನಷ್ಟು ವಿಷಯಗಳನ್ನು ಕುರಿತು ಮುಂಬರುವ ಸಂಚಿಕೆಗಳಲ್ಲಿ ಪ್ರಕಟಿಸಲಾಗುವುದು.**

**ಪ್ರೊ|| ಎಂ. ಜೆ. ಭೆಂಡೆ**

ರಾಜ್ಯದಲ್ಲಿ ೧೯೭೨ರಿಂದ ೧೯೯೭ರವರೆಗಿನ ಕಾಲದಲ್ಲಿ ಜನಸಂಖ್ಯೆಯು ದನ ಮತ್ತು ಎಮ್ಮೆಗಳ ಸಂಖ್ಯೆಗಿಂತ ಹೆಚ್ಚಿನ ಅಭಿವೃದ್ಧಿ ಗತಿಯನ್ನು ಸೂಚಿಸುತ್ತದೆ. ಈ ಕಾರಣದಿಂದ ಪ್ರತಿ ಸಾವಿರ ಜನಸಂಖ್ಯೆಯೊಡನೆ ತುಲನಾತ್ಮಕವಾಗಿ ಹೋಲಿಸಿದಾಗ ಪಶು ಸಂಪತ್ತಿನ ಬೆಳವಣಿಗೆ ಇಳಿಮುಖವಾಗಿರುವಂತೆ ಕಂಡುಬರುತ್ತದೆ. ಆದರೂ ೧೯೭೨ ರಿಂದ ೧೯೯೭ರ ಮಧ್ಯೆ ದನಗಳ ಸಂಖ್ಯೆಯು ಪ್ರತಿ ನೂರು ಹೆಕ್ಟೇರುಗಳಿಗೆ ಹೋಲಿಸಿದಾಗ ೯೭ ರಿಂದ ೧೦೩ಕ್ಕೂ, ಎಮ್ಮೆಗಳ ಸಂಖ್ಯೆಯು ೩೧ ರಿಂದ ೪೨ಕ್ಕೂ ಹೆಚ್ಚಿದೆ. ಪಟ್ಟಿ-೨ರಲ್ಲಿ ಈ ಸಂಖ್ಯೆಗಳನ್ನು ಕಾಣಬಹುದು.

ಹಸುಗಳ ಸಂಖ್ಯೆಯ ಸಾಂದ್ರತೆಯು (ಪಟ್ಟಿ-೨) ಜಿಲ್ಲೆಯಿಂದ ಜಿಲ್ಲೆಗೆ ವಿಭಿನ್ನವಾಗಿದೆ. ಬಿಜಾಪುರದಲ್ಲಿ ೩೧ರಷ್ಟು ಕನಿಷ್ಠ ಸಂಖ್ಯೆಯೂ ಬೆಂಗಳೂರಿನಲ್ಲಿ ೧೧೭ರಷ್ಟು ಗರಿಷ್ಠ ಸಂಖ್ಯೆಯೂ ಇದ್ದಿತು. ಎಮ್ಮೆಗಳ ಸಂಖ್ಯೆಯು ಮೈಸೂರು ಜಿಲ್ಲೆಯಲ್ಲಿ ಕನಿಷ್ಠವಾಗಿಯೂ (೧೦೦ ಹೆಕ್ಟೇರಿಗೆ ೧೦) ಬೆಳಗಾಂನಲ್ಲಿ ಗರಿಷ್ಠವಾಗಿಯೂ (೧೦೦ ಹೆಕ್ಟೇರಿಗೆ ೪೮) ಇದ್ದಿತು.

**ವಿವಿಧ ಅಳತೆಯ ಕೃಷಿ ಕ್ಷೇತ್ರಗಳಲ್ಲಿ ಪಶುಸಂಪತ್ತು**

ಪಶುಸಂಪತ್ತು ಹಿಡುವಳಿಗಳ ಪ್ರಮಾಣವನ್ನು ಹೊಂದಿಕೊಂಡೇ ಇದ್ದು, ಅದರ ಅನೇಕ ಚಟುವಟಿಕೆಗಳಿಗೆ ಪೂರಕವಾಗಿಯೇ ಇರುತ್ತದೆ. ೧೯೯೧ರಲ್ಲಿ ನಡೆದ ಸಮೀಕ್ಷೆಯಂತೆ ತೀರ ಸಣ್ಣ ಪ್ರಮಾಣದಲ್ಲಿ ಕೃಷಿ ಮಾಡುವ ರೈತರು ೨ ದನಗಳನ್ನು ಹೊಂದಿದ್ದರೆ, ೧೦ ಹೆಕ್ಟೇರುಗಳಿಗಿಂತ ಹೆಚ್ಚು ಸಾಗುವಳಿ ಮಾಡುವ ರೈತರ ಕುಟುಂಬಗಳು ಸುಮಾರು ೭ ದನಗಳನ್ನು ಹೊಂದಿದ್ದಾರೆ. ಹಸುಗಳಿಗಿಂತ ಎತ್ತುಗಳೇ ಹೆಚ್ಚು. ಆದರೆ ಎಮ್ಮೆಗಳ ಕ್ಷೇತ್ರಕ್ಕೆ ಬಂದಾಗ, ಕೋಣಗಳಿಗಿಂತ ಹೆಣ್ಣೆಮ್ಮೆಗಳೇ ಹೆಚ್ಚು ಸಂಖ್ಯೆಯಲ್ಲಿವೆ. ಒಟ್ಟಾರೆ ಬಹುಭಾಗ ಹಿಡುವಳಿಗಳಲ್ಲಿ ಕುರಿ ಮತ್ತು ಆಡುಗಳ ಸರಾಸರಿ ಸಂಖ್ಯೆ ಎಮ್ಮೆಗಳ ಸಂಖ್ಯೆಗಿಂತ ಹೆಚ್ಚಾಗಿರುವುದು ಕಂಡುಬರುತ್ತದೆ. ಈ ಕುರಿತ ವಿವರಗಳನ್ನು ಪಟ್ಟಿ-೩ರಲ್ಲಿ ಗಮನಿಸಬಹುದು.

| ಪಟ್ಟಿ-೨ : ರಾಜ್ಯದಲ್ಲಿನ ಪ್ರತಿ ಸಾವಿರ ಜನಸಂಖ್ಯೆ ಮತ್ತು ಪ್ರತಿ 100 ಹೆಕ್ಟೇರುಗಳಿಗೆ ತುಲನಾತ್ಮಕವಾಗಿ ದನ ಮತ್ತು ಎಮ್ಮೆಗಳ ಸಂಖ್ಯೆ | | | | |
|---|---|---|---|---|
| ವರುಷ | ಪ್ರತಿ ಸಾವಿರ ಜನಸಂಖ್ಯೆಗೆ | | ಪ್ರತಿ ೧೦೦ ಹೆಕ್ಟೇರಿಗೆ | |
| | ದನ | ಎಮ್ಮೆ | ದನ | ಎಮ್ಮೆ |
| ೧೯೭೨ | ೩೪೨ | ೧೧೦ | ೯೭ | ೩.೧ |
| ೧೯೯೭ | ೨೧೫ | ೮೭ | ೧೦೩ | ೪೨ |

**ಹಾಲು ಕರೆಯುವ ಜಾನುವಾರುಗಳ ವಿವರ**

ಹಾಲು ಕರೆಯುವ ದೇಶೀ ತಳಿಯ ಹಸುಗಳ ಸಂಖ್ಯೆಯು (ಪಟ್ಟಿ-೪) ೧೯೮೩ ರಲ್ಲಿದ್ದ ೩೭ ಲಕ್ಷದಿಂದ ೧೯೯೦ರಲ್ಲಿ ೨೮.೯ ಲಕ್ಷಕ್ಕೆ ಇಳಿದಿದ್ದು ಮತ್ತೆ ೧೯೯೭ ವೇಳೆಗೆ ೨೯.೮ ಲಕ್ಷಕ್ಕೆ ಏರಿದೆ. ಎಂದರೆ ಹಾಲು ಕರೆಯುವ ಎಲ್ಲಾ ಪಶುಗಳ ಸಂಖ್ಯೆಯನ್ನು ಗಮನಿಸಿದಾಗ ದೇಶೀ ಹಸುಗಳ ಸಂಖ್ಯೆಯು ೧೯೮೩ರಲ್ಲಿ ಶೇಕಡಾ ೬೪, ೧೯೯೦ರಲ್ಲಿ ಶೇಕಡಾ ೫೪ ಮತ್ತು ೧೯೯೭ರಲ್ಲಿ ಶೇಕಡಾ ೫೦ – ಈ ಮಾದರಿಯಲ್ಲಿ ಇಳಿದಿದೆ. ಆದರೆ ಮಿಶ್ರ ತಳಿಯ ಹಸುಗಳ ಸಂಖ್ಯೆಯು ೧೯೮೩ರಲ್ಲಿ ೨.೨ ಲಕ್ಷ (ಹಾಲು ಕರೆಯುವ ಎಲ್ಲಾ ಪಶುಗಳ ಸಂಖ್ಯೆಯ ಶೇ. ೩.೮) ೧೯೯೦ರಲ್ಲಿ ೩.೬ ಲಕ್ಷ (ಶೇ. ೬.೭) ಮತ್ತು ೧೯೯೭ರಲ್ಲಿ ೬.೯ ಲಕ್ಷ (ಶೇ. ೧೧.೫)ಕ್ಕೆ ಏರಿರುವುದು ಕಂಡುಬರುತ್ತದೆ.

| ಪಟ್ಟಿ -೩: ಹಿಡುವಳಿಗಳ ಪ್ರಮಾಣ ಮತ್ತು ಪಶು ಸಂಪತ್ತು | | | | | | | |
|---|---|---|---|---|---|---|---|
| ಹಿಡುವಳಿಗಳ ಪ್ರಮಾಣ ಹೆಕ್ಟೇರುಗಳಲ್ಲಿ ಒಂದು ಹೆಕ್ಟೇರು -೨.೪೭೧ ಎಕರೆ | ಎತ್ತು | ದನ | ಕೋಣ | ಎಮ್ಮೆ | ಮೊತ್ತ | ಕುರಿ | ಆಡು |
| <೧ | ೦.೬೫ | ೦.೬೭ | ೦.೧೩ | ೦.೪೩ | ೧.೮೮ | ೦.೫೮ | ೦.೫೦ |
| ೧-೧.೯೯ | ೧.೦೩ | ೦.೯೦ | ೦.೨೦ | ೦.೬೪ | ೨.೭೭ | ೦.೮೫ | ೦.೭೮ |
| ೨-೩.೯೯ | ೧.೨೯ | ೧.೦೪ | ೦.೨೫ | ೦.೮೧ | ೩.೪೦ | ೧.೦೮ | ೦.೮೬ |
| ೪-೯.೯೯ | ೧.೭೦ | ೧.೩೩ | ೦.೩೨ | ೧.೦೬ | ೪.೪೨ | ೧.೫೫ | ೦.೯೫ |
| <೧೦ | ೨.೮೪ | ೨.೨೧ | ೦.೫೩ | ೧.೫೪ | ೭.೧೩ | ೨.೪೩ | ೧.೩೩ |
| ಎಲ್ಲಾ | ೧.೦೫ | ೦.೯೨ | ೦.೨೦ | ೦.೬೬ | ೨.೮೩ | ೦.೯೧ | ೦.೭೨ |
| (ಆಧಾರ : ಭಾರತ ಸರ್ಕಾರ, ನವದೆಹಲಿ : ಕೃಷಿ ಮಂತ್ರಾಲಯದ ಸರ್ವೇಕ್ಷಣದ ವರದಿ ೧೯೯೨) | | | | | | | |

ಹಾಲು ಕರೆಯುವ ಎಮ್ಮೆಗಳ ಸಂಖ್ಯೆಯು ೧೯೮೩ರಲ್ಲಿದ್ದ ಶೇ. ೩೨.೫ರಿಂದ ೧೯೯೭ರಲ್ಲಿ ಶೇ. ೩೯ಕ್ಕೆ ಏರಿದೆ. ಆದರೆ ಒಟ್ಟಾರೆ ಹಾಲುಕರೆಯುವ ಪಶುಗಳ ಸಂಖ್ಯೆಯನ್ನು ಗಮನಿಸಿದಾಗ (ಆಡು ಮುಂತಾದವುಗಳ ಹೊರತು) ೧೯೮೩ರಲ್ಲಿದ್ದ ೫೮.೨೫ ಲಕ್ಷದಿಂದ ೧೯೯೦ರಲ್ಲಿ ೫೩.೬೨ ಲಕ್ಷಕ್ಕೆ ಇಳಿದಿದ್ದು, ೧೯೯೭ರಲ್ಲಿ ೬೦ ಲಕ್ಷಕ್ಕೆ ಏರಿರುವುದು ಕಂಡುಬರುತ್ತದೆ. ಪಟ್ಟಿ-೪ರಲ್ಲಿ ಈ ಸಂಖ್ಯೆಗಳ ವಿವರವಿದೆ:

| ಪಟ್ಟಿ-೪ : ಕರ್ನಾಟಕ ರಾಜ್ಯದಲ್ಲಿ ಹಾಲು ಕರೆಯುವ ಜಾನುವಾರುಗಳ ಸಂಖ್ಯೆಯಲ್ಲಿ ಕಂಡುಬಂದ ಬದಲಾವಣೆಗಳು | | | |
|---|---|---|---|
| ವರ್ಗ | ೧೯೮೩ | ೧೯೯೦ | ೧೯೯೭ |
| ದೇಶೀ ತಳಿಯ ಹಸುಗಳು | ೩೭,೧೧,೩೧೧ (೬೩.೭೨)* | ೨೮,೯೦,೦೧೧ (೫೩.೯೦) | ೨೯,೭೮,೦೩೦ (೪೯.೬೧) |
| ಮಿಶ್ರ ತಳಿಯ ಹಸುಗಳು | ೨,೨೧,೨೧೮ (೩.೮) | ೩,೫೭,೪೨೯ (೬.೬೭) | ೬,೮೯,೯೦೩ (೧೧.೪೯) |
| ಎಮ್ಮೆಗಳು | ೧೮,೯೨,೧೩೨ (೩೨.೪೮) | ೨೧,೧೪,೩೨೫ (೩೯.೪೩) | ೨೩,೩೫,೧೭೩ (೩೮.೯೦) |
| **ಮೊತ್ತ** | ೫೮,೨೪,೬೬೧ | ೫೩,೬೧,೭೬೫ | ೬೦,೦೩,೧೦೬ |
| *ಕಂಸದಲ್ಲಿರುವ ಸಂಖ್ಯೆಗಳು ಪ್ರತಿ ಕಾಲಮ್ಮಿನ ಮೊತ್ತದ ಶೇಕಡಾವಾರನ್ನು ಸೂಚಿಸುತ್ತವೆ. ಆಧಾರ: ಕರ್ನಾಟಕ ಸರ್ಕಾರದ ಪಂಚವಾರ್ಷಿಕ ಜಾನುವಾರು ಗಣತಿ -೧೯೮೩, ೯೦, ೯೭. | | | |

**ಹಾಲು ಉತ್ಪಾದನೆ:**

ಕರ್ನಾಟಕ ರಾಜ್ಯದಲ್ಲಿ ಹಾಲು ಉತ್ಪಾದನೆ (ಪಟ್ಟಿ-೫) ೧೯೭೯-೮೦ರಲ್ಲಿದ್ದ ೧೩.೭೫ ಸಾವಿರ ಟನ್ನುಗಳಿಂದ ೨೦೦೦-೦೧ ರಲ್ಲಿನ ೪೫೫೫ ಸಾವಿರ ಟನ್ನುಗಳಿಗೆ ಏರಿದೆ. ಇದರಲ್ಲಿ ಹಸು ಹಾಲಿನ ಭಾಗವು ಶೇಕಡಾ ೫೫ (೭೯-೮೦) ರಿಂದ ಶೇಕಡಾ ೬೨ (೧೯೯೯-೨೦೦೦)ಕ್ಕೆ ಹೆಚ್ಚಿದೆ. ೨೦೦೦-೦೧ರಲ್ಲಿ ಹಸುವಿನ ಹಾಲಿನ ಪ್ರಮಾಣವು ಸ್ವಲ್ಪಮಟ್ಟಿಗೆ ಕಡಿಮೆಯಾಗಿದೆ. ಕರ್ನಾಟಕದಲ್ಲಿ ಪ್ರತಿ ಪ್ರಜೆಗೆ ಪ್ರತಿ ದಿನ ಹಾಲು ದೊರೆಯುವ ಪ್ರಮಾಣ ಸರಾಸರಿ ೨೩೫ ಗ್ರಾಂನಷ್ಟಿದ್ದು, ಇದು ಐ.ಸಿ.ಎಂ.ಆರ್. ಸಂಸ್ಥೆಯ ಶಿಫಾರಸಿನಂತೆ ಅಪೇಕ್ಷಣೀಯ ಪ್ರಮಾಣ (೨೫೦ಗ್ರಾಂ)ಕ್ಕಿಂತ ಸ್ವಲ್ಪವೇ ಕಡಿಮೆಯಾಗಿದೆ.

**ಸಮಗ್ರ ಕೃಷಿ ಕ್ಷೇತ್ರಕ್ಕೆ ಪಶುಸಂಪತ್ತಿನ ಕೊಡುಗೆ**

ಪಶುಸಂಪತ್ತಿನ ಕ್ಷೇತ್ರವು ಸಮಗ್ರ ಕೃಷಿ ಕ್ಷೇತ್ರದ ಉತ್ಪತ್ತಿಯ ಒಟ್ಟಾರೆ ಮೌಲ್ಯಕ್ಕೆ ಪ್ರಮುಖವಾದ ಕೊಡುಗೆಯನ್ನು ನೀಡುತ್ತಲೇ ಬಂದಿದೆ. ಈ ಕೊಡುಗೆಯು ೧೯೮೦-೮೧ರಲ್ಲಿದ್ದ ರೂ. ೩,೧೬,೧೭೮ ಲಕ್ಷಗಳ ಮೊತ್ತದಿಂದ ೨೦೦೦-೦೧ರಲ್ಲಿ ರೂ. ೩೧,೪೪,೭೮೦ ಲಕ್ಷಗಳಿಗೆ ಗಮನಾರ್ಹವಾಗಿ ಏರಿದೆ. ಕೃಷಿ ಕ್ಷೇತ್ರದ ಒಟ್ಟು ಉತ್ಪಾದನೆಯಲ್ಲಿ ಇದು ೧೯೮೦-೮೧ರಲ್ಲಿ ಸುಮಾರು ಶೇ. ೧೭ರಷ್ಟಿದ್ದು ೧೭ ವರುಷಗಳಲ್ಲಿ ಶೇ. ೨೭ಕ್ಕೆ ಏರಿ, ಮುಂದಿನ ವರುಷಗಳಲ್ಲಿ ಸ್ವಲ್ಪ ಇಳಿಮುಖವಾಗಿದೆ. ಆದರೂ ಸಹ ಸಮಗ್ರ ಕೃಷಿ ಕ್ಷೇತ್ರದ ಉತ್ಪಾದನೆಯಲ್ಲಿ ಪಶುಸಂಪತ್ತಿನ ಕೊಡುಗೆಯು ಶೇ. ೨೫ರ ಆಸುಪಾಸಿನಲ್ಲಿಯೇ ಇದೆ.

ಬರುವ ದಿನಗಳಲ್ಲಿ ಈ ಕ್ಷೇತ್ರದಲ್ಲಿ ಇನ್ನೂ ಹೆಚ್ಚಿನ ಪ್ರಗತಿಯನ್ನು ನಿರೀಕ್ಷಿಸಬಹುದಾಗಿದೆ. ಯಾವ ರಾಜ್ಯದಲ್ಲಿಯೇ ಆಗಲಿ, ಜನಸಂಖ್ಯೆಯ ಹೆಚ್ಚಳ, ಪ್ರಜೆಗಳ ಆದಾಯದಲ್ಲಿ ಅಭಿವೃದ್ಧಿ, ನಗರೀಕರಣ, ಸ್ವಾಸ್ಥ್ಯದ ಬಗೆಗಿನ ಕಾಳಜಿ – ಇತ್ಯಾದಿ ಬೆಳವಣಿಗೆಗಳ ಪ್ರಭಾವದಿಂದ ಹಾಲು ಮತ್ತು ಹಾಲಿನ ಪದಾರ್ಥಗಳು ಹಾಗೂ ಮಾಂಸ ಮತ್ತು ಮಾಂಸೋತ್ಪತ್ತಿಯ ಪದಾರ್ಥಗಳ ಬೇಡಿಕೆಯು ಸಹಜವಾಗಿಯೇ ಹೆಚ್ಚುತ್ತದೆ. ಪಟ್ಟಣ ಹಾಗೂ ಗ್ರಾಮವಾಸಿಗಳ ಆಹಾರಾಭ್ಯಾಸಗಳಲ್ಲಿ ತೀವ್ರಗತಿಯ ಬದಲಾವಣೆಗಳು ಕಂಡುಬರುತ್ತಿರುವುದರಲ್ಲಿ ಆಶ್ಚರ್ಯವೇನಿಲ್ಲ. ಕರ್ನಾಟಕದಲ್ಲಿಯೂ ಕೂಡ ಆಹಾರಾಭ್ಯಾಸಗಳ ಬದಲಾವಣೆಯ ಕಾರಣದಿಂದ, ಹಾಲು ಮತ್ತು ಹಾಲಿನ ಪದಾರ್ಥಗಳು, ಕೊಬ್ಬು, ಎಣ್ಣೆ ಹಾಗೂ ಮಾಂಸ ಮತ್ತು ಮಾಂಸದ ಪದಾರ್ಥಗಳ ಶೇಕಡಾವಾರು ಬೇಡಿಕೆಯ ದರ ಮಾರುಕಟ್ಟೆಯಲ್ಲಿ ದವಸಧಾನ್ಯಗಳ ಬೇಡಿಕೆಗಿಂತ ಹೆಚ್ಚುತ್ತಿರುವುದು ರಾಷ್ಟ್ರೀಯ ಮಾಹಿತಿ ಸಂಗ್ರಹಣೆಯ ಅಧ್ಯಯನದಲ್ಲಿ ಕಂಡುಬಂದಿದೆ.

ಜನಸಂಖ್ಯೆ ಮತ್ತು ಪಶು ಸಂಖ್ಯೆ ಹೆಚ್ಚುತ್ತಾ ಹೋದಂತೆ, ಅವೆರಡಕ್ಕೂ ಅಗತ್ಯವಾದ ಭೂಮಿ, ದವಸಧಾನ್ಯಗಳು, ಮೇವು, ಆಹಾರ, ನೀರು ಇನ್ನಿತರ ಸೌಲಭ್ಯಗಳಿಗಾಗಿ ಪೈಪೋಟಿ ಯಾವಾಗಲೂ ನಡೆದೇ ಇದೆ. ಜನಸಂಖ್ಯೆ ಹೆಚ್ಚಿದಂತೆಲ್ಲಾ, ವಸತಿ, ಉದ್ಯೋಗ, ಓಡಾಟ, ಇತರೇ ಅವಶ್ಯಕತೆಗಳಿಗಾಗಿ, ಅಂದರೆ ತನ್ನ ಸ್ವಂತ ಉಪಯೋಗಕ್ಕಾಗಿ ಮಾನವನು ಹೆಚ್ಚು ಹೆಚ್ಚು ಭೂಕ್ಷೇತ್ರವನ್ನು ಆವರಿಸಿಕೊಳ್ಳುತ್ತಾನೆ. ಕೃಷಿಗಾಗಿ ಉಪಯೋಗಿಸಲ್ಪಡುತ್ತಿದ್ದ ಭೂಮಿಯು ಕೃಷಿಯೇತರ ಉದ್ದೇಶಗಳಾದ ಕೈಗಾರಿಕೆ, ಸಾರಿಗೆ, ವಸತಿ-ಇತ್ಯಾದಿ ಅಗತ್ಯಗಳಿಗಾಗಿ ಮಾರ್ಪಾಡಾದಂತೆ ಪಶುಸಂಪತ್ತಿನ ಬಳಕೆಗಾಗಿ ಮೀಸಲಾದ ಭೂಕ್ಷೇತ್ರವು ಕಡಿಮೆಯಾಗುತ್ತಾ ಹೋಗಿ, ಪಶುಸಂಪತ್ತಿನ ಅಭಿವೃದ್ಧಿ ಮಾರ್ಗದಲ್ಲಿ ಬಹುದೊಡ್ಡ ತಡೆಯುಂಟಾಗುತ್ತದೆ. ಜಾನುವಾರುಗಳ ಮೇವಿನ

| ಪಟ್ಟಿ-೫ : ಕರ್ನಾಟಕದಲ್ಲಿ ಹಾಲಿನ ಉತ್ಪಾದನೆ | | | |
|---|---|---|---|
| ವರ್ಷ | ಎಮ್ಮೆ | ಹಸು | ಮೊತ್ತ |
| ೧೯೭೯-೮೦ | ೬೧೫ (೪೪.೭೩) | ೭೬೦ (೫೫.೨೭) | ೧,೩೭೫ (೧೦೦) |
| ೧೯೮೯-೯೦ | ೧,೦೪೦ (೪೫.೬೧) | ೧,೨೪೦ (೫೪.೩೯) | ೨,೨೮೦ (೧೦೦) |
| ೧೯೯೯-೨೦೦೦ | ೧,೬೮೮ (೩೭.೯೯) | ೨,೭೫೫ (೬೨.೦೧) | ೪,೪೪೩ (೧೦೦) |
| ೨೦೦-೦೧ | ೧,೮೮೦ (೪೧.೨೭) | ೨,೬೭೫ (೫೮.೭೩) | ೪,೫೫೫ (೧೦೦) |

# ಬರೆಯದ ದಿನಚರಿಯ ಮರೆಯದ ಪುಟಗಳು

ಮಂಗಳೂರಿನಲ್ಲಿ ತಾರೀಖು ೧೬.೨.೦೩ ರವಿವಾರ ನಡೆದ ಸಮಾರಂಭದಲ್ಲಿ ಹಿರಿಯ ಕಮ್ಯುನಿಸ್ಟ್ ನಾಯಕ, ಸ್ವಾತಂತ್ರ್ಯ ಹೋರಾಟಗಾರ ಹಾಗೂ ಕರ್ನಾಟಕ ಏಕೀಕರಣ ಚಳವಳಿಯ ನೇತಾರರಲ್ಲೊಬ್ಬರಾದ ಸಂಗಾತಿ ಬಿ. ವಿ. ಕಕ್ಕಿಲ್ಲಾಯ ಅವರ 'ಬರೆಯದ ದಿನಚರಿಯ ಮರೆಯದ ಪುಟಗಳು' ಆತ್ಮಕಥನವನ್ನು ಬಿಡುಗಡೆ ಮಾಡಲಾಯಿತು. 'ಹೊಸತು' ಸಂಪಾದಕ ಡಾ॥ ಜಿ. ರಾಮಕೃಷ್ಣ ಅಧ್ಯಕ್ಷತೆ ವಹಿಸಿದ್ದರು. ಮಾಜಿ ವಿಧಾನಸಭಾಧ್ಯಕ್ಷರಾದ ಶ್ರೀ ರಮೇಶ್‌ಕುಮಾರ್ ಪುಸ್ತಕ ಬಿಡುಗಡೆ ಮಾಡಿದರು. ನವಕರ್ನಾಟಕ ಪ್ರಕಾಶನದ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಆರ್. ಎಸ್. ರಾಜಾರಾಮ್ ಲೇಖಕರನ್ನು ಸನ್ಮಾನಿಸಿದರು.

ನವಕರ್ನಾಟಕ ಪ್ರಕಾಶನ, ಭಾರತ ಕಮ್ಯುನಿಸ್ಟ್ ಪಕ್ಷ ಮತ್ತು ಜನಜಾಗೃತಿ ವೇದಿಕೆ ಇವು ಏರ್ಪಾಟು ಮಾಡಿದ್ದ ಈ ಸಮಾರಂಭದಲ್ಲಿ ಖ್ಯಾತ ಸಾಹಿತಿಗಳು, ಹಿರಿಯ ರಾಜಕಾರಣಿಗಳು, ಅಪಾರ ಸಂಖ್ಯೆಯ ಅಭಿಮಾನಿಗಳು, ಲೇಖಕರ ಬಂಧು ಬಳಗದವರು ಭಾಗವಹಿಸಿದ್ದರು.



ಸುದ್ದಿ ಚಿತ್ರ





ಪಟ್ಟಿ-೬ : ಕೃಷಿ ಹಾಗೂ ಪಶು ಸಂಗೋಪನಾ ಕ್ಷೇತ್ರದ ಉತ್ಪಾದನೆಯ ಮೌಲ್ಯ (ಚಾಲ್ತಿ ದರದಲ್ಲಿ ).(ರೂ ಲಕ್ಷಗಳಲ್ಲಿ )

| ವರ್ಷ | ಕೃಷಿ | ಪಶು ಸಂಪತ್ತು | ಮೊತ್ತ | ಪಶು ಸಂಪತ್ತಿನ ಉತ್ಪಾದನೆಯ ಶೇ. |
|---|---|---|---|---|
| ೧೯೮೦-೮೧ | ೨,೬೨,೩೭೦ | ೫೩,೮೦೮ | ೩,೧೬,೧೭೮ | ೧೭.೦೨ |
| ೧೯೯೦-೯೧ | ೭,೧೬,೯೪೮ | ೨,೦೩,೦೫೩ | ೯,೨೦,೦೦೧ | ೨೨.೦೭ |
| ೧೯೯೧-೯೨ | ೧೦,೧೦,೦೦೧ | ೨,೩೮,೧೧೭ | ೧೨,೪೮,೧೧೮ | ೧೯.೦೮ |
| ೧೯೯೨-೯೩ | ೧೦,೫೨,೩೯೯ | ೨,೮೬,೯೪೭ | ೧೩,೩೯,೩೪೬ | ೨೧.೪೨ |
| ೧೯೯೩-೯೪ | ೧೨,೯೨,೭೩೩ | ೩,೨೭,೪೫೦ | ೧೬,೨೦,೧೮೩ | ೨೦.೨೧ |
| ೧೯೯೪-೯೫ | ೧೪,೧೫,೩೧೫ | ೩,೮೧,೫೭೬ | ೧೭,೯೬,೮೯೧ | ೨೧.೨೪ |
| ೧೯೯೫-೯೬ | ೧೬,೨೯,೩೦೫ | ೪,೩೮,೩೦೯ | ೨೦,೬೭,೬೧೪ | ೨೧.೨೦ |
| ೧೯೯೬-೯೭ | ೧೭,೫೬,೯೩೯ | ೫,೨೭,೧೨೪ | ೨೨,೮೪,೦೬೩ | ೨೩.೦೮ |
| ೧೯೯೭-೯೮ | ೧೫,೮೫,೮೪೧ | ೬,೦೧,೬೪೬ | ೨೧,೮೭,೪೮೭ | ೨೭.೫೦ |
| ೧೯೯೮-೯೯ | ೨೧,೨೩,೦೬೬ | ೬,೪೬,೫೩೭ | ೨೭,೬೯,೬೦೩ | ೨೩.೩೯ |
| ೧೯೯೯-೦೦ | ೨೩,೯೦,೩೦೫ | ೬,೬೭,೯೬೯ | ೩೦,೫೮,೨೭೪ | ೨೧.೮೪ |
| ೨೦೦೦-೦೧ | ೨೪,೩೮,೦೭೧ | ೭,೦೬,೬೬೯ | ೩೧,೪೪,೭೪೦ | ೨೨.೪೭ |

ಆಧಾರ :ಕರ್ನಾಟಕ ಸರ್ಕಾರ ರಾಜ್ಯ ಸ್ಥಳೀಯ ಉತ್ಪನ್ನ, ಕರ್ನಾಟಕ, ಡಿಇಎಸ್ ಬೆಂಗಳೂರು, ೧೯೯೯ ಮತ್ತು ೨೦೦೨

ಕ್ಷೇತ್ರವು ಕುಗ್ಗುತ್ತಾ ಬಂದು, ಪಶುಗಳು ಹುಲ್ಲುಗಾವಲಿನಿಂದ ಚಿಕ್ಕಚಿಕ್ಕ ಗಿಡ-ಪೊದೆಗಳ ಕಡೆಗೆ ಸರಿಯುತ್ತಿರುವುದು ಪರಿಸರವಾದಿಗಳಲ್ಲಿ ಆತಂಕವನ್ನುಂಟುಮಾಡಿದೆ. ನಮ್ಮ ದೇಶದಲ್ಲಿ ದೇಸೀ ಹಾಗೂ ಮಿಶ್ರ ತಳಿಯ ಜಾನುವಾರುಗಳು ನೀಡುವ ಉತ್ಪತ್ತಿಯು (ಹಾಲು, ಉಣ್ಣೆ, ಮಾಂಸ, ಚರ್ಮ ಇತ್ಯಾದಿ) ಪಾಶ್ಚಾತ್ಯ ದೇಶಗಳ ಉತ್ಪಾದನೆಗಿಂತ, ಶೇಕಡಾ/ತಲಾವಾರು ಬಹಳ ಕಡಿಮೆಯಾಗಿದ್ದು, ಶೋಚನೀಯ ಸ್ಥಿತಿಯಲ್ಲಿದೆ. ಕರ್ನಾಟಕದಲ್ಲಿ ಹಸಿರು ಮೇವು, ಸಮತೋಲಿತ ಪಶುವಿನ ಆಹಾರ ಸತ್ವಗಳು, ಪಶು ಆರೋಗ್ಯ ಪಾಲನಾ ಸೌಲಭ್ಯಗಳು – ಮುಂತಾದುವುಗಳ ತೀವ್ರ ಕೊರತೆಯೇ ಹಾಲು ಕರೆಯುವ ಪಶುಗಳ ಉತ್ಪಾದನೆಯು ತೀರ ಅಧಃಪತನಕ್ಕೊಳಗಾಗಿರುವುದಕ್ಕೆ ಕಾರಣವಾಗಿದೆ. ಕೃತಕ ಮತ್ತು ಎಚ್ಚರಿಕೆಯಿಂದ ಆರಿಸಿದ ಗರ್ಭಧಾರಣೆಯ ಮೂಲಕ ಉತ್ತಮ ಮಿಶ್ರ ತಳಿಗಳ ಅಭಿವೃದ್ಧಿ, ಮೇವಿನಲ್ಲಿ ಸುಧಾರಣೆ, ಪಶು ಆರೋಗ್ಯ ಸಂರಕ್ಷಣಾ ಸೌಲಭ್ಯಗಳು, ಮಾರುಕಟ್ಟೆಯ ಸೌಲಭ್ಯಗಳು – ಮುಂತಾದುವುಗಳನ್ನು ಉತ್ತಮಪಡಿಸುವುದರಿಂದ ರಾಜ್ಯದ ಪಶು ಸಂಪತ್ತಿನ ಕ್ಷೀರೋತ್ಪಾದನೆಯಲ್ಲೂ ಪಶುಪಾಲನೆಯ ಕ್ಷೇತ್ರದ ಇತರ ಉತ್ಪಾದನೆಯ ಪ್ರಮಾಣದಲ್ಲೂ ಗಮನೀಯ ಅಭಿವೃದ್ಧಿಯನ್ನು ಸಾಧಿಸಬಹುದಾಗಿದೆ. ಪಶು ಸಂಖ್ಯೆಗಿಂತ ಗುಣಮಟ್ಟವನ್ನು ಅವಲಂಬಿಸಿದ ನೀತಿಯಾಗಬೇಕಾಗುತ್ತದೆ.

ಡಾ॥ ಎ. ಜೆ. ಛೇಂಡೆ

# ನಭಾಸಕ್ತರಿಗೆ ದೆವ್ವಗಳ ಕಾಟ !



ನೆಬ್ಯುಲಗಳನ್ನು ಆಕಾಶದಲ್ಲಿ ಗುರುತಿಸುವುದು ಪ್ರಯಾಸದ ಕೆಲಸವೇ ಆಗಿದೆ. ಒರೈಯನ್ ನೆಬ್ಯುಲ ಗುರುತಿಸಲು ಸಫಲರಾದ ಅನೇಕರಿಗೀಗ ಉಳಿದ ನೆಬ್ಯುಲಗಳನ್ನು ಗುರುತಿಸುವ ತವಕ. ಈ ತಿಂಗಳು ಮಂಗಳ ಗ್ರಹ ಇದಕ್ಕೊಂದು ಒಳ್ಳೆಯ ಅವಕಾಶ ಒದಗಿಸಿದೆ.

ಕಳೆದ ತಿಂಗಳು ಶುಕ್ರದ ಜೊತೆಗೂಡಿದ್ದ ಮಂಗಳ ಈಗ ಶುಕ್ರದಿಂದ ದೂರ ಸರಿದಿದೆ. ಮಂಗಳಕ್ಕೆ ಅತಿ ಸನಿಹದಲ್ಲಿದ್ದ ಕೆಂಪು ನಕ್ಷತ್ರ ಜ್ಯೇಷ್ಠಾದಿಂದಲೂ ಅದು ದೂರವಾಗುತ್ತಿರುವುದನ್ನು ಕಾಣಬಹುದು. ಹೀಗೆ ವೃಶ್ಚಿಕ ರಾಶಿಯಂಚಿನಿಂದ ಮುಂದಕ್ಕೆ (ಪೂರ್ವಕ್ಕೆ) ಸರಿಯುವ ಮಂಗಳ ಧನುರಾಶಿಯಲ್ಲಿ ಅನೇಕ ನೆಬ್ಯುಲ, ನಕ್ಷತ್ರಗುಚ್ಛಗಳಿಂದ ಸಮೃದ್ಧವಾಗಿರುವ ಆಕಾಶ ಗಂಗೆಯ ಭಾಗದಲ್ಲಿದೆ. ಆದ್ದರಿಂದ ದೂರದರ್ಶಕ ಅಥವಾ ದುರ್ಬೀನಿನಿಂದ ಮಂಗಳ ಗ್ರಹದ ಆಸುಪಾಸನ್ನು ಗಮನಿಸುತ್ತಿದ್ದರೆ ಸಾಕು. ಅನೇಕ ನೆಬ್ಯುಲಗಳ ಪರಿಚಯವಾಗುತ್ತದೆ. ಮುಖ್ಯವಾಗಿ ೪,೫,೬ ಈ ತಾರೀಖುಗಳಲ್ಲಿ ಗಮನಿಸಿ. ಲಗೂನ್ ಮತ್ತು ಟ್ರೈಫಿಡ್ ಎಂಬ ಹೆಸರಿನ ನೆಬ್ಯುಲಗಳ ನಡುವೆಯೇ ಕಾಣುತ್ತದೆ. ಛಾಯಾಗ್ರಹಣದಲ್ಲಿ ಆಸಕ್ತಿಯಿರುವವರಿಗೆ ಇದು ಒಳ್ಳೆಯ ಅವಕಾಶ. ಆದರೆ ದೆವ್ವದ ಕಾಟ ಇದೆ. ಅದೇನೆಂದು ತಿಳಿಯೋಣ.




ಈ ಎರಡು ನೆಬ್ಯುಲಗಳಿಗೆ ಎಂ ೮ ಮತ್ತು ಎಂ ೨೦ ಎಂಬ ಸಂಖ್ಯೆಗಳು ಮೆಸಿಯರ್ ಪಟ್ಟಿಯಲ್ಲಿ ನಮೂದಾಗಿವೆ. ಈ ಪಟ್ಟಿಯ ೪೪ನೇ ಸಂಖ್ಯೆಯ ನಕ್ಷತ್ರಗುಚ್ಛ ಕಟಕ ರಾಶಿಯಲ್ಲಿದೆ. ಎರಡು ತಿಂಗಳ ಕೆಳಗೆ ಗುರುಗ್ರಹ ಇದನ್ನು ಹಾದು ಹೋಗಿತ್ತು. ಈಗ ಹಿನ್ನಡೆಯುತ್ತಾ ಪುನಃ ಅದರ ಸಮೀಪ ಬರುತ್ತಿದೆ. ತಿಂಗಳ ಕೊನೆಯ ಹೊತ್ತಿಗೆ ಗುಚ್ಛದ ಅಂಚಿಗೆ ತಲುಪುತ್ತದೆ. ಆದ್ದರಿಂದ ತಿಂಗಳ ಮೊದಲಿನಿಂದ ಅದರ ಚಲನೆಯನ್ನು ಗಮನಿಸುತ್ತಾ ಇರುವುದು ಅವಶ್ಯಕ. ಗುಚ್ಛ ಕ್ಷೀಣವಾಗಿದೆ; ಗುರು ಸಾಕಷ್ಟು ಪ್ರಕಾಶಮಾನವಾಗಿದೆ. ಛಾಯಾಚಿತ್ರ ತೆಗೆಯಲು ಪ್ರಯತ್ನಿಸಿದಾಗ ದೆವ್ವದ ಕಾಟ ಆರಂಭವಾಗುವುದು. ಅಂದರೆ ಗುರು ಗ್ರಹದ ಪ್ರತಿಕೃತಿಯೊಂದು ಗುಚ್ಛದ ಮೇಲೆ ಮೂಡಿ ಗಲಿಬಿಲಿ ಉಂಟುಮಾಡಬಹುದು. ಹೀಗೆ ಅತಿ ಪ್ರಕಾಶಮಾನವಾದ ಕಾಯಗಳು ದೂರದರ್ಶಕದ ಮಧ್ಯಭಾಗದಲ್ಲಿಲ್ಲದೆ ಅಕ್ಕಪಕ್ಕದಲ್ಲಿದ್ದರೆ, ದೂರದರ್ಶಕದ ಮಸೂರಗಳ ಪ್ರತಿಫಲನದಿಂದಲೇ ಒಂದು ಹೊಸ ಬಿಂಬ ಸೃಷ್ಟಿಯಾಗಿಬಿಡುತ್ತದೆ. ಇದಕ್ಕೆ ದೆವ್ವ (ghost) ಎನ್ನುತ್ತಾರೆ. ಅನೇಕ ವರ್ಷಗಳ ಹಿಂದೆ ಪೂರ್ಣಗ್ರಹಣದ ಸಮಯದಲ್ಲಿ (ವಜ್ರದ ಉಂಗುರದ) ಚಿತ್ರವನ್ನು ತೆಗೆದ ಛಾಯಾಗ್ರಾಹಕರೊಬ್ಬರು (ಅವರು ಭೌತವಿಜ್ಞಾನದ ಪ್ರಾಧ್ಯಾಪಕರಾಗಿದ್ದರೆಂದು ನೆನಪು) ಇಂತಹದೊಂದು "ದೆವ್ವ"ವನ್ನು ದೊರಕಿಸಿಕೊಂಡಿದ್ದರು. ಅದನ್ನು ಹೊಸಗ್ರಹ ಎಂದು ಘೋಷಿಸಿದ್ದರು – ಈ ಬಗೆಯ ಎಡವಟ್ಟುಗಳು ಆಕಾಶಕಾಯಗಳ ಛಾಯಾಗ್ರಹಣದಲ್ಲಿ ಆಗುತ್ತಲೇ ಇರುತ್ತವೆ.



ಕಟಕ ರಾಶಿಯಲ್ಲಿ ಗುರುಗ್ರಹ ಎಂ ೪೪ ಮತ್ತು ಎಂ ೬೭ – ಇವೆರಡೂ ನಕ್ಷತ್ರಗುಚ್ಛಗಳು

ಚಿತ್ರದಲ್ಲಿ "ದೆವ್ವ"ವನ್ನು ಮೂಡಿಸುವ "ತಾಕತ್" ಇರುವ ಇನ್ನೊಂದು ಕಾಯ ಶುಕ್ರ. ಇದರ ಚಿತ್ರ ತೆಗೆಯಲು ಈ ತಿಂಗಳು ಎರಡು ಒಳ್ಳೆಯ ಅವಕಾಶಗಳಿವೆ. "ದೆವ್ವ" ಮೂಡದಂತೆ ಮಧ್ಯಕ್ಕೆ ಸರಿಯಾಗಿ ಶುಕ್ರವನ್ನು ಕೂಡಿಸಿ ೧೨ ಮತ್ತು ೧೩ರಂದು ಎರಡು ಚಿತ್ರಗಳನ್ನು ತೆಗೆಯಿರಿ. ಹೋಲಿಸಿ ನೋಡಿದಾಗ ಪಕ್ಕದಲ್ಲಿನ ಚುಕ್ಕೆಯೊಂದು ಸ್ಥಳ ಪಲ್ಲಟ ಮಾಡಿರುವುದು ಕಾಣುತ್ತದೆ. ಅದೇ ನೆಪ್ಚೂನ್. ಕೇವಲ ೧೧ ಆರ್ಕ್‌ಮಿನಿಟ್ (೧ ಡಿಗ್ರಿಗೆ ೬೦ ಆರ್ಕ್‌ಮಿನಿಟ್) ಅಂತರದಲ್ಲಿ ನೆಪ್ಚೂನ್ ಕಾಣುತ್ತದೆ. ಇದೇ ರೀತಿ ೨೮ರಂದು ದೆವ್ವ ಮೂಡದಂತೆ ಚಿತ್ರ ತೆಗೆದರೆ, ಕೇವಲ ೬ ಆರ್ಕ್‌ಮಿನಿಟ್ ಅಂತರದಲ್ಲಿ ಯುರೇನಸ್ ಕಾಣುತ್ತದೆ. ಬರಿಗಣ್ಣಿನಿಂದ ಗುರುತಿಸಲು ಸಾಧ್ಯವಾಗದ ಕ್ಷೀಣಗ್ರಹಗಳನ್ನು ಗುರುತಿಸುವ ಉಪಾಯ ಇದು. ಆದರೆ "ದೆವ್ವ"ದ ಬಗ್ಗೆ ಎಚ್ಚರಿಕೆ!

ಮಂಗಳ ಗ್ರಹದ ಸಹಾಯದಿಂದ ೫ ಮತ್ತು ೬ ರಂದು ಟ್ರೈಫಿಡ್ ಮತ್ತು ಲಗೂನ್ ನೆಬ್ಯುಲವನ್ನು ಚಿತ್ರಿಸಲು ಎಕ್ಸ್‌ಪೋಷರ್ ಹೆಚ್ಚುಕೊಟ್ಟರೆ ದೆವ್ವ ಮೂಡುವ ಸಾಧ್ಯತೆ ಇದೆ. ಇಲ್ಲದಿದ್ದರೆ ತೊಂದರೆ ಇಲ್ಲ.

ನೆನಪಿರಲಿ, ಈ ದೆವ್ವ ಬರಿಗಣ್ಣಿಗೆ ಕಾಣುವುದಿಲ್ಲ! ದೂರದರ್ಶಕ ಅಥವಾ ಕ್ಯಾಮರಾಗಳಿಗೆ ಮಾತ್ರ ಕಾಣುತ್ತದೆ!

ಶನಿಗ್ರಹ ಸಂಜೆ ನೆತ್ತಿಯಲ್ಲೇ ಕಾಣುತ್ತದೆ. ದೂರದರ್ಶಕ ಅಥವಾ ದುರ್ಬೀನಿನಿಂದ ಅದರ ಉಂಗುರಗಳು ವಿಸ್ತಾರವಾಗಿ ಕಾಣುವುವು. ೧೩ರಂದು ಸೂಕ್ಷ್ಮವಾಗಿ ಗಮನಿಸಿದರೆ ಗ್ರಹದ ನೆರಳು ಉಂಗುರದ ಮೇಲೆ ಬೀಳುವುದನ್ನು ಕಾಣಬಹುದು. ೧೩ ರಂದು ಶನಿ-ಭೂಮಿ-ಸೂರ್ಯ ಈ ಕೋನ ಸರಿಯಾಗಿ ೯೦ ಡಿಗ್ರಿ ಇರುವುದೇ ಈ ನೋಟಕ್ಕೆ ಕಾರಣ.

ಬುಧ ಗ್ರಹವನ್ನು ಈ ತಿಂಗಳು ಹುಡುಕುವುದು ಕಷ್ಟ. ಅದು ಮಾರ್ಚ್ ೨೧ರಂದು ಸೂರ್ಯನ ಹಿಂಬದಿಗೆ ನೇರವಾಗಿ ಹಾದು ಮುಂದಿನ ತಿಂಗಳಿಂದ ಸಂಜೆಯ ಹೊತ್ತು ಕಾಣಿಸಿಕೊಳ್ಳುವ ಸನ್ನಾಹ ನಡೆಸುತ್ತಿದೆ.

ಭೂಮಿ ತನ್ನ ಕಕ್ಷೆಯಲ್ಲೊಂದು ಮುಖ್ಯ ಘಟ್ಟವನ್ನು ಮಾರ್ಚ್ ೨೧ರಂದು ಹಾದು ಹೋಗಲಿದೆ. ಆದರೆ ಸೂರ್ಯ ವಿಷುವ ಬಿಂದುವನ್ನು ದಾಟುತ್ತದೆ ಎಂದು ಹೇಳುವುದು ವಾಡಿಕೆ. ಮಾರ್ಚ್ ೨೧ರಂದು ಹಗಲು ರಾತ್ರಿಗಳ ಅವಧಿ ಸಮ. ಇದು ವಿಷುವ ಬಿಂದುವನ್ನು ದಾಟುವುದರ ಸೂಚನೆ ವಸಂತಾಗಮನಕ್ಕೆ ಸಿದ್ಧತೆ.

ಸಂಜೆಯ ಆಕಾಶದಲ್ಲಿ ಗುರು ಮತ್ತು ಶನಿ ನಕ್ಷತ್ರ ಪುಂಜಗಳನ್ನು ಗುರುತಿಸುವಲ್ಲಿ ಸಹಕರಿಸುವರು. ಗುರುವಿನ ಒಂದು ಪಕ್ಕಕ್ಕೆ (ಪಶ್ಚಿಮದತ್ತ) ಮಿಥುನ; ಇನ್ನೊಂದು ಪಕ್ಕಕ್ಕೆ (ಪೂರ್ವಕ್ಕೆ) ಸಿಂಹ. ಶನಿಗ್ರಹ ಪಕ್ಕದಲ್ಲಿರುವ ವೃಷಭ. ಅದರಲ್ಲಿಯ ಕೆಂಪು ನಕ್ಷತ್ರ ರೋಹಿಣಿ. ನೆತ್ತಿಯಲ್ಲೇ ಕಾಣುವ ಮಹಾವ್ಯಾಧ ಒರೈಯನ್; ಸ್ವಲ್ಪ ದಕ್ಷಿಣಕ್ಕೆ ಅಗಸ್ತ್ಯ (ಕನೋಪಸ್), ಉತ್ತರದಲ್ಲಿ ವಿಜಯಸಾರಥಿ (ಅರಿಗ), ವಾಯವ್ಯದಲ್ಲಿ ಕುಂತಿ (ಕಾಸಿಯೋಪಿಯಾ), ದ್ರೌಪದಿ (ಅಂಡ್ರೋಮಿಡ), ಅರ್ಜುನ (ಪರ್ಸಿಯುಸ್) ಎಲ್ಲರೂ ರಂಗದಿಂದ ನಿರ್ಗಮಿಸುತ್ತಿರುವಂತೆ ಈಶಾನ್ಯದಲ್ಲಿ ಸಪ್ತರ್ಷಿಗಳಲ್ಲಿ ಇಬ್ಬರು ಪ್ರತ್ಯಕ್ಷರಾಗುತ್ತಾರೆ. ನಿಧಾನವಾಗಿ ಉಳಿದ ಐವರೂ ಜೊತೆಗೂಡುತ್ತಾರೆ.

ಆಕಾಶಗಂಗೆಯ ಒಂದು ಭಾಗ, ಕುಂತಿಯಿಂದ, ಅರ್ಜುನ, ಮಹಾವ್ಯಾಧ ಮೂಲಕ ಅಗಸ್ತ್ಯದ ಕಡೆಗೆ ಹರಡಿರುವುದನ್ನು ಚಂದ್ರನ ಬೆಳಕಿಲ್ಲದಾಗ ಗುರುತಿಸುವುದು ಸಾಧ್ಯವಿದೆ.

೧೮ ರಂದು ೧೬.೦೫ಕ್ಕೆ ಹುಣ್ಣಿಮೆ. ಅಂದು ಚಂದ್ರನ ಸಮೀಪ ಇರುವ ನಕ್ಷತ್ರವೇ

೪೬ನೇ ಪುಟಕ್ಕೆ



# ಕೊಲಂಬಿಯಾ ದುರಂತ
## – ಒಂದು ವಿಶ್ಲೇಷಣೆ –

**ಯಾ**ವುದೇ ಬಾಹ್ಯಾಕಾಶ ನೌಕೆ ಹಾರಿದಾಗ ಅಥವಾ ಇಳಿಯುವಾಗ ನಾಸಾ ಅಮೆರಿಕನ್ನರಿಗೆ ಅದರ ಬಗ್ಗೆ ಮುನ್ಸೂಚನೆ ಕೊಡುತ್ತದೆ. ಆಸಕ್ತಿ ಇರುವವರು ತಂತಮ್ಮ ತಾರಸಿಯಿಂದ ಈ ಹಾರಾಟವನ್ನು ನೋಡಬಹುದು. ಅಲ್ಲದೆ ಬಾಹ್ಯಾಕಾಶ ನೌಕೆಗಳು (ಉದಾಹರಣೆಗೆ ISS - ಇಂಟರ್ ನ್ಯಾಷನಲ್ ಸ್ಪೇಸ್ ಸ್ಟೇಷನ್) ನಿಮ್ಮ ಊರಿನ ಮೇಲೆ ಹಾದುಹೋಗುವ ಸಮಯಗಳನ್ನೂ ಪಟ್ಟಿ ಮಾಡಿಕೊಡುತ್ತದೆ. ನಿಮ್ಮ ಊರಿನ ಅಕ್ಷಾಂಶ, ರೇಖಾಂಶ ತಿಳಿಸಿದರೆ ಸಾಕು.

ಜನವರಿ ೨೯ರಂದು ಇಂತಹದೊಂದು ಸಂದೇಶ ಇಂಟರ್‌ನೆಟ್‌ನಲ್ಲಿ ಮೂಡಿತು. ಕೊಲಂಬಿಯಾ ಎಷ್ಟು ಗಂಟೆಗೆ ಇಳಿಯಲಿದೆ ಎಂಬುದರ ವಿವರಗಳು ಅದರಲ್ಲಿದ್ದವು. ಅನೇಕ ಹವ್ಯಾಸಿ ಖಗೋಳ ವೀಕ್ಷಕರಿಗೆ ಇದರಲ್ಲಿ ಆಸಕ್ತಿ. ಈ ಬಗೆಯ ಇಳಿತ, ನೆಗೆತಗಳ ವಿಡಿಯೋ ಅಥವಾ ಸ್ಥಿರ ಚಿತ್ರಗಳನ್ನು ತೆಗೆಯಲು ಸಿದ್ಧರಾಗುತ್ತಾರೆ. ತಾವು ನಡೆಸುತ್ತಿರುವ ವೀಕ್ಷಣೆಗಳ ಮಧ್ಯೆ ಇದನ್ನು ಸೇರಿಸಿಕೊಳ್ಳುತ್ತಾರೆ.

ಕ್ಷುದ್ರಗ್ರಹಗಳು ನಕ್ಷತ್ರಗಳನ್ನು ಮರೆ ಮಾಡುವ ಒಂದು ಬಗೆಯ ಗ್ರಹಣ (ಇದಕ್ಕೆ ಆಚ್ಛಾದನೆ Occultation ಎಂದು ಹೆಸರು) ವೀಕ್ಷಿಸಲು ಹೊರಟಿದ್ದ ಡನ್‌ಹ್ಯಾಂ ಎಂಬ ಖಗೋಲ ವೀಕ್ಷಕ ಕ್ಯಾಲಿಫೋರ್ನಿಯಾದಿಂದ ರಾತ್ರಿ ಇಡೀ ವೀಕ್ಷಣೆ ನಡೆಸಿ ಮುಗಿಸುವಾಗ ಕೊಲಂಬಿಯಾ ಇಳಿದಿದ್ದನ್ನು ಗಮನಿಸಿದರು. ವಿಡಿಯೋ ಚಿತ್ರ ತೆಗೆದು, (ಆಗ ಬೆಳಗಿನ ಜಾವ) ಮುಸುಕಿಟ್ಟು ಮಲಗಿದರು. ಎದ್ದಾಗ ದುರಂತದ ಸುದ್ದಿ ಹರಡಿತ್ತು. ತಮ್ಮ ವಿಡಿಯೋ ಪರಿಶೀಲಿಸಿದರು. ಹಿಂದಿನ ಇಳಿತಗಳಿಗೆ ಹೋಲಿಸಿದಾಗ, ವ್ಯತ್ಯಾಸ ಇರುವುದು ಕಂಡುಬಂದಿತು.

ಇನ್ನೊಬ್ಬರು ದುರ್ಬೀನಿನಿಂದ ಗಮನಿಸುತ್ತಾ ಅದರಿಂದ ಕಿಡಿಗಳು ಹೊರಟಂತೆ ಕಂಡಿತು ಎಂದುಕೊಂಡರಾದರೂ ಪರಿಶೀಲಿಸಲು ಅವಕಾಶ ಸಿಗಲಿಲ್ಲ.

ಮೌಂಟ್ ಹ್ಯಾಮಿಲ್ಟನ್‌ನಿಂದ ನಾಲ್ಕು ಬಾರಿ ಕೊಲಂಬಿಯಾ ಇಳಿತವನ್ನು ಗಮನಿಸಿದ್ದ ರಾಬಿನ್‌ಸನ್‌ಗೆ ಮಾತ್ರ ಅಪಾಯದ ಸೂಚನೆ ದೊರಕಿತ್ತು. ಕೊಲಂಬಿಯಾದ ಮೊದಲ ತುಂಡು ಹೊರಬಿದ್ದದ್ದು ೫ ಗಂಟೆ, ೫೩ ನಿಮಿಷ, ೪೫ ಸೆಕೆಂಡ್‌ಗೆ ಎಂದು ನಿಖರವಾಗಿ ಅವರಿಗೆ ತಿಳಿಯಿತು. ಅವರ ವಿಡಿಯೋ ದಾಖಲೆ ನಾಸಾಗೆ ಅತ್ಯುತ್ತಮ ಮಾಹಿತಿ ಒದಗಿಸಿತು. ಕೊಲಂಬಿಯಾ ದುರಂತದಲ್ಲಿ ಜೀವತೆತ್ತ ಏಳೂ ಮಂದಿ ನತದೃಷ್ಟರು ನೌಕಾಯಾನದಲ್ಲಿ ಪಳಗಿದ್ದವರು. ಅವರ ತರಬೇತಿ ಮತ್ತು ಅನುಭವಗಳು ಕಿರಿಯರಿಗೆ ದೊರಕದಂತಾದದ್ದು ದೊಡ್ಡ ನಷ್ಟ ಎನ್ನಬಹುದು. ವೈಯಕ್ತಿಕವಾಗಿ ಅವರ ಕುಟುಂಬಗಳಿಗೆ ಉಂಟಾದ ನಷ್ಟ ಇನ್ನೂ ಹೆಚ್ಚಿನದು. ಈ ಆಘಾತದಿಂದ ಹೊರಬರಲು ಕುಟುಂಬದ ಸದಸ್ಯರಿಗೆ ಶಕ್ತಿ ಸಿಗಲಿ ಎಂಬುದು ನಮ್ಮ ಸಹಾನುಭೂತಿಯ ನುಡಿಗಳು.

ಕೊಲಂಬಿಯಾ ನಡೆಸಿದ ೧೦೭ ಉಡ್ಡಯನಗಳಲ್ಲಿ ಅದು ದೊರಕಿಸಿಕೊಟ್ಟ ಮಾಹಿತಿ ಅಪಾರ. ಆ ಕಾರಣದಿಂದಾಗಿ ನಾಸಾದ ಹಣಕಾಸಿನ ಪರಿಸ್ಥಿತಿ ದುರ್ಬಲವಾಗಿತ್ತಾದರೂ, ಅನೇಕ ಖಾಸಗಿ ಸಂಸ್ಥೆಯವರು ಈ ಉಡ್ಡಯನಕ್ಕಾಗಿ ಹಣ ಒದಗಿಸಿದ್ದರು ಎಂಬುದು ಆಶ್ಚರ್ಯವನ್ನುಂಟುಮಾಡುತ್ತದೆಯಲ್ಲವೇ? ಭಾರತೀಯರು ಚಂದ್ರನತ್ತ ಏಕೆ ಹಾರಬೇಕು? ಅದರ ಬದಲು ಬಡವರಿಗೆ ಊಟ ಒದಗಿಸಬೇಕು ಎಂದು ಇಲ್ಲಿ ರಾಜಕಾರಣಿಗಳು ಟೀಕಿಸುವಂತೆ ಅಲ್ಲಿಯೂ ಟೀಕಿಸುವವರಿದ್ದಾರೆ. ಹಾಗಾಗಿ ನಾಸಾಗೆ ಹಣಕಾಸಿನ ಕಡಿತ ಉಂಟಾಗಿತ್ತು. ಹಿಂದೆ ಮಂಗಳಗ್ರಹಕ್ಕೆ ಹಾರಿದ ಎರಡು ನೌಕೆಗಳು ಒಂದಾದಮೇಲೊಂದು ಕಳೆದು ಹೋದಾಗಲೂ ಹೀಗೆಯೇ ಕಡಿತ ಉಂಟಾಗಿತ್ತು. ಆಗಲೂ ಖಾಸಗಿಯವರಿಂದ 'ಚಂದಾ' ಎತ್ತಿದ್ದರು.

ಕೊಲಂಬಿಯಾದಲ್ಲಿ ಈ ಬಾರಿ ನಡೆಸಿದ ಕೆಲವು ಸಫಲ ಪ್ರಯೋಗಗಳ ವರದಿಗಳು ಜನವರಿಯಲ್ಲೇ ಬಿತ್ತರವಾದವು. ಈ ಬಗ್ಗೆ ಯಾವುದೇ ಮಾಹಿತಿಯನ್ನು ನಾಸಾ ಮುಚ್ಚಿಟ್ಟಿಲ್ಲ. [illegible] ಪ್ರಯೋಗಗಳು ಜೀವವಿಜ್ಞಾನಕ್ಕೆ ಸಂಬಂಧಿಸಿದವು. [illegible] ಪ್ರಯೋಗಗಳಲ್ಲಿ ಸುಮಾರು ೪೦ ವಿಜ್ಞಾನಿಗಳಿಗಾಗಿ. ಉಳಿದವು ಖಾಸಗೀ ಉದ್ಯಮಿಗಳ ಕೋರಿಕೆ. [illegible] ನಡೆಯುವ ಪ್ರಯೋಗಗಳ ಜೊತೆಗೆ ಕೆಲವು ವಿಶೇಷ ಪ್ರಯೋಗಗಳನ್ನು ನಡೆಸಲಾಗಿತ್ತು.

ವೈರಸ್, ಬ್ಯಾಕ್ಟೀರಿಯಾ (Fungi) ಮುಂತಾದವುಗಳ ಬೆಳವಣಿಗೆ ತೂಕರಹಿತ ಸ್ಥಿತಿಯಲ್ಲಿ ಹೇಗೆ ಇರುತ್ತವೆ ಎಂಬುದರ ಕುರಿತು ಸುಮಾರು ೧೫ ಪ್ರಯೋಗಗಳು ನಡೆದಿದ್ದವು. ಇದೇ ಉದ್ದೇಶಕ್ಕಾಗಿ ಕೆಲವು ಇಲಿಗಳು (ಮತ್ತು ಏಳು ಜನ ಮಾನವರು!) ಹೊರಟಿದ್ದವು. ರಕ್ತದ ಸಂಚಾರದ ವ್ಯವಸ್ಥೆ ಅಲ್ಲದೆ ಮೂಳೆ ಮತ್ತು ಮಾಂಸಖಂಡಗಳು ತೂಕರಹಿತ ಸ್ಥಿತಿಯಲ್ಲಿ ಹೇಗೆ ವರ್ತಿಸುತ್ತವೆ ಎಂದು ತಿಳಿಸುವ ಪ್ರಯೋಗಗಳನ್ನು ನಡೆಸಲಾಗಿತ್ತು.

ಜೀವಕೋಶಗಳ ಮೇಲೆ ನಡೆಸಿದ ಪ್ರಯೋಗಗಳಲ್ಲಿ ಎರಡು ಮುಖ್ಯ ಫಲಿತಾಂಶಗಳು ಹೊರಬಿದ್ದವು. ತೂಕರಹಿತ ಸ್ಥಿತಿಯಲ್ಲಿ ಕ್ಯಾನ್ಸರ್‌ನ ಜೀವಕೋಶಗಳು ಊಹಿಸಿದ್ದಕ್ಕಿಂತ ಬೇಗ ಬೆಳೆದವು. ಬೀಜಗಳು ಮೊಳಕೆಯೊಡೆದವು. ಕೆಲವು ಪ್ರೋಟೀನುಗಳ ಕ್ಲಿಷ್ಟ ಅಣುಗಳ ರಚನೆ ಭೂಮಿಯ ಮೇಲೆ ಕಷ್ಟವಾಗಿತ್ತು. ಇವನ್ನು ತೂಕರಹಿತ ಸ್ಥಿತಿಯಲ್ಲಿ ಇನ್ನೂ ಉತ್ತಮವಾಗಿ ತಯಾರಿಸಬಹುದೇ? ಈ ಪ್ರಶ್ನೆಗೆ ಉತ್ತರ ಹುಡುಕುವ ಪ್ರಯೋಗಗಳು ನಡೆದವು. ಇದರಿಂದ ಔಷಧಿ ತಯಾರಿಕರಿಗೆ ಮಹತ್ವವಾದ ಪ್ರಯೋಜನವಿದೆ. ಕೆಲವು ಔಷಧಿಗಳನ್ನು ಸಂಸ್ಕರಿಸುವಾಗ ಅಣುಗಳ ಜೋಡಣೆಯಲ್ಲಿ ನಿಯಂತ್ರಣ ಸಾಧಿಸಲಾಗದು. ಇದರಿಂದ ಔಷಧಿಗಳನ್ನು ಸೇವಿಸುವವರಿಗೆ ಅಡ್ಡಪರಿಣಾಮಗಳು ಉಂಟಾಗುವುವು. ಯಾವ ಅಣು ಇದನ್ನು ಉಂಟುಮಾಡುತ್ತದೆ ಎಂದು ತಿಳಿಯುತ್ತದೆಯಾದರೂ ಅದನ್ನು ತೆಗೆದುಹಾಕುವ ಉಪಾಯವಿಲ್ಲ. ಆದ್ದರಿಂದ ತೂಕರಹಿತ ಸ್ಥಿತಿಯಲ್ಲಿ ಈ ಔಷಧಿಗಳನ್ನು ಸಂಸ್ಕರಿಸಿದರೆ ಹೇಗೆ? ಇದು ಪ್ರಯೋಗದ ಉದ್ದೇಶ. ಇದೇ ರೀತಿ ಕ್ಯಾನ್ಸರ್ ಅಣುಗಳು ಬೆಳೆಯುವ ವಿಧಾನ, ಮೂಳೆಯ ಕ್ಯಾನ್ಸರ್ ಹರಡುವ ರೀತಿ, ಇವನ್ನು ತಿಳಿಯುವ ಪ್ರಯೋಗಗಳಿದ್ದವು. ಕ್ಯಾನ್ಸರ್‌ಅನ್ನು ಗುಣಪಡಿಸಲು ಬಳಸಲಾಗುವ ಔಷಧಿಗಳನ್ನು ಅಲ್ಲಿ ತಯಾರಿಸಿದಲ್ಲಿ ಇನ್ನೂ ಒಳ್ಳೆಯ ಪರಿಣಾಮ ದೊರಕಬಹುದೇ? ಇದನ್ನು ಪರೀಕ್ಷಿಸಲು ಪ್ರಯೋಗವನ್ನು ನಿಯೋಜಿಸಲಾಗಿತ್ತು.

ಇಂದು ಜಾಗತಿಕ ಸಮಸ್ಯೆಯಾಗಿರುವ ಇಂಧನದ ಕುರಿತು ಅನೇಕ ಪ್ರಯೋಗಗಳನ್ನು ಕೊಲಂಬಿಯಾದಲ್ಲಿ ನಡೆಸಿದ್ದರು. ಯಾವುದೇ ಇಂಧನ ಉರಿದಾಗ, ಅನಿವಾರ್ಯವಾಗಿ ಉತ್ಪತ್ತಿಯಾಗುವ ವಸ್ತುಗಳ ಹತೋಟಿ ಸಾಧ್ಯವೇ? ಉದಾಹರಣೆಗೆ 'ಮಸಿ' ಅಂದರೆ ಇಂಗಾಲದ ಅಂಶವನ್ನು ಕಡಿಮೆ ಮಾಡಬಹುದೇ? ಅಥವಾ ಕಡಿಮೆ ಇಂಧನವನ್ನು ಬಳಸಿ ಹೆಚ್ಚಿನ ಶಕ್ತಿಯನ್ನು ಪಡೆಯಬಹುದೇ? ಈ ಕುರಿತ ಪ್ರಯೋಗಗಳು ನಡೆದವು.

ಸಾಮಾನ್ಯವಾಗಿ ದೀಪ ಎಂದ ಕೂಡಲೇ ನಮ್ಮ ಕಣ್ಣೆದುರು ಬರುವ ಚಿತ್ರಣ ನೀರಿನ ಹನಿಯ ಆಕಾರದ ಜ್ವಾಲೆ. ಅದು ಹಣತೆಯೇ ಆಗಲಿ, ಮೊಂಬತ್ತಿಯೇ ಆಗಲಿ, ಸೀಮೆ ಎಣ್ಣೆ ಬುಡ್ಡಿಯೇ ಆಗಲಿ – ಜ್ವಾಲೆಯ ಆಕಾರ ಒಂದೇ. ಬಿಸಿಯಾದ ಗಾಳಿ ಮೇಲೇರುವುದೇ ಈ ಆಕಾರಕ್ಕೆ ಮುಖ್ಯ ಕಾರಣ. ಹಾಗಾದರೆ ತೂಕರಹಿತ ಸ್ಥಿತಿಯಲ್ಲಿ ಜ್ವಾಲೆಯ ಆಕಾರ ಏನು? ಇದನ್ನು ತಿಳಿಯುವ ಪ್ರಯತ್ನ ನಡೆಯಿತು. ಅಲ್ಲಿಯ ಜ್ವಾಲೆ ಗುಂಡಗೆ ಗೋಳದಂತಿತ್ತು. ಚೆಂಡುಗಳಂತೆ ಅವು ಪ್ರಯೋಗ ನಡೆಸಿದ ಚೇಂಬರ್‌ನಲ್ಲಿ ಓಡಾಡುತ್ತಿದ್ದವು.

ಭೂಕುಸಿತ, ಭೂಕಂಪ ಮುಂತಾದ ಪ್ರಕೃತಿ ವಿಕೋಪಗಳಲ್ಲಿ ಧೂಳೀಪಟವಾಗುವ ಮನೆಗಳನ್ನು ರಕ್ಷಿಸುವ ಕಾರ್ಯಕ್ಕಾಗಿ ಇನ್ನೊಂದು ಪ್ರಯೋಗ ನಡೆಯಿತು. ಯಾವ ಬಗೆಯ ರಚನೆಯಿಂದ ಮನೆ ಕುಸಿಯದೇ ನಿಲ್ಲಬಲ್ಲುದು ಎಂದು ತಿಳಿಯುವುದೇ ಇದರ ಉದ್ದೇಶವಾಗಿತ್ತು.

ಡಾ|| ಬಿ. ಎಸ್. ಶೈಲಜಾ

ಪರಿಮಳಗಳನ್ನು ತಯಾರಿಸುವ ಅಂತರ ರಾಷ್ಟ್ರೀಯ ಸಂಸ್ಥೆಯೊಂದು ಹೊಸ ಬಗೆಯ ಪರಿಮಳವನ್ನು ಸೃಷ್ಟಿಸಲು ಪ್ರಯೋಗ ಹಾಕಿಕೊಟ್ಟಿತ್ತು. [illegible]ರಲ್ಲಿ ನಡೆಸಿದ್ದ ಪ್ರಯೋಗದಲ್ಲಿ ಅಂತರಿಕ್ಷದಲ್ಲಿ ಅರಳಿದ ಗುಲಾಬಿ ವಿನೂತನವಾದ ಸುವಾಸನೆಯನ್ನು ಪಡೆದಿತ್ತು. ಇದನ್ನು 'ಜೆನ್' ಎಂಬ ಹೆಸರಿನಿಂದ ಮಾರುಕಟ್ಟೆಗೆ ತಂದ ಸಂಸ್ಥೆ ಅಪಾರ ಲಾಭ ಪಡೆದಿತ್ತು. ಈ ಸುವಾಸನೆ ನೆಲದ ಮೇಲೆ ಸೃಷ್ಟಿಯಾಗಲಿಲ್ಲ. ಆದ್ದರಿಂದ ಪುನಃ ಈ ಪ್ರಯೋಗ ನಡೆದಿತ್ತು.

ಸುಮಾರು ೫೦೦ ಬಗೆಯ ಪ್ರೋಟೀನುಗಳನ್ನು ಸಂಸ್ಕರಿಸುವ ಪ್ರಯೋಗ ಕೊಲಂಬಿಯಾದಲ್ಲಿ ನಡೆದಿತ್ತು. ಇವೆಲ್ಲವನ್ನೂ ಮರಳಿ ಬಂದ ಮೇಲೆ ಪರಿಶೀಲಿಸಬೇಕಾಗಿತ್ತು. ಈ ಫಲಿತಾಂಶಗಳೆಲ್ಲ ಈಗ ಕಳೆದಂತೆಯೇ ಆಗಿದೆ.

ಸುಮಾರು ಹದಿನಾರು ವರ್ಷಗಳ ಹಿಂದೆ ಹಾರುವಾಗಲೇ ಸುಟ್ಟು ಹೋದ ಚಾಲೆಂಜರ್ ನೌಕೆಯಿಂದ ಪಾಠ ಕಲಿತ ನಾಸಾ ಹಾರುವಾಗ ವಹಿಸಬೇಕಾಗುವ ಸಿದ್ಧತೆಗಳ ಬಗ್ಗೆ ಪುನಃ ಪರಿಶೀಲಿಸಿ ಎಚ್ಚರ ವಹಿಸ ತೊಡಗಿತು. ಇಳಿಯುವಾಗಲೂ ಅಷ್ಟೇ ಮುನ್ನೆಚ್ಚರಿಕೆ



ವಹಿಸಬೇಕೆಂಬುದನ್ನು ಕೊಲಂಬಿಯಾ ಕಲಿಸಿದೆ. ಸಿಡಿತಕ್ಕೆ ಕಾರಣವಾದ ತಾಂತ್ರಿಕ ದೋಷಗಳ ಬಗ್ಗೆ ತನಿಖೆಗಿಂತ ಕಾಳಜಿ ಮುಖ್ಯವಾಗಿದೆ.

ನಡೆಯುವವನು ಎಡವದೇ ಇರುತ್ತಾನೆಯೇ ? ಆದ್ದರಿಂದ ಮಾನವನ ಜಿಗಿತದ ಸಂಭ್ರಮಗಳಲ್ಲಿ ಅಪಘಾತಗಳು ಉಂಟಾಗುವುದು ಸಹಜವೇ. ಆರ್ಮ್‌ಸ್ಟ್ರಾಂಗ್ ಚಂದ್ರನ ಮೇಲೆ ಕಾಲೂರುವ ಮುಂಚೆ ಅಯಶಸ್ವಿಯಾದ ಉಡ್ಡಯನಗಳದೊಂದು ದೊಡ್ಡ ಪಟ್ಟಿಯೇ ಇದೆ. ಆದರೂ "ಆತ ಚಂದ್ರನ ಮೇಲೆ ಕಾಲಿಡಲೇ ಇಲ್ಲ" ಎಂದು ಕೂಗೆಬ್ಬಿಸುವ ವಿಜ್ಞಾನಿಗಳು ಇದ್ದಾರೆ. ಇಂತಹವರು ಐವತ್ತು ವರ್ಷಗಳ ನಂತರ "ಕಲ್ಪನಾ ಚಾವ್ಲಾ ಅವರೇ, ನೀವು ನಿಜವಾಗಿಯೂ ಬಾಹ್ಯಾಕಾಶಕ್ಕೆ ಹೋಗಿದ್ದಿರಾ ?" ಎಂದು ಕೇಳುವ ಅವಕಾಶ ತಪ್ಪಿಹೋಯಿತು.

ಮೃತರ ಆತ್ಮಕ್ಕೆ ಶಾಂತಿ ಕೋರುವುದಲ್ಲದೆ ನಾವಿನ್ನೇನು ಮಾಡಲು ಸಾಧ್ಯವಿದೆ ?

ಡಾ|| ಬಿ. ಎಸ್. ಶೈಲಜಾ
ಜವಹರಲಾಲ ನೆಹರೂ ತಾರಾಲಯ, ಬೆಂಗಳೂರು-೫೬೦ ೦೦೧

## ಬಾಗಲಕೋಟೆ

ನಿಂತ ನೆಲ, ಬೆಳೆದ ಓಣಿ
ಅಜ್ಜಿಗೂ ಕತೆ ಹೇಳಿದ
ಮೌನಕ್ಕೆ ಮಾತುಕೊಟ್ಟ ಕಲ್ಲು ಗೋಡೆ;
ಜಲಸಮಾಧಿ ಮಾಡಿದ ನೀರು;
ಜಲಾ(ಆ)ಶಯಕ್ಕೆ ಬದುಕು ಬಲಿಕೊಟ್ಟು
ನೆಲ ಕಳೆದುಕೊಂಡ ಮನದಲ್ಲಿ ನೆನಪುಗಳ ಸಾವು.

ತುಂಬಿ ನಿಂತಿದೆ ನೀರು,
ಮುಳುಗಿದ ಗುಡಿಯಲ್ಲಿ
ನನ್ನ ಧ್ಯಾನದ ತೇರು;
ಬೆಚ್ಚಗಿನ ನೆನಪು
ಕಡೆದಿಟ್ಟ ಕಲ್ಲು ನಾಲ್ಕು ತಗಡು
ಹೊಟ್ಟೆ ತುಂಬಿಸಲು ಚಿಕ್ಕ ಪೆಟ್ಟಿಗೆ ಅಂಗಡಿ
ಮಳಿಗೆ ಮಾರ್ಕೆಟ್ಟಿನಲಿ ಬಗ್ಗಿ ದುಡಿವ ಉಸಿರು
ಎಲ್ಲ ಎಳ್ಳು-ನೀರು. ತ್ಯಾಗವೆಂಬ ಹೆಸರು.

ಇದು ಹೊಸ ಬದುಕು
ಸರಕಾರದ್ದು, ಸಾಮಾನು ಸರಂಜಾಮು
ಹುಳುಕು ಗಟಾರದಲಿ, ನೀರಿಲ್ಲದ ನಳ,
ದೀಪವಿಲ್ಲದ ಬೀದಿ
ಎದೆತುಂಬ ಹಳೆ ಪಾರ ನೆನಪು; ನಾಳೆಗೇನು ಹೇಳು ?!
ರಾತ್ರಿ ತುಂಬ ಬೀದಿ ನಾಯಿಗಳ ಕೂಗು.

ಸೋತ ಜೀವಗಳು ದನಿ ಬೇಡುತ್ತವೆ
ಹೈದರಾಬಾದಿನಿಂದ ಭರವಸೆ ಬರುತ್ತಿದ



ಇವತ್ತು ಖಂಡಿತ ನಾಳೆಯಾಗುತ್ತದೆ
ನಿಜ, ಆದರೆ ಬಾಗಲಕೋಟೆಗೆ ನಾಳೆ !?

ಬಸವರಾಜ ಹೂಗಾರ
ಸಹಾಯಕ ನಿರ್ದೇಶಕ, ಕನ್ನಡ ಸಂಸ್ಕೃತಿ ಇಲಾಖೆ
ಜಿ. ಟಿ. ಪಾಟೀಲ ನಗರ, ಕೊಪ್ಪಳ-೫೮೩. ೨೩೧

*೪೪ನೇ ಪುಟದಿಂದ (ನಭಾಸಕ್ತರಿಗೆ....)*

ಉತ್ತರ ಫಲ್ಗುಣಿ. ಆದ್ದರಿಂದ ಈ ತಿಂಗಳ ಹೆಸರು ಫಾಲ್ಗುಣ.

**ದಿನಚರಿ :**

- ೩ ಬೆಳಿಗ್ಗೆ ೮.೦೫ಕ್ಕೆ ಅಮಾವಾಸ್ಯೆ
- ೫-೬ ಮಂಗಳ ಗ್ರಹ ಟ್ರಿಫಿಡ್ ಮತ್ತು ಲಗೂನ್ ನೆಬ್ಯುಲಗಳ ನಡುವೆ
- ೭ ಚಂದ್ರ ಅಪಭೂ ಎಂಬ ಬಿಂದುವಿನಲ್ಲಿ, ದೂರ ಗರಿಷ್ಠ ೪೦೫,೩೮೨ ಕಿ.ಮೀ.
- ೧೧ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ಮಧ್ಯರಾತ್ರಿಗೆ)
- ೧೨ ಶುಕ್ರ ನೆಪ್ಚೂನ್ ನಡುವೆ ಕನಿಷ್ಠ ಕೋನ (೦.೨ ಡಿಗ್ರಿ)
  ಶನಿ ಮತ್ತು ಚಂದ್ರರ ನಡುವೆ ಕನಿಷ್ಠ ಕೋನ
- ೧೪ ಗುರು ಮತ್ತು ಚಂದ್ರರ ನಡುವೆ ಕನಿಷ್ಠ ಕೋನ
- ೧೮ ೧೦.೦೫ ಕ್ಕೆ ಹುಣ್ಣಿಮೆ
- ೧೯ ಚಂದ್ರ ಪುರಭೂ ಎಂಬ ಬಿಂದುವಿನಲ್ಲಿ ದೂರ ಕನಿಷ್ಠ ೩,೫೯,೮೧೭ ಕಿ. ಮೀ.
- ೨೧ ೦೬.೩೦ ಗಂಟೆಗೆ ವಿಷುವ ಬಿಂದುವನ್ನು ಸೂರ್ಯ ದಾಟುವುದು.
- ೨೫ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ಮಧ್ಯರಾತ್ರಿಯಲ್ಲಿ)
  ಚಂದ್ರ ಮತ್ತು ಮಂಗಳದ ನಡುವೆ ಕನಿಷ್ಠ ಕೋನ
- ೨೭-೨೮ ಶುಕ್ರ ಯುರೇನಸ್ ಅನ್ನು ೦.೦೫ ಡಿಗ್ರಿ ಕೋನದಿಂದ ಸಮೀಪಿಸುವುದು.
- ೨೯ ಶುಕ್ರ ಮತ್ತು ಯುರೇನಸ್ ಎರಡರಿಂದಲೂ ಕನಿಷ್ಠ ಕೋನದ ಅಂತರದಲ್ಲಿ ಚಂದ್ರ.

ಡಾ|| ಬಿ. ಎಸ್. ಶೈಲಜಾ
ಜವಹರಲಾಲ ನೆಹರೂ ತಾರಾಲಯ, ಬೆಂಗಳೂರು-೫೬೦ ೦೦೧

# ತೀವ್ರಗಾಮಿ ಪರಿಸರವಾದ

ಪ್ರೊ|| ಎಂ. ಎ. ಸೇತುರಾವ್

**ಮೊ**ಟ್ಟ ಮೊದಲು ಒಂದು ವಿಷಯವನ್ನು ಸ್ಪಷ್ಟಪಡಿಸಲು ಇಷ್ಟಪಡುತ್ತೇನೆ. ನಾನು ಒಬ್ಬ ಪರಿಸರವಾದಿ. ಆದರೆ, ಉಗ್ರ ತೀವ್ರಗಾಮಿ ಪರಿಸರವಾದಿಯಲ್ಲ. ಪರಿಸರ ಸಂರಕ್ಷಣೆ, ಪರಿಸರ ಸಮತೋಲನ, ಅರಣ್ಯ ರಕ್ಷಣೆ, ಪ್ರಾಣಿ ಪಕ್ಷಿಗಳ ರಕ್ಷಣೆ, ನಿರಂತರ ಅಭಿವೃದ್ಧಿಯ ಮಾರ್ಗಗಳು, ಪುನರುತ್ಪಾದಿಸಬಲ್ಲ ಶಕ್ತಿ ಮೂಲಗಳು – ಇವುಗಳ ಬಗ್ಗೆ ನನಗೆ ಪ್ರಬಲವಾದ ಕಾಳಜಿ ಇದೆ. ಪರಿಸರವನ್ನು ಸುಧಾರಿಸುವ ವಿಶಿಷ್ಟ ಕಾರ್ಯಕ್ರಮಗಳಲ್ಲಿ ನನಗೆ ಅಪಾರವಾದ ನಂಬಿಕೆ ಇದ್ದು, ಅವುಗಳಲ್ಲಿ ಸಕ್ರಿಯ ಪಾತ್ರವನ್ನು ವಹಿಸಿದ್ದೇನೆ. ಆದರೆ, ಹಲವು ಉಗ್ರ ಪರಿಸರವಾದಿಗಳ ತಾತ್ವಿಕ ಧೋರಣೆಯನ್ನು ಮಾತ್ರ ಕಟುವಾಗಿ ವಿಮರ್ಶಿಸುವುದು ಈ ಲೇಖನದ ಉದ್ದೇಶ.

ಪರಿಸರ ದೃಷ್ಟಿಯಿಂದ, ನಾವು ವಾಸಿಸುತ್ತಿರುವ ಜೀವಗೋಳವನ್ನು ಅವಲೋಕಿಸಿದರೆ ಪರಿಸ್ಥಿತಿ ಸರಿಯಾಗಿಲ್ಲವೆಂಬುದು ಸತ್ಯಸಂಗತಿಯಾಗಿದೆ. ಪರಿಸರದ ಇಂದಿನ ಪರಿಸ್ಥಿತಿಗೆ ಮೂಲಭೂತವಾಗಿ ವಿಜ್ಞಾನ ಹಾಗೂ ತಂತ್ರಜ್ಞಾನ, ಅಷ್ಟೇಕೆ ೧೭ನೇ ಶತಮಾನದಲ್ಲಿ ವಿಜೃಂಭಿಸಿದ ವೈಜ್ಞಾನಿಕ ಕ್ರಾಂತಿ ಮೂಲಕಾರಣವೆಂದು ಉಗ್ರ ಪರಿಸರವಾದಿಗಳ ಗುಂಪೊಂದು ವಿಶ್ಲೇಷಿಸುತ್ತಿದೆ. ಹಲವು ತಂತ್ರಜ್ಞಾನ ಆಧಾರಿತ ಕೈಗಾರಿಕೆಗಳು ಪರಿಸರದ ಅವನತಿಗೆ ಕಾರಣವೆಂಬುದನ್ನು ಅಲ್ಲಗಳೆಯಲಾಗದು: ಹೀಗೆಂದು ವಿಜ್ಞಾನವನ್ನೇ ಮೂಲೆಗುಂಪು ಮಾಡಿದರೆ, ಮಾನವನ ಅಭ್ಯುದಯಕ್ಕೆ ಮತ್ತೊಂದು ದಾರಿ ಯಾವುದು ಎಂಬ ಪ್ರಶ್ನೆ ಸಹಜವಾಗಿ ನಮ್ಮನ್ನು ಕಾಡಿಸುತ್ತದೆ. ವಿಜ್ಞಾನದ ಮೇಲೆ ಗೂಬೆ ಕೂರಿಸುವ ಪ್ರಯತ್ನ ಸರ್ವಥಾ ಸಮರ್ಥನೀಯವಲ್ಲ. ವೈಜ್ಞಾನಿಕ ಸಾಧನೆಗಳೇ ನಮ್ಮ ಭೂಗ್ರಹಕ್ಕೆ ಮಾರಕವಾಗಿವೆಯೆಂದು ತೀವ್ರಗಾಮಿ ಪರಿಸರವಾದಿಗಳು ವಾದಿಸುವುದು ಸರಿಯಲ್ಲ. ಕೆಲವರಂತೂ ತರ್ಕಾಧಾರಿತ ವೈಚಾರಿಕತೆಯನ್ನೇ ದೂರುವುದುಂಟು. ೧೭ ಮತ್ತು ೧೮ನೇ ಶತಮಾನಗಳಲ್ಲಿ ವಿಕಾಸವಾದ ವೈಜ್ಞಾನಿಕ ಚಿಂತನಾ ಮಾರ್ಗವೇ ಇಂದಿನ ಪರಿಸರ ನಾಶಕ್ಕೆ ಕಾರಣವೆಂದು ಹಲವು ಉಗ್ರ ಪರಿಸರವಾದಿಗಳು ಹೇಳಿರುವುದು ದುರದೃಷ್ಟಕರ. ೨೦ನೇ ಶತಮಾನದಲ್ಲಿ ಪ್ರಚಲಿತವಾದ ಬಹುತೇಕ ತಂತ್ರಜ್ಞಾನಗಳು ಇಂದಿನ ಪರಿಸರದ ಅವನತಿಗೆ ಕಾರಣವೆಂಬುದನ್ನು ಸಮರ್ಥಿಸುವುದು ಸರಿಯಷ್ಟೆ. ಆದರೆ, ಈ ತಂತ್ರಜ್ಞಾನಗಳ ಅಭಿವೃದ್ಧಿಗೆ ಕಾರಣವಾದ ವೈಜ್ಞಾನಿಕ ಯೋಚನಾ ಮಾರ್ಗ ಮತ್ತು ತಾರ್ಕಿಕ ಮನೋಭಾವಗಳನ್ನು ಬಳಸಿಕೊಂಡೇ ಪರಿಸರದ ಅವನತಿಯನ್ನು ತಡೆಗಟ್ಟಲು ಸಾಧ್ಯ. ಭೂಗ್ರಹದ ಸಮಸ್ಯೆಗಳನ್ನು ಅರ್ಥೈಸಲು ಮತ್ತು ಪರಿಹಾರಗಳನ್ನು ಕಂಡುಕೊಳ್ಳಲು ವೈಜ್ಞಾನಿಕ ದೃಷ್ಟಿ ಅತ್ಯಗತ್ಯವೆಂಬುದನ್ನು ನಾವು ಅರಿಯಬೇಕು. ಇಂದಿನ ಜಗತ್ತಿನ ಜನಸ್ತೋಮಕ್ಕೆ ಸುಖೀಜೀವನ ಒದಗಿಸಬೇಕಾದರೆ, ಪರಿಸರವನ್ನು ನಾಶಮಾಡದಿರುವ ನವ್ಯ ತಂತ್ರಜ್ಞಾನಗಳ ಆವಿಷ್ಕಾರವಾಗಬೇಕು. ಪರ್ಯಾಯ ಹಾಗೂ ಶಾಶ್ವತ ಅಭಿವೃದ್ಧಿಯನ್ನು ಸಾಧಿಸಲು ಸಹಾಯಕವಾಗುವ ತಂತ್ರಜ್ಞಾನಗಳ ಜರೂರು ಅಗತ್ಯವಿದೆ. ಅಂತೆಯೇ ಶಕ್ತಿಯ ಉತ್ಪಾದನೆಗೆ ಸೌರಕಿರಣಗಳನ್ನೂ, ಗಾಳಿ ಗಿರಣಿಗಳನ್ನೂ, ಜೈವಿಕ ಅನಿಲ ಸ್ಥಾವರಗಳನ್ನೂ, ಇಂಧನ ಕೋಶಗಳನ್ನೂ ಅವಲಂಬಿಸುವುದು ಸೂಕ್ತ ಪರ್ಯಾಯ ಮಾರ್ಗವೆನಿಸುತ್ತದೆ. ವಿಜ್ಞಾನ ಮತ್ತು ತಾರ್ಕಿಕತೆಯನ್ನು ದೂಷಿಸುವ ಉಗ್ರ ಪರಿಸರವಾದಿಗಳು ಪರಿಸರದ ಅಭಿವೃದ್ಧಿಗೆ ಮಾರ್ಗೋಪಾಯಗಳನ್ನು ಒದಗಿಸುವ ತಂತ್ರಜ್ಞಾನಗಳನ್ನು ಪ್ರೇರೇಪಿಸದೆ ಪರಿಸರ ರಕ್ಷಣೆಯ ಕಾರ್ಯಕ್ಕೇ ಅಪಚಾರ ಮಾಡಿದಂತಾಗುತ್ತದೆ. ಈ ಸಂದರ್ಭದಲ್ಲಿ ಶಿವ ವಿಶ್ವನಾಥನ್ ಅವರು 'ಪ್ರತಿಭೆಯ ಒಂದು ಪ್ರವಾಹ' ಎಂಬ ಪುಸ್ತಕದಲ್ಲಿ ಬರೆದಿರುವ ಈ ವ್ಯಾಖ್ಯಾನವನ್ನು ಗಮನಿಸಬಹುದಾಗಿದೆ: ''ವಿಜ್ಞಾನವು ಜೀವಜೀವಿಗಳನ್ನು ಅರ್ಥಮಾಡಿಕೊಳ್ಳಲು ವಿಫಲವಾಗಿದೆ; ಬದುಕಿಗೆ ಭದ್ರತೆಯನ್ನು ಕೊಡಲಾಗದೇ ಸೋತಿದೆ. ಈ ವಿಜ್ಞಾನವು ಎಲ್ಲ ರೀತಿಯ ಪಾವಿತ್ರ್ಯದ ಕಲ್ಪನೆಗಳನ್ನೂ ಕಳೆದುಕೊಂಡು ಇವತ್ತು ತಾರ್ಕಿಕ ಯಜಮಾನಿಕೆಯ, ಮೌಲ್ಯ ನಿರಪೇಕ್ಷವಾದ, ಛಿದ್ರ ವ್ಯಕ್ತಿತ್ವವುಳ್ಳ ದರ್ಶನವಾಗಿ ಮಾರ್ಪಟ್ಟಿದೆ. ಆದ್ದರಿಂದ ಅದೇ ಇವತ್ತು ಎಲ್ಲಕ್ಕಿಂತಲೂ ದೊಡ್ಡ ಪರಿಸರ ವಿರೋಧಿ ಶಕ್ತಿಯಾಗಿ ಸ್ಥಾಪಿತವಾಗಿದೆ.''

ಉಗ್ರ ಪರಿಸರವಾದಿಗಳ ಹಲವು ಧೋರಣೆಗಳನ್ನು ಗಮನಿಸಿದಾಗ ಅಲ್ಲಲ್ಲಿ ಐತಿಹಾಸಿಕ ನಿರೂಪಣೆಯ ದೋಷಗಳನ್ನೂ ಕಾಣಬಹುದು. ಸಾವಿರಾರು ವರ್ಷಗಳ ಹಿಂದೆ ನಮ್ಮ ಭೂಗ್ರಹದ ಭೌಗೋಳಿಕ ಪರಿಸರದಲ್ಲಿ ಮನುಕುಲ ನಿಸರ್ಗದೊಂದಿಗೆ ಅತ್ಯಂತ ಸ್ನೇಹಮಯಿ ಸಂಬಂಧವನ್ನು ಹೊಂದಿತ್ತೆಂದು ಹಲವರು ಹೇಳುವುದನ್ನು ನಾವು ಕೇಳಿದ್ದೇವೆ. ಪ್ರಾಚೀನ ಸನ್ನಿವೇಶದಲ್ಲಿ ಮಾನವ ಮತ್ತು ನಿಸರ್ಗ ಸಮತೋಲನದಲ್ಲಿದ್ದು ಪರಸ್ಪರ ವೈರುಧ್ಯಗಳೇ ಇರಲಿಲ್ಲವೆಂಬ [illegible] ಇವರಲ್ಲಿದೆ. ಮನುಕುಲ (ಹೊಮೊ ಸೇಪಿಯನ್‌ರು) ತನ್ನ ಬದುಕಿಗಾಗಿ ಪ್ರಕೃತಿಯೊಂದಿಗೆ ಸೆಣಸಾಟ ನಡೆಸುತ್ತಿರಲಿಲ್ಲವೆ ?

ಹಾಗೊಂದು ಪೂರ್ವಕಾಲದಲ್ಲಿ ಮನುಕುಲ ಮತ್ತು ಪ್ರಕೃತಿಯ ನಡುವೆ ಮಧುರ ಬಾಂಧವ್ಯವಿದ್ದರೆ, ಇದು ನಶಿಸಿಹೋಗಲು ಕಾರಣವೇನು ? ಯಾವ ಶತಮಾನದಲ್ಲಿ ಇದು ನಾಶವಾಯಿತು ? ಇಂಥ ಪ್ರಶ್ನೆಗಳು ಸಹಜವಾಗಿಯೇ ಏಳುತ್ತವೆ. ಉಗ್ರ ಪರಿಸರವಾದಿಗಳ ಚಿಂತನೆಯ ಪ್ರಕಾರ ಪ್ರಕೃತಿಯ ಬಗ್ಗೆ ಮನುಷ್ಯ ತಾಳಿದ ಆಲೋಚನಾಕ್ರಮವೇ ಪ್ರಧಾನ ಕುತ್ತಾಗಿ ಪರಿಣಮಿಸಿದೆ. ಇಂಥ ಆಲೋಚನಾಕ್ರಮಕ್ಕೆ ವೈಜ್ಞಾನಿಕ ಮಾರ್ಗ ತಳಹದಿಯನ್ನು ಹಾಕಿತು ಎಂಬುದು ಅವರ ಸಿದ್ಧಾಂತ.

ಎಷ್ಟೇ ರಾಜಕೀಯ ಸುಧಾರಣೆಗಳಾದರೂ, ತಾಂತ್ರಿಕ ಪ್ರಗತಿಯಾದರೂ ಪ್ರಕೃತಿಯ ಮೇಲೆ ಮಾನವ ಸಾರ್ವಭೌಮತ್ವವನ್ನು ಸಾಧಿಸುವ ದೃಷ್ಟಿಕೋನದ ಬದಲಾವಣೆಯಾಗದಿದ್ದರೆ ಪರಿಸರ ನಾಶವನ್ನು ತಡೆಗಟ್ಟಲಸಾಧ್ಯವೆಂದು ಅನೇಕ ಪರಿಸರವಾದಿಗಳ ಅಭಿಪ್ರಾಯವಾಗಿದೆ. ಮಾನವನ ಚಿಂತನಾಕ್ರಮದ ಸಂಪೂರ್ಣ ಬದಲಾವಣೆಯಾಗದೆ ಪರಿಸರ ಸಂರಕ್ಷಣೆ ಸಾಧಿಸಲಾಗದೆಂಬುದು ಪರಿಸರ ತತ್ವಜ್ಞಾನಿಗಳ ಸ್ಪಷ್ಟ ನಿಲುವು. ೧೭ನೇ ಮತ್ತು ೧೮ನೇ ಶತಮಾನಗಳಲ್ಲಿ ಯುರೋಪಿನಲ್ಲಿ ಆರಂಭವಾದ ವೈಜ್ಞಾನಿಕ ಕ್ರಾಂತಿ ಅಟ್ಟಕ್ಕೇರಿಸಿದ ತಾರ್ಕಿಕತೆಯೇ ಇಂದಿನ ಸಂಕಷ್ಟಗಳಿಗೆ ಕಾರಣವೆಂದು ಅವರ ಅನಿಸಿಕೆಯಾಗಿದೆ. ಫ್ರಾನ್ಸಿಸ್ ಬೇಕನ್, ನ್ಯೂಟನ್, ಗೆಲಿಲಿಯೊ ಮತ್ತು ಡೆಕಾರ್ಟ್ ಈ ಅನಾಹುತಕ್ಕೆ ಕಾರಣರಾದ ಪ್ರಮುಖರೆಂದು 'ಈಕೊ' ತತ್ವಜ್ಞಾನಿಗಳು ಗುರುತಿಸಿದ್ದಾರೆ. ಆಧುನಿಕ ಚಿಂತಕರಾದ ಇವರು ನಮ್ಮ ಭೂಗ್ರಹವನ್ನು 'ವೈಚಾರಿಕತೆ'ಯ ಅಸ್ತ್ರದಿಂದ ನಾಶಪಡಿಸಿದ್ದಾರೆಂದು 'ಈಕೊ' ತತ್ವಜ್ಞಾನಿಗಳು ದೂರುತ್ತಾರೆ. ಹಿಂದೆ ಗೌರವದಿಂದ ಕಂಡು ಸಜೀವ ಘಟಕವೆಂದು ಪೂಜಿಸುತ್ತಿದ್ದ ಭೂಮಿಯನ್ನು ಆಧುನಿಕ ಚಿಂತಕರು ತಮ್ಮ ಶುಷ್ಕ ಹಾಗೂ ನೀರಸ ಯಾಂತ್ರಿಕತೆಯಿಂದ ನಾಶಪಡಿಸಿದ್ದಾರೆಂದು 'ಈಕೊ' ತತ್ವಜ್ಞಾನಿಗಳ ಪ್ರಚಾರ ನಡೆದಿದೆ. ಪ್ರಕೃತಿಯು ನಿರ್ಜೀವಿ ಘಟಕವೆಂದು ಸಾರಿದ ನಂತರ ಅದರ ಮೇಲೆ ಪ್ರಭುತ್ವ ಹೇರುವುದು ಸುಲಭವಾಯಿತೆಂದು ಇವರ ವಾದ. ಹೀಗೆ ತಾರ್ಕಿಕತೆಯ (ರೀಸನ್) ಉದ್ಧಟತನ ಉದ್ಭವವಾಯಿತೆಂದು ಹೇಳಲಾಗಿದೆ. ತಾರ್ಕಿಕತೆಯನ್ನೇ ಅಲ್ಲಗಳೆದರೆ ಪರಿಸರದ ಸಮಸ್ಯೆಗಳನ್ನು ಅರ್ಥೈಸುವುದಾಗಲಿ, ಪರಿಹಾರ ಒದಗಿಸುವುದಾಗಲಿ ಹೇಗೆ ಸಾಧ್ಯ? ತಾರ್ಕಿಕತೆ ಮನುಕುಲದ ಅಮೂಲ್ಯ ಆಸ್ತಿ ಮತ್ತು ಪ್ರಗತಿಯ ಬುನಾದಿ ಎಂಬುದನ್ನು ಹಲವು ಪರಿಸರವಾದಿಗಳು ಮರೆತಿದ್ದಾರೆಂದು ಭಾವಿಸೋಣವೆ? ಉಗ್ರ ಪರಿಸರವಾದಿಗಳು ಇಂದಿನ ಪರಿಸರ ಪರಿಸ್ಥಿತಿಗೆ ವೈಜ್ಞಾನಿಕ ಕ್ರಾಂತಿ, ಔದ್ಯೋಗಿಕ ಕ್ರಾಂತಿ, ಅಷ್ಟೇಕೆ ತಾರ್ಕಿಕತೆಯೇ ಮೂಲ ಕಾರಣವೆಂದು ವಾದಿಸುತ್ತಾರೆ. ರೂಪರ್ಟ್ ಶೆಲ್‌ಡ್ರೇಕ್ ಎಂಬಾತ ಗೆಲಿಲಿಯೊ ಕಾಲದ ಭೌತ ವಿಜ್ಞಾನಕ್ಕೂ ಅಮೆರಿಕಾದ ಕಾಡುಕೋಣಗಳ ಸಾಮೂಹಿಕ ಹತ್ಯೆಗೂ ಸಂಬಂಧ ಕಲ್ಪಿಸಿದ್ದಾನೆ! ಹೊಸ ಒಡಂಬಡಿಕೆಯ (ಬೈಬಲ್) ಕಾಲದಿಂದಲೇ ಪರಿಸರ ನಾಶವಾಗುವುದರ ಬೇರನ್ನು ಹಲವು ಪರಿಸರವಾದಿಗಳು ಗುರುತಿಸಿರುವುದೂ ಉಂಟು. ಇವರೆಲ್ಲ ಪಾಶ್ಚಿಮಾತ್ಯ ದೇಶಗಳ, ಅದರಲ್ಲೂ, ಯುರೋಪಿನ ಸ್ಥಿತಿಗತಿಗಳನ್ನು ಕುರಿತು ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಿದ್ದಾರೆ. ಇಸ್ಲಾಮ್ ಹಬ್ಬಿರುವ ದೇಶಗಳ ಬಗ್ಗೆಯಾಗಲಿ ಆಫ್ರಿಕಾ ಖಂಡದ ದೇಶಗಳನ್ನು ಕುರಿತಾಗಲಿ ಏನನ್ನೂ ಹೇಳದಿರುವುದು ದೋಷವೆಂದು ಪರಿಗಣಿಸಬಹುದು. ಹೊಸ ಶಿಲಾಯುಗದ ಅವಧಿಯಲ್ಲಿ ಆರಂಭವಾದ ಕೃಷಿಯಿಂದಲೇ ಪರಿಸರದ ಅವನತಿ ಮೊಳಕೆಯಾಯಿತೆಂಬ ಕಲ್ಪನೆಯನ್ನೂ ಹಲವು ಪರಿಸರವಾದಿಗಳಲ್ಲಿ ಕಾಣಬಹುದು. ಬೇಟೆಯಾಡುತ್ತ, ಆಹಾರವನ್ನು ಆಯ್ದುಕೊಂಡು ಜೀವಿಸುತ್ತಿದ್ದ ಪ್ರಾಚೀನ ಬುಡಕಟ್ಟು ಜನಾಂಗದವರು ಪರಿಸರದೊಂದಿಗೆ ಅತ್ಯುತ್ತಮ ಹಾಗೂ ಸೌಹಾರ್ದಯುತ ಬಾಳ್ವೆಯನ್ನು ಹಮ್ಮಿಕೊಂಡಿದ್ದರೆಂದೂ ಪರಿಸರವಾದಿಗಳ ಒಂದು ತಂಡದ ವಿಚಿತ್ರ ಭಾವನೆ. ಅ[illegible] ಪಾಪ, ಅವರು ಸ್ವರ್ಗಸುಖವನ್ನು ಅನುಭವಿಸುತ್ತಿದ್ದರಂತೆ! ಅಂಥ ಕಾಲ ಮರುಕಳಿಸಲಿ ಎಂದೂ ಹಲವರು ಪ್ರಾರ್ಥಿಸುತ್ತಿದ್ದಾರೆ. ಆಧುನಿಕ ನಾಗರೀಕತೆಯು ಪಾಶ್ಚಾತ್ಯ ದೇಶಗಳ ಕೊಡುಗೆಯೆಂದು ಗುರುತಿಸಿದ ಈ ಪಂಥದ

ಚಿಂತಕರು ಸಹಜವಾಗಿಯೇ ಬೌದ್ಧ ಮತ್ತು ಹಿಂದು ಸಂಸ್ಕೃತಿಗಳನ್ನು ಉತ್ಪ್ರೇಕ್ಷಿಸಿ ಮಾದರಿ ಸಂಸ್ಕೃತಿಗಳೆಂದು ಅಟ್ಟಕ್ಕೇರಿಸುತ್ತಾರೆ. ಬೌದ್ಧ ಮತ್ತು ಹಿಂದು ಸಂಸ್ಕೃತಿಗಳಲ್ಲಿ ಯಾವ ಅಂಶಗಳನ್ನು ಇವರು ಮೆಚ್ಚುತ್ತಾರೆಂಬುದು ನಿಗೂಢವಾಗಿಯೇ ಉಳಿಯುತ್ತದೆ.

ಮಾನವನ ವೈಚಾರಿಕತೆಯ ಇತಿಹಾಸದಲ್ಲಿ ೧೭ನೇ ಶತಮಾನ ಪ್ರಮುಖ ಸ್ಥಾನವನ್ನು ಪಡೆದಿರುವುದರಲ್ಲಿ ಸಂದೇಹವಿಲ್ಲ. ಅನಂತರದ ಬೆಳವಣಿಗೆಗಳಿಂದ ಪರಿಸರದ ಮೇಲೆ ಅಗಾಧ ಪರಿಣಾಮವಾಗಿದೆಯೆಂಬುದನ್ನು ಒಪ್ಪುತ್ತೇನೆ. ಆದರೆ, ಪರಿಸರದ ವರ್ತಮಾನ ಸ್ಥಿತಿಗೆ ವಿಚಾರ ಕ್ರಾಂತಿ ಕಾರಣ ಎಂಬ ತರ್ಕವನ್ನು ಒಪ್ಪಲಾರೆ. ಡೆಕಾರ್ಟ್ ಮತ್ತು ಬೇಕನ್‌ರ ವಿಚಾರಧಾರೆ ಪರಿಸರ ವಿನಾಶಕ್ಕೆ ಮೂಲಭೂತ ಅಡಿಪಾಯವನ್ನು ಹಾಕಿತೆಂಬುದನ್ನೂ ಒಪ್ಪಲಿಕ್ಕೆ ಸಾಧ್ಯವಿಲ್ಲ. ೧೮ನೇ ಮತ್ತು ೧೯ನೇ ಶತಮಾನಗಳಲ್ಲಿ ನಡೆದ ಔದ್ಯೋಗಿಕ ಕ್ರಾಂತಿ ಸಹ ೧೭ನೇ ಶತಮಾನದ ವೈಜ್ಞಾನಿಕ ವಿಚಾರ ಕ್ರಾಂತಿಯ ನೇರ ಫಲಿತಾಂಶವೆಂದೂ ಹೇಳಲಾಗದು. ಔದ್ಯೋಗಿಕ ಹಾಗೂ ಕೈಗಾರಿಕಾ ಕ್ರಾಂತಿಗಳಿಗೆ ಕಲ್ಲಿದ್ದಲಿನ ನಿಕ್ಷೇಪದ ಬಳಕೆ ಪ್ರಧಾನ ಕಾರಣವೆಂದು ಗುರುತಿಸಬಹುದು. ಹೀಗಾಗಿ ಪರಿಸರಕ್ಕೆ ಹಾನಿಯುಂಟು ಮಾಡುವ ತಂತ್ರಜ್ಞಾನಗಳ ಅಭಿವೃದ್ಧಿ ೧೯ನೇ ಶತಮಾನದ ಪೂರ್ವಾರ್ಧದಲ್ಲಿ ಕಾಣಬಹುದು. ಒಟ್ಟಿನಲ್ಲಿ ವೈಜ್ಞಾನಿಕ ಕ್ರಾಂತಿ ಇಂದಿನ ಪರಿಸರದ ದುಃಸ್ಥಿತಿಗೆ ನೇರ ಕಾರಣವೆಂದು ದೂಷಿಸುವುದು ಸರಿಯಲ್ಲ. ಆಧುನಿಕ ವಿಜ್ಞಾನ ಪೋಷಿತ ತಂತ್ರಜ್ಞಾನ ನಿಸರ್ಗದ ಮೇಲೆ ಅಗಾಧ ಪರಿಣಾಮವನ್ನುಂಟು ಮಾಡಿದೆ. ಈ ತೀರ್ಮಾನದಲ್ಲಿ ಸಂದೇಹಕ್ಕೆ ಎಡೆ ಇಲ್ಲ. ಜನತೆಯ ಅಭ್ಯುದಯ ಮತ್ತು ಸುಖಜೀವನವನ್ನು ಗುರಿ ಇಟ್ಟುಕೊಂಡು ಬಹುತೇಕ ತಂತ್ರಜ್ಞಾನಗಳ ಆವಿಷ್ಕಾರವಾಗಿದೆಯೆಂಬ ಅಂಶವನ್ನೂ ನಾವು ಪರಿಗಣಿಸಬೇಕಾಗಿದೆ. ಒಮ್ಮೊಮ್ಮೆ ವಿಪರೀತ ದುರಾಶೆಗೂ ಇವು ಕಾರಣವಾಗಿರಬಹುದು. ಆವಿಷ್ಕಾರಕರು ತತ್ವಜ್ಞಾನ ಹಾಗೂ ಮೂಲ ವಿಜ್ಞಾನದ ಪರಿಚಯವಿಲ್ಲದವರಾಗಿರಬಹುದು. ಪಾಶ್ಚಿಮಾತ್ಯ ತತ್ವಜ್ಞಾನ ಮತ್ತು ಇತಿಹಾಸದ ವಿಷಯಗಳನ್ನು ಉಗ್ರಗಾಮಿ ಪರಿಸರವಾದಿಗಳು ತಮಗೆ ತೋಚಿದಂತೆ ತಿರುಚಿದ್ದಾರೆಂಬುದು ಸ್ಪಷ್ಟವಾಗುತ್ತದೆ. ಆಧುನಿಕತೆಯನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲಿಸಿ ಪ್ರಾಚೀನವಾದದ್ದೆಲ್ಲವೂ ಚೆನ್ನ ಎಂಬ ಧೋರಣೆಗೆ ಉಗ್ರಗಾಮಿಗಳು ಬಂದಿದ್ದಾರೆ.



ವೈಚಾರಿಕತೆಯನ್ನು ಟೀಕಿಸುವಾಗ ಉಗ್ರ ಪರಿಸರವಾದಿಗಳು ಪಾಶ್ಚಾತ್ಯ ದೇಶಗಳ ಇತಿಹಾಸವನ್ನು ಮಾತ್ರ ಉದ್ಧರಿಸುತ್ತಾರೆ. ವೈಚಾರಿಕತೆ ಕೇವಲ ಪಶ್ಚಿಮ ಯುರೋಪಿನ ಸ್ವತ್ತಲ್ಲವೆಂಬುದು ಇಂದಿನ ದಿನಗಳಲ್ಲಿ ಎಲ್ಲರಿಗೂ ತಿಳಿದ ಸಂಗತಿಯಾಗಿದೆ. ಇತಿಹಾಸದ ದೃಷ್ಟಿಯಿಂದ ನೋಡಿದರೆ ಪ್ರತಿಯೊಂದು ನಾಗರಿಕತೆಯಲ್ಲೂ ವೈಚಾರಿಕತೆ ಮತ್ತು ಅವೈಚಾರಿಕತೆ ಜೊತೆ ಜೊತೆಯಾಗಿರುವುದು ಕಂಡುಬರುತ್ತದೆ. ಇವುಗಳ ನಡುವೆ ಸಂಘರ್ಷ ಅಂದಿನಿಂದಲೂ ಸಾಗಿದೆ. ಹಾಗೆಯೇ ಪರಿಸರನಾಶ ಎಲ್ಲ ನಾಗರಿಕತೆಗಳಲ್ಲೂ ವಿವಿಧ ಪ್ರಮಾಣದಲ್ಲಿ ಆಗಿರುವುದಕ್ಕೆ ಇತಿಹಾಸದಿಂದ ಸಾಕಷ್ಟು ಪುರಾವೆಗಳನ್ನು ಒದಗಿಸಬಹುದು. ಯುರೋಪಿನಲ್ಲಿ ಪರಿಸರದ ನಾಶ ಆಗಿರುವಂತೆ ಏಷ್ಯಾ ಮತ್ತು ಚೀಣಾದಲ್ಲೂ ನಾವು ಗುರುತಿಸಬಹುದು.

ಉದಾಹರಣೆಗೆ, ಚೀಣಾದ ಬಗ್ಗೆ ಇತಿಹಾಸಕಾರರು ಹೇಳಿರುವುದನ್ನು ಗಮನಿಸೋಣ. ಪೀಟರ್ ಪರ್ಡ್ಯು ವಿವರಣೆ ಹೀಗಿದೆ: ''ಬೆಟ್ಟ ಪ್ರದೇಶಗಳಲ್ಲಿನ ಗಿಡಮರಗಳನ್ನು ಕಡಿದು ಹಾಕಿ ಮತ್ತು ಜೌಗು ಪ್ರದೇಶಗಳಲ್ಲಿನ ನೀರನ್ನು ತೆಗೆದು ಹಾಕಿ ಕೃಷಿಗೆ ಯೋಗ್ಯವಾಗುವಂತೆ ಭೂಮಿಯನ್ನು ಸುಧಾರಿಸಲಾಯಿತು. ಬೇಸಾಯ ಹರಡಿದಂತೆ ಬಿದರಿನ ಅರಣ್ಯಗಳು ಬೋಳಾದುವು. ೧೭೨೦ ರಿಂದ ೧೭೬೦ರ ಅವಧಿಯಲ್ಲಿ ಹಾನ್ ಜನಾಂಗ ಸಾಂಗ್ಲಿ ಪ್ರದೇಶದಲ್ಲಿದ್ದ ಹುಲಿಗಳನ್ನೂ, ಚಿರತೆಗಳನ್ನೂ ನಾಶಮಾಡಿ ಭೂಮಿಯನ್ನು ವ್ಯವಸಾಯಕ್ಕೆ ಸಿದ್ಧಪಡಿಸಿದರು. ಅಂತೆಯೇ ಸಾಂಗ್ಲಿ ಪ್ರಾಂತ್ಯದಲ್ಲಿ ಕಾಡುಪ್ರಾಣಿಗಳು ನಾಶವಾಗಿ ಬೆಟ್ಟಗುಡ್ಡಗಳಲ್ಲೂ ಬೇಸಾಯ ಆರಂಭವಾಯಿತು.''

ಚೀಣ ಮತ್ತು ಕೊರಿಯ ದೇಶಗಳ ಸಾಂಪ್ರದಾಯಿಕ ಆಹಾರ ಪದ್ಧತಿಗಳಿಂದ ಸಹ ಅನೇಕ ಪ್ರಾಣಿವರ್ಗಗಳು ವಿನಾಶದ ಅಂಚಿಗೆ ಬಂದಿದ್ದವು. ಹಿಂದೆ ಚೀಣಾದಲ್ಲಿ ಜೀವಂತ ಕೋತಿಗಳ ಮಿದುಳನ್ನು ಹೆಕ್ಕಿ ತೆಗೆದು ಭಕ್ಷ್ಯಕ್ಕೆ ಬಳಸುತ್ತಿದ್ದರು. ಜೀವಂತ ಕರಡಿಗಳ ಮೇಲೆ ಕರಡಿಗಳ ಹಸ್ತಗಳನ್ನಿಟ್ಟು ಬೇಯಿಸಿ ತಿನ್ನುತ್ತಿರುವುದಕ್ಕೆ ದಾಖಲೆಗಳಿವೆ. ಹುಲಿಗಳ ಗುಪ್ತಾಂಗಗಳನ್ನು ಔಷಧಗಳಿಗೆ ಉಪಯೋಗಿಸುತ್ತಿದ್ದುದೂ ಉಂಟು. ಒಟ್ಟಿನಲ್ಲಿ ಹೇಳುವುದಾದರೆ ವಿಜ್ಞಾನವಾಗಲಿ, ಪರಿಸರ ನಾಶವಾಗಲಿ ಪಶ್ಚಿಮ ದೇಶಗಳಿಗೆ ಮಾತ್ರ ಸೀಮಿತವಾಗಿರಲಿಲ್ಲ. ಪಾಶ್ಚಾತ್ಯ ನಾಗರಿಕತೆಯಲ್ಲಿ ಈ ದುರಂತಕ್ಕೆ ಕಾರಣಗಳನ್ನು ಹುಡುಕಿದರೆ ಸಾಲದು. ಪಾಶ್ಚಾತ್ಯ ದೇಶಗಳಲ್ಲಿ ಪ್ರಚಲಿತವಾದ ತತ್ವಜ್ಞಾನ ಹಾಗೂ ಆಧುನಿಕತೆಯೇ ಮೂಲ ಕಾರಣವೆಂದು ಹೇಳುವುದು ಇತಿಹಾಸವನ್ನು ಕಡೆಗಣಿಸಿದಂತೆಯೇ ಸರಿ.

ಆಧುನಿಕ ವಿಜ್ಞಾನಕ್ಕೆ ಈಗಿರುವ ಪ್ರಾಮುಖ್ಯತೆ ತೊಲಗಬೇಕೆಂದೂ ಹಲವು ಪರಿಸರವಾದಿಗಳು ತರ್ಕಿಸುವುದು ಕಂಡುಬಂದಿದೆ. ಈ ಜಾಡನ್ನೇ ಪರಿಸರವಾದಿಗಳು ಹಿಡಿದರೆ, ಪರಿಸರ ರಕ್ಷಣೆಗೆ ಸಹಾಯಕವಾಗುವ ಪರಿಸರ ವಿಜ್ಞಾನಕ್ಕೇ ಧಕ್ಕೆಯುಂಟಾಗುವುದರಲ್ಲಿ ಸಂದೇಹವಿಲ್ಲ. ಈ ತೆರನಾದ ವಾದ ವಿಜ್ಞಾನಕ್ಕೆ ಬದಲಾಗಿ ಮೌಢ್ಯವನ್ನು ಬೆಳೆಸುವ ಪ್ರಯತ್ನವಾಗುತ್ತದೆ. ಶಿವ ವಿಶ್ವನಾಥನ್ ಅವರ ಹೇಳಿಕೆಯನ್ನು ಗಮನಿಸಿ: ''ವಿಜ್ಞಾನದೊಂದಿಗೆ ಕೈ ಮಿಲಾಯಿಸಿರುವ ಇವತ್ತಿನ ಆಧುನಿಕ ಪ್ರಭುತ್ವವು ತಾನೇ ಈ ಜಗತ್ತಿನ ಅತ್ಯಂತ ಭೀಕರ ಪರಿಸರ ವಿರೋಧಿ ಶಕ್ತಿಯಾಗಿ ಮಾರ್ಪಟ್ಟಿದೆ.'' ವಿಜ್ಞಾನದ ಬಗ್ಗೆ ಆರೋಪಗಳನ್ನು ಮಾಡುತ್ತಾ ನಡೆದರೆ, ಧಾರ್ಮಿಕ ಅಸಹನೆಗೂ ಎಡೆಮಾಡಿಕೊಟ್ಟಂತಾಗುತ್ತದೆ. ಉಗ್ರ ಪರಿಸರವಾದಿಗಳಲ್ಲಿ ಕಾಣಬರುವ ಮತ್ತೊಂದು ದೃಷ್ಟಿಯೂ ವಿಜ್ಞಾನಕ್ಕೆ ವಿರೋಧವೆನಿಸುತ್ತದೆ. ಆಧುನಿಕ ವಿಜ್ಞಾನ-ತಂತ್ರಜ್ಞಾನಗಳ ಸಾಧನೆಗಳೆಲ್ಲವನ್ನೂ ನಗಣ್ಯವೆಂದು ಅವರು ಭಾವಿಸುತ್ತಾರೆ. ಇಂಗ್ಲೆಂಡಿನಲ್ಲಿ ಶತಮಾನದ ಹಿಂದೆ ಯಂತ್ರಗಳ ವಿರೋಧಿಯಾಗಿದ್ದ ಲುಡ್ಡೈಟರು ಯಂತ್ರಗಳನ್ನೇ ನಾಶಪಡಿಸಲು ಹೊರಟರು. ಇಂಥ ಮನೋಭಾವವನ್ನೂ ನಾವು ಇಂದು ಉಗ್ರ ಪರಿಸರವಾದಿಗಳಲ್ಲಿ ಕಾಣಬಹುದು. ವಿಜ್ಞಾನ-ತಂತ್ರಜ್ಞಾನಗಳ ಪರ್ಯಾಯ ಮಾರ್ಗಗಳನ್ನು ಆವಿಷ್ಕರಿಸುವ ಮಾರ್ಗ ಮೆಚ್ಚತಕ್ಕದ್ದೇ ಸರಿ, ಅದು ಅಪೇಕ್ಷಣೀಯವೂ ಹೌದು. ಹಲವು ಕ್ಷೇತ್ರಗಳಲ್ಲಿ ಅವು ಅನಿವಾರ್ಯವಾಗಬಹುದು. ರಚನಾತ್ಮಕ ಹಾಗೂ ಸೂಕ್ತ ಬದಲಾವಣೆಗಳನ್ನು ವ್ಯವಸ್ಥಿತವಾಗಿ ಜಾರಿಗೆ ತರುವುದು ಅಗತ್ಯವೇ ಹೊರತು ಇಡೀ ವೈಜ್ಞಾನಿಕ, ಔದ್ಯೋಗಿಕ ಪ್ರಗತಿಯನ್ನು ಮೂಲೆಗುಂಪಾಗಿಸುವುದರಲ್ಲಿ ಪರಿಹಾರವನ್ನು ಕಂಡುಕೊಳ್ಳಲು ಸಾಧ್ಯವಿಲ್ಲ. ಇದನ್ನು ಉಗ್ರ ಪರಿಸರವಾದಿಗಳು ಸ್ಪಷ್ಟವಾಗಿ ಗಮನಿಸಬೇಕು. ನಿಸರ್ಗವನ್ನು ಶಾಶ್ವತವಾಗಿ ರಕ್ಷಿಸುವ ಜವಾಬ್ದಾರಿಯನ್ನು ಹೊರಲು ಸಿದ್ಧವಾಗಿರುವ ಪರಿಸರವಾದಿಗಳು ''ಪರಿಸರ ವಿಜ್ಞಾನ''ದ ಬೇರುಗಳನ್ನೇ ಕಿತ್ತೊಗೆಯಬಾರದು.


ಪ್ರೊ॥ ಎಂ. ಎ. ಸೇತುರಾವ್

ನಂ. ೪೨೧೯, ಸುಬ್ರಹ್ಮಣ್ಯನಗರ, ಮುನೇಶ್ವರ ದೇವಸ್ಥಾನದ ರಸ್ತೆ, ಬೆಂಗಳೂರು - ೫೬೦ ೦೨೧

# ಕಿಚ್ಚಿಲ್ಲದ ಬೇಗೆಯಲ್ಲಿ ಬೆಂದವಳು

## (ಮಹಿಳೆ ಮತ್ತು ಶಿಕ್ಷಣ : ಅರ್ಥಸ್ವರೂಪ ಸಮೀಕ್ಷೆ)

**ಡಾ|| ಎಚ್. ಎಸ್. ಮಂಜುರಾಜ್**

**ಮ**ನೆಯೇ ಮೊದಲ ಪಾಠಶಾಲೆ; ಜನನಿ ತಾನೆ ಮೊದಲ ಗುರುವು ಎಂಬ ಅನುಭವ ಜನ್ಯ ಜಾಣ್ನುಡಿಯು ಮಹಿಳೆ ಮತ್ತು ಶಿಕ್ಷಣದ ಪರಿಕಲ್ಪನೆಯನ್ನು ಬೆಸೆಯುವ ಮೂಲ ಧಾತು. ಮಾನವನ ಉಗಮ ಮತ್ತು ವಿಕಾಸದ ಹಂತದಲ್ಲಿ ಹೆಣ್ಣು ಮನೆ/ಕುಟುಂಬದ ಒಳ ಭಾಗದಲ್ಲಿ ಇರಬೇಕಾದ ಆಕಸ್ಮಿಕದಿಂದಲೇ ಅವಳ ಶಿಕ್ಷಣ ಸಂಬಂಧೀ ಪ್ರಕ್ರಿಯೆಯು ಅನೇಕ ಆಯಾಮಗಳಿಗೆ ಒಳಗಾಯಿತು. ಅಂದರೆ ಮನೆ/ಕುಟುಂಬದ ನಿರ್ವಹಣೆ ಮತ್ತು ಜವಾಬ್ದಾರಿಗಳು ಅವಳ ಹೆಗಲಿಗೆ ಬಂದಂತೆಯೇ ಮಗುವಿನ ಲಾಲನೆ ಪಾಲನೆಗಳು ಅವಳ ಪ್ರೀತಿಯ, ಮಮತೆಯ ಮತ್ತು ತಾಯ್ತನದ ಪ್ರತೀಕವಾಗಿ ಕಾಣಿಸಿಕೊಂಡವು. ಮಗುವಿನ ಮೊದಲ ಗುರುವಾಗಿ ಅವಳು ತಂತಾನೇ ಆದಳು. ಅವಳೇ ಇಷ್ಟಪಟ್ಟು ವಹಿಸಿಕೊಂಡ ಹೊಣೆಯಿದು: ಮಹಿಳೆ ಮತ್ತು ಶಿಕ್ಷಣದ ಪರಿಕಲ್ಪನೆಯನ್ನು ಈ ವಿಚಾರದಿಂದ ನಾನು ಆರಂಭ ಮಾಡಲು ಇಚ್ಛಿಸುವೆ.

ಮಹಿಳೆ ಮತ್ತು ಶಿಕ್ಷಣ ಸಂಬಂಧಿ ಸಂಗತಿಯು ಅನೇಕ ಅರ್ಥಗಳನ್ನೂ ಮಜಲುಗಳನ್ನೂ ಹೊಂದಿದೆ.

- ❒ ಮಹಿಳೆ/ಹೆಣ್ಣು ಪಡೆಯುವ ಶಿಕ್ಷಣ
- ❒ ಹೆಣ್ಣಾದವಳು ನೀಡುವ ಶಿಕ್ಷಣ
- ❒ ಸಮಾಜದಿಂದ ಹೆಣ್ಣಿಗೆ ಸಿಗುವ ಶಿಕ್ಷಣ
- ❒ ಅನುಭವ/ವಿದ್ಯೆ/ಜ್ಞಾನಮೂಲ ಮಾಹಿತಿಗಳ ಮೂಲಕ ಆಕೆ ಕಟ್ಟಿಕೊಳ್ಳುವ ಶಿಕ್ಷಣ
- ❒ ಪುರುಷ ಪ್ರಧಾನ ಸಮಾಜದಲ್ಲಿ ಆಕೆ ಅರ್ಥೈಸಿಕೊಳ್ಳುವ ನೈಜ ಶಿಕ್ಷಣ

ಹೀಗೆ ಮಹಿಳೆಗೆ ಲಭ್ಯವಾಗುವ ಶಿಕ್ಷಣವು ಒಂದೇ ಸ್ವರೂಪದ್ದಲ್ಲ. ಹಾಗೆಯೇ ಶಿಕ್ಷಣದ ಸ್ವರೂಪ ಕೂಡ ಒಂದೇ ತೆರನಾದುದಲ್ಲ. ಮಹಿಳೆಗೆ ಸಿಗುವ ಶಿಕ್ಷಣದ ಸ್ವರೂಪಗಳನ್ನು ಸ್ಥೂಲವಾಗಿ ಪಟ್ಟಿ ಮಾಡುವುದಾದರೆ -

- ❒ ಮನೆ/ಕುಟುಂಬಗಳಲ್ಲಿ ಸಿಗುವ ಶಿಕ್ಷಣ
- ❒ ಸಮಾಜ/ಸಂಸ್ಥೆ ಮತ್ತು ಸಂಘ ಸಮೂಹಗಳಿಂದ ಸಿಗುವ ಶಿಕ್ಷಣ
- ❒ ಔಪಚಾರಿಕ ಶಿಕ್ಷಣ
- ❒ ಅನೌಪಚಾರಿಕ ಶಿಕ್ಷಣ
- ❒ ಜ್ಞಾನ ಪ್ರಧಾನ ಹಾಗೂ ಮಾಹಿತಿ ಪ್ರಧಾನ ಶಿಕ್ಷಣ
- ❒ ಗೃಹಿಣಿಯಾಗಿದ್ದರಿಂದಲೇ ಲಭ್ಯವಾಗುವ ಶಿಕ್ಷಣ ಹಾಗೂ ಉದ್ಯೋಗಸ್ಥಳಾಗಿದ್ದರಿಂದಲೇ ಲಭಿಸುವ ಶಿಕ್ಷಣ.

ಹೀಗೆ ಮಹಿಳೆ ಮತ್ತು ಶಿಕ್ಷಣವು ತನಗೆ ತಾನೇ ಸಂಪೂರ್ಣವಲ್ಲ, ಸಮಾಜ ಹಾಗೂ ಆ ಸಮಾಜದ ಮತ್ತೊಂದು ಮುಖವಾದ ಪುರುಷನನ್ನೂ ಒಳಗೊಂಡಿರುವಂಥದು.

ಈ ಚಿತ್ರದಲ್ಲಿ ತೋರಿಸಿರುವಂತೆ ಶಿಕ್ಷಣವು ೧) ತ್ರಿಕೋನದ ಮೇಲ್ಭಾಗದಲ್ಲಿದೆ. ತ್ರಿಕೋನದ ಕೆಳಭಾಗದ ಎರಡು ಸಮಾಂತರ ಬಿಂದುಗಳಲ್ಲಿ ಮಹಿಳೆ ೨) ಮತ್ತು ಪುರುಷ




೩) ರಿದ್ದಾರೆ. ಈ ಮೂವರನ್ನೂ (ಮಹಿಳೆ, ಪುರುಷ ಮತ್ತು ಶಿಕ್ಷಣ) ಆವರಿಸಿರುವ ವೃತ್ತವೇ ಸಮಾಜ (೪). ಪುರುಷನಿಗೆ ಸಿಗುವಂತೆ ಮತ್ತು ಪುರುಷನಿಗೆ ಸಿಕ್ಕಷ್ಟೇ ಶಿಕ್ಷಣವು ಮಹಿಳೆಗೆ ಸಿಗಬೇಕು. ಆದರೆ ಸಮಾಜ ಈ ನಿಟ್ಟಿನಲ್ಲಿ ಬಲು ಪಕ್ಷಪಾತಿ. ಬಹಳ ಹಿಂದಿನ ಕಾಲದಿಂದಲೂ ಶಿಕ್ಷಣವು ಮಹಿಳೆಗೆ ಅಗತ್ಯವಿಲ್ಲ – ಆದರ ಅಗತ್ಯ ಬಹಳವಿರುವುದು ಪುರುಷನಿಗೆ – ಎಂಬ ಭ್ರಾಮಕ ತರ್ಕದಲ್ಲಿ ತಲ್ಲೀನವಾದದ್ದನ್ನು ಕಂಡು ಸರಿಪಡಿಸುವ ಪ್ರಯತ್ನಗಳು ಜರುಗುತ್ತಿವೆ.

ಇದೊಂದು ಚಳುವಳಿಯ ರೂಪದಲ್ಲಿ ನಡೆದು, ಇಂತಹ ಲಿಂಗಭೇದ ಅಸಮಾನತೆಗಳನ್ನು ತೊಡೆದುಹಾಕಿ, ಪುರುಷ ಪಡೆದಷ್ಟೇ ಸಮಾನ ಸ್ಥಾನಮಾನವನ್ನು ಮಹಿಳೆ ಪಡೆದುಕೊಳ್ಳಬೇಕೆಂಬ ಸಾಮಾಜಿಕ ಆಂದೋಲನ ನಡೆಯುತ್ತಿದೆ. ಇದರಲ್ಲಿ ಸ್ತ್ರೀವಾದಿಗಳೆನಿಸಿಕೊಂಡ ಸ್ತ್ರೀಯರು ಮಾತ್ರವಲ್ಲ ಸ್ತ್ರೀವಾದಿ ಪರ ಪುರುಷರೂ ಇದ್ದಾರೆ. ಆದರೂ ಸ್ತ್ರೀವಾದಿಗಳಾಗದ, ಆಗಲಾಗದ ಎಷ್ಟೋ ಸ್ತ್ರೀಯರೂ ಮತ್ತು ಸ್ತ್ರೀವಾದಿ ಪರ ನಿಲ್ಲದ ಅಥವಾ ನೇರವಾಗಿಯೋ ಅ-ನೇರವಾಗಿಯೋ ಮಹಿಳಾ ಶೋಷಣೆಯಲ್ಲಿ ತಲ್ಲೀನರಾದ ಪುರುಷರೂ ಈ ಕಕ್ಷೆಯಿಂದ ಹೊರಗುಳಿದಿರುವರು. ಸ್ತ್ರೀವಾದ ಬೇಕಾಗದಂಥ, ಅದರ ಅಗತ್ಯ ವಿರದಂಥ ಸಮಾಜ ನಿರ್ಮಾಣವೇ ಸ್ತ್ರೀವಾದದ ಆಶಯ ಎಂಬಂಶವನ್ನು ಮರೆತ ಪುರುಷ/ಸ್ತ್ರೀಯರು ಮಹಿಳಾ ಚಳುವಳಿಯನ್ನು ಒಂದು ಇಸಂ ಎಂತಲೋ ಒಂದು ಫ್ಯಾಷನ್ ಎಂತಲೋ ಕರೆದು ಜರಿಯುವವರೂ ಇದ್ದಾರೆ. ಇಲ್ಲೆಲ್ಲಾ ಅಂಥವರು ಮಹಿಳಾವಾದ ಒಂದು ಜೀವನಕ್ರಮ ಹಾಗೂ ಜೀವನ ಧೋರಣೆ ಎಂಬುದನ್ನು ಮರೆಯುತ್ತಾರೆ.

ಈ ಎಲ್ಲ ವಿಷಯಗಳನ್ನು ಸ್ಪಷ್ಟಪಡಿಸಿಕೊಳ್ಳಲಾಗದೆ ಮಹಿಳೆ ಮತ್ತವಳ ಶಿಕ್ಷಣವನ್ನು ಕುರಿತ ಪರಿಕಲ್ಪನೆಯನ್ನು ಬಿಡಿಸಿಡಲಾಗದು.

ಪುರುಷ ಪ್ರಧಾನ ಸಮಾಜದ ಶೋಷಣೆ, ದೌರ್ಜನ್ಯ ಮತ್ತಿತರ ದಬ್ಬಾಳಿಕೆಗಳನ್ನು ಪ್ರಶ್ನಿಸುವುದೇ ಸ್ತ್ರೀ ಪಡೆದುಕೊಳ್ಳುವ ಶಿಕ್ಷಣದ ಸರಿಯಾದ ವ್ಯಾಖ್ಯೆ. ಅಷ್ಟು ಮಾತ್ರವಾಗದೇ ಆಕೆ ಟೊಂಕಕಟ್ಟಿ ನಿಂತು ತನ್ನಂತಹ ಸಮಾನ ಮನಸ್ಕ ಸ್ತ್ರೀ-ಪುರುಷ ಮಿತ್ರರ ಸಹಕಾರದಿಂದ ಹೊಸ ಸಮಾಜ ನಿರ್ಮಿಸಲು ತೊಡಗುವುದೇ ಸ್ತ್ರೀ ಶಿಕ್ಷಣದ ಪೂರ್ಣ ಪ್ರಮಾಣದ ಅರ್ಥವಂತಿಕೆ.

ಮಹಿಳೆ ಮತ್ತು ಪುರುಷರಿಬ್ಬರೂ ಪಡೆದುಕೊಳ್ಳುವ ಶಿಕ್ಷಣವು ದೋಷಪೂರಿತವಾಗಿದ್ದರೆ ಅಂತಹ ಶಿಕ್ಷಣದಿಂದ ಪ್ರಯೋಜನವಿಲ್ಲ.

ಕಮಲ ಮನೆಗೆಲಸ ಮಾಡುತ್ತಿದ್ದಾಳೆ
ಬಸವ ಪಾಠ ಓದುತ್ತಿದ್ದಾನೆ.

ಎಂಬಂತಹ ಶಿಕ್ಷಣ ಸಂಬಂಧಿ ಕಲಿಕಾ ಆಕರಗಳೇ ದೋಷಪೂರಿತವಾಗಿರುವುದರಿಂದ ಮಹಿಳೆಗೆ ಲಭಿಸುವ ಶಿಕ್ಷಣ ಸಹ ಅಷ್ಟೇ ಅ-ಸಮಾನವಾಗಿದೆ. ಇದು ಅವಳಿಗೆ ಗೊತ್ತಾಗುವುದು ಸಮಾಜದ ನೇರ ಹೊಣೆಯನ್ನು ಹೊರುವ ಗಳಿಗೆಯಲ್ಲಿ.

ಮಹಿಳಾ ಶಿಕ್ಷಣವೆಂಬುದೇ ಸ್ವಾತಂತ್ರ್ಯೋತ್ತರ ಭಾರತದಲ್ಲಿ ಕಾಣಿಸಿಕೊಂಡ ಸಂಗತಿ ಎಂಬಂಶವನ್ನು ಗುರುತಿಟ್ಟುಕೊಂಡರೆ ಆಕೆಗೆಷ್ಟು ಅನ್ಯಾಯವಾಗಿದೆ ಎಂದು ಗೊತ್ತಾಗುತ್ತದೆ. ವೇದಕಾಲದಲ್ಲಿ ಒಂದಿಬ್ಬರು ಸ್ತ್ರೀಯರ ಹೆಸರು ಮತ್ತವರ ಸಾಧನೆಗಳ ಪಟ್ಟಿಯನ್ನು ಕೊಟ್ಟು ಅಂದೂ ಸಹ ಸಮಾನತೆಯಿತ್ತೆಂಬ, ಮಹಿಳೆಗೆ ಶಿಕ್ಷಣ ಲಭಿಸುತ್ತಿತ್ತೆಂಬ ತೋರಿಕೆಯ ವಾದವನ್ನು ಮಂಡಿಸಬಹುದು. ಇಲ್ಲವೆಂದಲ್ಲ. ಆದರೆ ನಮ್ಮ ಅಂತರ್ದನಿಯನ್ನು ಕೇಳಿಕೊಂಡರೆ ಸಾಕು, ಉತ್ತರ ಸಿಗುತ್ತದೆ. ಇತಿಹಾಸದುದ್ದಕ್ಕೂ ಮಹಿಳೆಗೆ [illegible] ಶಿಕ್ಷಣ ಪಕ್ಷಪಾತತನದ್ದು. ಅವಳಿಗೆ ಅ-ಸಾಂಪ್ರದಾಯಿಕ ಶಿಕ್ಷಣ [illegible] ಪುರುಷನಂತೆ ಪಾಠಶಾಲೆಗೆ ತೆರಳಿ, ಕಲಿತು, ಕಲಿಸಿ, [illegible] ಅವಕಾಶಗಳು [illegible] ಬರಲೇ ಇಲ್ಲ. ಇಂಥೆಲ್ಲೆಡೆ ಪುರುಷ ಕ್ರೌರ್ಯ ತಾಂಡವವಾಡಿದ್ದನ್ನು ಮನಗಾಣಬಹುದು. ಕುಟುಂಬ, ಮದುವೆ, ಮಕ್ಕಳು ಮೊದಲಾದ ಸಾಮಾಜಿಕ [illegible] ಮಹಿಳೆ ಹೆಚ್ಚು ಕಲಿಯಲು, ಉದ್ಯೋಗಸ್ಥಳಾಗಲು [illegible] ಪುರುಷ ಹೊರಗೆ, [illegible] ಮಹಿಳಾ [illegible] ಇರಬೇಕಾದ [illegible]

ಅವಳು ಮನೆಯೊಳಗೇ ಇದ್ದು ಕಲಿತದ್ದೇ ಬಹಳ. ಅನುಭವೀ ಶಿಕ್ಷಣದ ವಿಚಾರದಲ್ಲಿ ಅವಳು ಹೆಚ್ಚು ಅರಿತಳು. ಸಂಸಾರ ನಿರ್ವಹಿಸುವ ಬಹು ದೊಡ್ಡ ಇಕ್ಕಟ್ಟು- ಬಿಕ್ಕಟ್ಟುಗಳು ಅವಳ ತಲೆಯ ಮೇಲೆ ಬಿದ್ದುದರಿಂದ 'ಮನೆತನ'ವನ್ನು ಉದ್ಧರಿಸುವ, 'ವಂಶ'ವನ್ನು ಎತ್ತಿ ನಿಲ್ಲಿಸುವ ಕಾಯಕದಲ್ಲಿ ಮಗ್ನಳಾದಳು. 'ಮನೆ ಗೆದ್ದು ಮಾರು ಗೆಲ್ಲು' ಎಂಬ ಲೋಕೋಕ್ತಿಯಂತೆ ಕುಟುಂಬವನ್ನು ಕಟ್ಟುವುದರ ಮೂಲಕ ನಾಡನ್ನು ಕಟ್ಟಿದಳು ಸ್ತ್ರೀ. ಈ ಒಳ ಸಂಗತಿ ಅರಿಯದ ಗಂಡು ತಾನೇ ಉದ್ಧಾರಕ ಮಾತ್ರವಲ್ಲ, ತಾನೊಬ್ಬನೇ ಸುಧಾರಕ ಎಂಬ ಅರ್ಧ ಸತ್ಯದಲ್ಲಿ ಇತಿಹಾಸವನ್ನು ಬೆದಕಿದ.

ಹನ್ನೆರಡನೆಯ ಶತಮಾನದ ನಮ್ಮ ಶರಣ ಚಳವಳಿ ಮತ್ತು ಹದಿನಾಲ್ಕರ ಆಸುಪಾಸಿನಲ್ಲಿ ಶುರುವಾದ ಭಕ್ತಿ ಪಂಥಗಳು ಮಹಿಳೆಗೆ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಪ್ರವೇಶ ಕೊಟ್ಟವು. ಬುದ್ಧಿವಂತರಾದ ಸ್ವಸಾಮರ್ಥ್ಯದ ಹೆಂಗಸರು ಸ್ವತಃ ಅವಕಾಶಗಳನ್ನು ಹೊಂದಿದರು. ಇಂಥವರೆಲ್ಲರೂ ಕಾಲೇಜಿನಲ್ಲಿ ಓದಿ ಸಂಪನ್ನರಾಗಿದ್ದವರೇ. ಅನುಭವ ಹಾಗೂ ಅನುಭಾವದ ಆಳ ಅಗಲಗಳನ್ನು ಇವರು ಅರಿತದ್ದು ಲೋಕಶಿಕ್ಷಣದಿಂದ.

ಬಾಲ್ಯಾವಸ್ಥೆ ಮತ್ತು ಯೌವನಾವಸ್ಥೆಯಲ್ಲಿ ಕಲಿಸುವ ಸಾಂಪ್ರದಾಯಿಕ ಶಿಕ್ಷಣವು ತರತಮಗಳನ್ನು ಮಾಡಿದರೂ ಹೆಣ್ಣಿನ ವಿಚಾರದಲ್ಲಿ ಲೋಕ ಶಿಕ್ಷಣ ಮಾತ್ರ ಹೆಣ್ಣಿಗೆ ಅಪಾರ ಅವಕಾಶಗಳನ್ನೂ ಜೀವನಾನುಭವಗಳನ್ನೂ ಒದಗಿಸಿತು. ಅಕ್ಕ, ಮುಕ್ತಾಯಕ್ಕ, ಮೀರಾಬಾಯಿ ಮೊದಲಾದವರೆಲ್ಲ ಸಮಾಜದ ತರತಮಗಳನ್ನು ಕಂಡು ಮನನೊಂದು ಹಾಡಿದರು. ಆ ಕಾಲದ ಉಸಿರುಗಟ್ಟುವ ವಾತಾವರಣದಲ್ಲೇ ಅವರು ಅಷ್ಟು ಎತ್ತರದ ದನಿಯಲ್ಲಿ ಮಾತನಾಡಿದ್ದು ಬಹು ದೊಡ್ಡ ಐತಿಹಾಸಿಕ ಸಂಗತಿ. ಎಂದಿನಿಂದಲೂ ಎರಡನೆಯ ದರ್ಜೆಯ ಪ್ರಜೆಯಾಗಿ ಬಾಳಿದ ಹೆಣ್ಣು ತಲೆ ಎತ್ತಿ ನಿಂತು ತನ್ನ ಆತ್ಮ ವಿಶ್ವಾಸದಿಂದ ಹೃದಯ ಸಂವಾದ ಮಾಡಿದ್ದು ಈ ದಿಸೆಯಲ್ಲೇ. ಇಂದಿಗೂ ಇಂಥ ಮಾದರಿಗಳೇ ನಮ್ಮ ಕಾಲದ ಹೆಣ್ಣುಗಳಿಗೆ ಅಗತ್ಯವಾಗಿದೆಯೆಂದ ಮೇಲೆ ಇದರ ಮಹತ್ವ ಎಷ್ಟಿದ್ದೀತು!

ನಿಸರ್ಗದಿಂದಾದ ಜೈವಿಕ ವ್ಯತ್ಯಾಸ ಹಾಗೂ ಶಾರೀರಕ ರಚನಾ ವ್ಯತ್ಯಯಗಳನ್ನೇ ಬಂಡವಾಳವಾಗಿಟ್ಟುಕೊಂಡು ಶೋಷಣೆಗೆ ನಾಂದಿ ಹಾಡಿದ ಪುರುಷ ಇಂದು ಎಚ್ಚರಗೊಳ್ಳುತ್ತಿರುವನೆ? ಮಾನವ ಸಂಬಂಧಗಳನ್ನು ಗೌರವಿಸುವ ಪ್ರವೃತ್ತಿ ಎಲ್ಲಿಯವರೆಗೆ ಆಗುವುದಿಲ್ಲವೋ, ಸ್ತ್ರೀ-ಪುರುಷ ಸಮಾನತೆಯನ್ನು ತಾತ್ವಿಕವಾಗಿ ಒಪ್ಪಿ ಅದರಂತೆ ಆತ ಎಲ್ಲಿಯವರೆಗೆ ನಡೆಯುವುದಿಲ್ಲವೋ – ಅಲ್ಲಿಯವರೆಗೆ ನಾವೇನು ಕಲಿತರೂ ಅದು ನದಿಯ ನೀರಿನಲ್ಲಿ ಹುಳಿ ಹಣ್ಣು ತೇಯ್ದಂತೆ; ಮನುಕುಲ ಏನೇನು ತಾಂತ್ರಿಕ, ವೈಜ್ಞಾನಿಕ ಪ್ರಗತಿಗಳನ್ನು ಸಾಧಿಸಿದೆಯೋ ಅವೆಲ್ಲ ಬೆಟ್ಟಕ್ಕೆ ಕಲ್ಲು ಹೊತ್ತಂತೆ.

ಹೀಗಾಗಿ ಪುರುಷನಿಗೆ ಸಿಗುವ ಶಿಕ್ಷಣದಲ್ಲಿ ಮಹಿಳಾ ಸಮಾನತೆಯ ಬೋಧನೆ ಮತ್ತದರ ಅಳವಡಿಕೆ ಹಾಗೂ ಮಹಿಳೆಗೆ ಸಿಗುವ, ಸಿಗಲೇಬೇಕಾದ ಶಿಕ್ಷಣದಲ್ಲಿ ಅವಳು ಮೈಕೊಡವಿ ಎದ್ದು ನಿಲ್ಲಲು ಅಗತ್ಯವಾದ ಜಾಗೃತಿ–ಮತ್ತದರ ರೂಪರೇಷೆಗಳು ಆವಶ್ಯಕ. ಪುರುಷನಿಗೆ ತನ್ನ ಸ್ಥಾನಮಾನ ಮತ್ತವನ ತಪ್ಪುಗಳನ್ನು ತಿದ್ದುವ ಶಿಕ್ಷಣ ಬೇಕಾಗಿರುವಂತೆಯೇ ಮಹಿಳೆಗೆ ಮಹಿಳಾವಾದದ ರೂಪರೇಷೆ ಹಾಗೂ ಸ್ವಯಂವಿಶ್ವಾಸವನ್ನು ಹುಟ್ಟಿಸುವ ವಿಚಾರಗಳ ಬೋಧನೆ ಬೇಕಾಗಿದೆ.

ಪರಿಸರ ಪ್ರಜ್ಞೆಗಿಂತಲೂ ಅತ್ಯಂತ ಜರೂರಾಗಿ ಆಗಬೇಕಾದ ಕೆಲಸವಿದು. ಸ್ತ್ರೀಯನ್ನು ಗೌರವಿಸುವ, ಅವಳ ಬದಲಾದ ಆಲೋಚನಾ ಕ್ರಮಗಳನ್ನು ಗುರುತಿಸಿ, ಅರ್ಥಮಾಡಿಕೊಳ್ಳುವ, ಅವಳಿಗೂ ಸಮಾನ ಸ್ಥಾನಮಾನಗಳನ್ನು ಕೊಡುವ ಆಶಯ ನಮ್ಮ ಸಮಾಜದಲ್ಲಿ ಬೆಳೆಯಬೇಕು. ನಮ್ಮ ಶಿಕ್ಷಣದಲ್ಲಿ ಈ ಬಗೆಯದಾದ ಅವಕಾಶಗಳು ನಿರ್ಮಿತಗೊಳ್ಳಬೇಕು.

ರಾಜ್ಯಾಂಗ, ಕಾನೂನು, ನ್ಯಾಯಾಲಯ ಮುಂತಾದ ಸರ್ಕಾರಿ ಪ್ರಾಧಿಕಾರಗಳು ಮಹಿಳಾ ಶಿಕ್ಷಣಕ್ಕೆ ಒತ್ತುಕೊಟ್ಟಿವೆಯೆಂಬುದೇನೋ ನಿಜ. ಆದರೆ ಯಾವ ಪ್ರಮಾಣದಲ್ಲಿ ಮಹಿಳೆಗೆ ನ್ಯಾಯ ಸಿಕ್ಕಿದೆ? ಇದು ವಾಸ್ತವಿಕ ಸಂಗತಿ. ರಾಜಕೀಯ ಮೀಸಲಾತಿ, ಔದ್ಯೋಗಿಕ ಮೀಸಲಾತಿ ಇತ್ಯಾದಿಗಳೂ ಕೂಡ ಇದರ ಪ್ರೋತ್ಸಾಹಕ ಅಂಶಗಳೇ. ಆದರೂ ನಾವಿಂದು ಮನಃಪೂರ್ವಕವಾದ ಬದಲಾವಣೆಗಳನ್ನು ಸ್ವಾಗತಿಸುವ ಪರಿಪಾಠವನ್ನು ಹೊಂದಬೇಕಿದೆ.

ಮಹಿಳೆ ಪಡೆಯುವ ಹಾಗೂ ಹೊಂದುವ ಶಿಕ್ಷಣದ ಸ್ವರೂಪವು ಯಾವ ತೆರನಾಗಿರಬೇಕೆಂಬ ವಿಚಾರ ಈಗ ಸ್ಪಷ್ಟವಾದಂತಾಯಿತು. ಅವಳು ಶಿಕ್ಷಣ ಪಡೆಯುವಲ್ಲಿ ಎದುರಾಗುವ ಸಮಸ್ಯೆಗಳನ್ನು ಮುಂದೆ ನೋಡೋಣ :

ಬಡತನ, ಹಸಿವು ಮತ್ತು ದಾರಿದ್ರ್ಯಗಳು ಅವಳ ಶಿಕ್ಷಣದ ಮೇಲೆ ನೇರ ಪರಿಣಾಮ ಬೀರುತ್ತವೆ. ಗಂಡು ಮಕ್ಕಳು ಶಿಕ್ಷಣ ಪಡೆದು ಉದ್ಯೋಗಸ್ಥರಾಗಿ ನಾಳೆ ದಿನ ನಮ್ಮನ್ನು ಸಾಕಿ ಸಲುಹುತ್ತಾರೆಂಬ ಹಾಗೂ ಹೆಣ್ಣು ಮಕ್ಕಳಿಗೆ ಎಷ್ಟೇ ಶಿಕ್ಷಣ ನೀಡಿದರೂ ಅವರು ನಾಳೆ ಬೇರೆ ಮನೆಗೆ ಹೋಗಿ ಅಲ್ಲಿನ ದೀಪ ಬೆಳಗುವವರು ಎಂಬ ವಿಚಾರಧಾರೆ ಕೂಡ ಇದಕ್ಕೆ ಕಾರಣ. ಅವಿಭಕ್ತ ಕುಟುಂಬ ಅಥವಾ ಕುಟುಂಬದ ಸಂಖ್ಯೆ ದೊಡ್ಡದಿದ್ದಾಗ ಮಹಿಳೆಗೆ ಶಿಕ್ಷಣ ಲಭಿಸದು. ಮನೆ/ಕುಟುಂಬದ ಗೃಹಿಣಿಯಾಗಿ ಅವಳು ಚಿಕ್ಕ ವಯಸ್ಸಿನಲ್ಲೇ ಮದುವೆಯಾಗುವುದು, ತನ್ನ ಹೆಂಡತಿಯಾಗುವವಳು ಹೆಚ್ಚು ಓದಿರಬಾರದೆಂಬ ಗಂಡಸಿನ ತಿಳಿವಳಿಕೆ, ಕೂಲಿಗೆ ಹೋಗಬೇಕಾದ ದುರ್ದೆಸೆ, ಹೆಚ್ಚು ಹೆಚ್ಚು ಓದಿಸಿದರೆ ಅದರಂತೆ ಹೆಚ್ಚು ವರದಕ್ಷಿಣೆ ಕೊಡಬೇಕೆಂಬ ಪಾಲಕರ ಭೀತಿ, ಗ್ರಾಮೀಣ ಪ್ರದೇಶಗಳಲ್ಲಿ ಓದಲು ಸೌಲಭ್ಯವಿಲ್ಲದಿರುವುದು, ಸಾಕಷ್ಟು ಪ್ರೋತ್ಸಾಹ ಹಾಗೂ ನೆರವಿಲ್ಲದಿರುವುದು, ಸ್ವತಃ ಮಹಿಳೆಗೇ ಓದಲು ಆಸಕ್ತಿಯಿಲ್ಲದಿರುವುದು - ಇವೆಲ್ಲ ಸ್ತ್ರೀ ಶಿಕ್ಷಣದ ಮೇಲೆ ಗಂಭೀರ ಪರಿಣಾಮಗಳನ್ನು ಬೀರುತ್ತವೆ. ಸಾಮಾಜಿಕ ಸಮಸ್ಯೆಗಳಾದ ವರದಕ್ಷಿಣೆ, ವಿಧವಾ ಸಮಸ್ಯೆ, ವೇಶ್ಯಾ ಪದ್ಧತಿ, ಅತಿಯಾದ ಧಾರ್ಮಿಕ ಕಟ್ಟುಪಾಡುಗಳು, ಸ್ತ್ರೀ ವಿದ್ಯಾಭ್ಯಾಸದ ಮೇಲೆ ನಕಾರಾತ್ಮಕ ಪರಿಣಾಮಗಳನ್ನು ಉಂಟುಮಾಡುತ್ತವೆ.

ಶಿಕ್ಷಣದಿಂದ ಸ್ತ್ರೀಗೆ ಸಿಗುವ ಹಲವು ಪ್ರಯೋಜನಗಳು ಇಂದು ಅವಳನ್ನು ಮಾನಸಿಕವಾಗಿ ಸದೃಢಗೊಳಿಸುತ್ತಿವೆ. ಅದರಲ್ಲೂ ಅವಳ ಆರ್ಥಿಕ ಸ್ವಾವಲಂಬಿತನವಂತೂ ಅವಳಲ್ಲಿ ಚರಿತ್ರೆ ಕಂಡಿರದ ಹೊಸ ಬಗೆಯ ಹುಮ್ಮಸ್ಸು ಹಾಗೂ ಆತ್ಮವಿಶ್ವಾಸವನ್ನು ನೀಡಿವೆ. ಸ್ವಾವಲಂಬೀ ಬದುಕು, ತನಗನಿಸಿದ ರೀತಿಯಲ್ಲಿ ಬಾಳ್ವೆ ಮಾಡಬಹುದಾದ ಅವಕಾಶಗಳನ್ನು ಅವಳಿಗೆ ನೀಡಿವೆ. ಸಮಾಜದ ಓರೆಕೋರೆಗಳನ್ನು ತಿದ್ದುವ ಅವಳ ಪ್ರಯತ್ನದಲ್ಲಿ ಇವೆಲ್ಲ ಒತ್ತಾಸೆಯಾಗಿ ನಿಲ್ಲುತ್ತವೆ.

ಶಿಕ್ಷಣವು ಉದ್ಯೋಗವನ್ನು ನೀಡುವಲ್ಲಿ ಪ್ರಮುಖ ಅಸ್ತ್ರವಾಗಿ ಪರಿಣಮಿಸುತ್ತದೆ. ಹೀಗಾಗಿ ಮಹಿಳೆಯು ತನಗೆ ಶಿಕ್ಷಣದ ಅಗತ್ಯವಿರುವಂತೆ ಉದ್ಯೋಗ ಕೂಡ ಅನಿವಾರ್ಯ ಎಂದು ತಿಳಿಯುತ್ತಾಳೆ. ತನಗೆ ಲಭ್ಯವಾದ ಶಿಕ್ಷಣಕ್ಕೆ ಅನುಗುಣವಾದ ಉದ್ಯೋಗ ಹೊಂದುವಲ್ಲಿ ಅವಳು ಸಫಲಳಾದರಂತೂ ಅದು ಸ್ತ್ರೀ ಬದುಕಿನ ಪರಮೋಚ್ಚ ಘಟ್ಟವೆಂದು ಸಮಾಜ ಭಾವಿಸುವುದು. ಕಾರಣ, ಮಹಿಳೆಯು ಆರ್ಥಿಕವಾಗಿ ಒಂದಷ್ಟನ್ನು ಸಂಪಾದಿಸುತ್ತಾಳೆಂಬುದು ಸಣ್ಣ ವಿಚಾರವೇನಲ್ಲ. ಈ ಹಂತದಲ್ಲಿ ನಾವು ಗಮನಿಸಬೇಕಾದ ಅಂಶವೆಂದರೆ ಪುರುಷ ವರ್ಗ ಈ ಉದ್ಯೋಗಸ್ಥ ಸ್ತ್ರೀಯನ್ನು ಹೇಗೆ ಕಾಣುತ್ತದೆ, ಎಂಬುದು.

ಇಂದಿನ ಬಹುತೇಕ ಉದ್ಯೋಗಸ್ಥ ಹೆಂಗಸರ ಸಮಸ್ಯೆಗಳು ಒಂದಲ್ಲ ಒಂದು ವಿಧವಾದ ಸಾಮಾಜಿಕ-ಸಾಂಸ್ಕೃತಿಕ ಸಂಗತಿಗಳಾಗಿ ಮಾರ್ಪಾಡಾಗುತ್ತಿವೆ. ಹೊರಗೆ ದುಡಿಯುವ ಹೆಣ್ಣೆಂಬ ಸಾನುಕಂಪ ಮತ್ತು ಅವಳ ಸಂಪಾದನೆಯು ನನ್ನ/ನಮ್ಮ ಕುಟುಂಬದ ಏಳಿಗೆಗೆಂಬ ತಿಳಿವಳಿಕೆಗಳೆರಡೂ ಬಹುತೇಕ ಪುರುಷರಲ್ಲಿಲ್ಲ. ಹಾಗೆಯೇ ಉದ್ಯೋಗಸ್ಥ ಹೆಣ್ಣು ಸಹ ಹೀಗೆಯೇ 'ನಮ್ಮ' ಎಂಬ ಭಾವನೆ ಹೊಂದುವುದು ಕಷ್ಟ. ಇದು ಅವಳಿಗೆ ಸಿಗುವ ಸಹಕಾರದ ಆಧಾರದ ಮೇಲೆ ನಿರ್ಣಯಿತಗೊಳ್ಳುತ್ತದೆ.

ಹೀಗೆ ಮನೆಯ ಒಳಗೂ ಮನೆಯ ಹೊರಗೂ ದುಡಿಯಬೇಕಾದ ಪ್ರಸಂಗ ಹೆಣ್ಣಿಗೆ ಬರುವುದನ್ನು ಎಲ್ಲೆಡೆ ಕಾಣುತ್ತೇವೆ. ಅಂದರೆ ಸ್ತ್ರೀಯಾದವಳು ಶಿಕ್ಷಣ ಪಡೆದು, ಉದ್ಯೋಗ ಹೊಂದಿ ಸಂಪಾದನೆ ಮಾಡುವ ರೀತಿಯನ್ನು ಪುರುಷವರ್ಗ ತೆಗೆದುಕೊಳ್ಳುವ ಎರಡು ವಿಧಾನಗಳೆಂದರೆ ೧) ನನ್ನ ವಿಶಾಲತೆ, ಸಹಕಾರಗಳಿಂದ ಸಾಧ್ಯವಾದದ್ದು. ೨) ಈ ಮೂಲಕ ಮನೆಯ ಒಳಗನ್ನೂ ಮನೆಯ ಹೊರಗನ್ನೂ ನೋಡಿಕೊಳ್ಳುವುದರಿಂದ ನನಗೇ ಲಾಭ ಜಾಸ್ತಿ.

ಈ ಎರಡು ಅಂಶಗಳೂ ತಪ್ಪು ತಿಳಿವಳಿಕೆಯಿಂದ ಬಂದದ್ದು. ಮೊದಲನೆಯದು ಪುರುಷನ ಅಹಂಕಾರವನ್ನೂ, ಎರಡನೆಯದು ಪುರುಷ ಶೋಷಣೆಯ ಅತ್ಯಂತ ನಾಜೂಕಾದ ವಿಧಾನವನ್ನೂ ಸೂಚಿಸುತ್ತವೆ.

ಮಗಳಾದವಳು ಹೆಚ್ಚು ಓದಿ, ಒಳ್ಳೆಯ ಸಂಬಳದ ನೌಕರಿ ಹಿಡಿದರೆ ವರದಕ್ಷಿಣೆಯ

ಕಬಂಧದಿಂದ ಅಷ್ಟೋ ಇಷ್ಟೋ ಬಿಡಿಸಿಕೊಳ್ಳಬಹುದೆಂಬ ತಂದೆ ತಾಯಿಗಳ ಕಳಕಳಿ ಒಂದೆಡೆಯಾದರೆ, ದೊಡ್ಡ ನೌಕರಿಯಲ್ಲಿದ್ದಷ್ಟೂ ದೊಡ್ಡ ಸಂಬಂಧ ಮಾಡಬೇಕಾಗುತ್ತದೆ ಎಂಬುದು ಮಧ್ಯಮ ವರ್ಗದ ಪೋಷಕರ ಆತಂಕ.

ಉದ್ಯೋಗಸ್ಥ ಹೆಂಡತಿಗೆ ಮನೆಗೆಲಸದಲ್ಲಿ ಸಾಕಷ್ಟು ನೆರವೀಯಬೇಕೆಂಬ ತಿಳಿವಳಿಕೆ ಎಷ್ಟು ಗಂಡಂದಿರಲ್ಲಿದೆ? ಹೀಗಾಗಿಯೇ ಇದೂ ಒಂದು ರೀತಿಯ ನಯವಾದ ಶೋಷಣೆಯೇ. ಹೀಗಾಗಿ ಮಹಿಳಾ ಲೋಕ ಯಾವುದನ್ನು ಪ್ರಗತಿ ಎನ್ನುತ್ತದೆಯೋ ಅದನ್ನೇ ಪುರುಷಲೋಕ ತನ್ನ ಸ್ವಾರ್ಥಕ್ಕೆ ಬಳಸಿಕೊಳ್ಳುವ ಸಾಧ್ಯತೆಗಳಿವೆ.

ಲೋಕಾನುಭವಕ್ಕೆ ಶಿಕ್ಷಣ ಬೇಕು, ಆರ್ಥಿಕ ಸ್ವಾವಲಂಬನೆಗೆ ಉದ್ಯೋಗ ಬೇಕು- ಇವತ್ತಿನ ಹೆಣ್ಣಿಗಿರುವ ಜರೂರು ಇದು. ಇನ್ನು ಉದ್ಯೋಗಸ್ಥ ಗಂಡ-ಹೆಂಡತಿಯರ ಕೌಟುಂಬಿಕ ನಿರ್ವಹಣೆಯಂತೂ ಸಮಸ್ಯೆಗಳ ಆಗರ. ಮಕ್ಕಳ ಲಾಲನೆ-ಪಾಲನೆಗಳಿಗೆ ಹೆಚ್ಚು ನಿಗಾ ಕೊಡಲಾಗದ್ದು, ಸಾಕಷ್ಟು ಬಿಡುವಿಲ್ಲದಿರುವುದು. ಓದಿದ, ತಿಳಿವಳಿಕೆ ಇರುವ ಗಂಡ-ಹೆಂಡಿರ ನಡುವಿನ ಭಿನ್ನಾಭಿಪ್ರಾಯಗಳು ಕಲಹಗಳಾಗುವುದಿಲ್ಲವೆಂಬ ಗ್ಯಾರಂಟಿ ಏನು? ಭಿನ್ನ ಧೋರಣೆಗಳು ಪರಸ್ಪರ ಗೌರವಕ್ಕೆ ಪಾತ್ರವಾಗುವವರೆಗೆ ಸಮಸ್ಯೆಯಿಲ್ಲ. ಎಷ್ಟೋ ಮನೆಗಳಲ್ಲಿ ದುಡಿಯುವ ತಂದೆ-ತಾಯಿಗಳಿಗೆ ಚಿಕ್ಕ ಮಕ್ಕಳು ಬುದ್ಧಿ ಹೇಳುವ/ ಹೇಳಿದ ಉದಾಹರಣೆಗಳಿವೆ.

ಉದ್ಯೋಗಸ್ಥ ಮಹಿಳೆಗೆ ಆಗುತ್ತಿರುವ ಒಂದು ರೀತಿಯ ಕಿರಿಕಿರಿಯಿದು. ಇಂತಹ ಎಷ್ಟೋ ಅನೂಹ್ಯ ತೊಡಕು, ಸಿಕ್ಕುಗಳಲ್ಲಿ ಅವಳು ಸಿಕ್ಕಿರುವಳು. ಇಲ್ಲೆಲ್ಲ ಅರಿತು, ಬೆರೆತು, ಪಾಲ್ಗೊಂಡು ಜೊತೆಯಾಗಿ ನಿಂತು ಸಹಕರಿಸುವ ಗಂಡಸಿನ ದೊಡ್ಡತನವೇ ಪರಿಹಾರ ಎಂದು ಹೇಳಬೇಕು; ಇದು ಅವನ ಆದ್ಯ ಕರ್ತವ್ಯವೂ ಹೌದು.

ಹೀಗೆ ಮಹಿಳಾ ಶಿಕ್ಷಣದ ಒಂದು ಮುಖವನ್ನಷ್ಟೇ ನಾನಿಲ್ಲಿ ಬೆಳಕಿಗೆ ಹಿಡಿಯಲು ಯತ್ನಿಸಿರುವೆ. ಒಟ್ಟು ಸಾಂಸ್ಕೃತಿಕ ಕಟ್ಟೋಣದಲ್ಲಿ ಮಹಿಳೆಯದೇ ಸಿಂಹಪಾಲು - ಇದನ್ನು ಅರ್ಥಮಾಡಿಕೊಳ್ಳುವ ಸೌಜನ್ಯವನ್ನು ನಾವು ಹೊಂದಿದರೆ ಸಾಕು. ಅವಳ ಶಿಕ್ಷಣ ಮತ್ತದರ ಪರಿಣಾಮಗಳು ಸಮಾಜದಲ್ಲಿ ಉಂಟುಮಾಡುವ ಅಲ್ಲೋಲ-ಕಲ್ಲೋಲಗಳಿಗೆ ಬಹು ಮುಖ್ಯ ಕಾರಣವೆಂದರೆ ಒಂದು, ಸಮಾಜ ಪರಿಭಾವಿಸುವ ರೀತಿ; ಎರಡು, ಪುರುಷ ಅದನ್ನು ಸ್ವೀಕರಿಸುತ್ತಿರುವ ರೀತಿ.

ಹೀಗಾಗಿ ಆಧುನಿಕ ಮಹಿಳೆ ಸೆರಗಿನಲ್ಲಿ ಕೆಂಡ ಕಟ್ಟಿಕೊಂಡು ಜೀವಿಸುತ್ತಿದ್ದಾಳೆ. ಅಕ್ಕ ಹೇಳುವಂತೆ ಕಿಚ್ಚಿಲ್ಲದ ಕಿಚ್ಚಲ್ಲಿ ಬೆಂದು ಬಸವಳಿಯುತ್ತಿದ್ದಾಳೆ: ನೊಂದ ನೋವ ನೋಯದವರು ಎತ್ತಬಲ್ಲರು? ಸಹಾನುಭೂತಿಯುಳ್ಳ, ಜೀವಪರ ಕಾಳಜಿಗೆ ಮಿಡಿಯುವ ಗಂಡಸು ಊಹಿಸಿಕೊಂಡು ಅರ್ಥಮಾಡಿಕೊಳ್ಳಬಲ್ಲನಷ್ಟೇ. ಆಧುನಿಕ ಮಹಿಳೆ ತೀರಾ ಸಂಕ್ರಮಣ ಅವಸ್ಥೆಯಲ್ಲಿದ್ದಾಳೆ. ಅವಳ ಮುಂದಿರುವ ಅವಕಾಶಗಳು ಮುಂದೆ ಯಾವ ಭೂತವನ್ನು, ಯಾವ ದುಗುಡವನ್ನು ತಂದೊಡ್ಡಬಲ್ಲದೋ ತಿಳಿಯಲಾಗುತ್ತಿಲ್ಲ.

ಹಿಂದಿನ ಕಾಲದ ಗೃಹಿಣಿಗೆ ನೆಮ್ಮದಿಯಿತ್ತು, ಆದರೆ ಆರ್ಥಿಕ ಸ್ವಾತಂತ್ರ್ಯವಿರಲಿಲ್ಲ ಎಂದೂ, ಈ ಕಾಲದ ಉದ್ಯೋಗಸ್ಥ ಸ್ತ್ರೀಗೆ ಆರ್ಥಿಕ ಸ್ವಾತಂತ್ರ್ಯವಿದೆ; ಮಾನಸಿಕ ನೆಮ್ಮದಿಯಿಲ್ಲ ಎಂದೂ ವಾದ ಮಾಡುವ ಜನವಿದ್ದಾರೆ. ಹೀಗೆ ಗೆರೆ ಕೊರೆದಂತೆ ನಿರ್ಧಾರಕ್ಕೆ ಬರುವುದು ಕಷ್ಟಸಾಧ್ಯ. ಬದಲಾಗುತ್ತಿರುವ, ಪೂರ್ಣ ಬದಲಾಗದ ಇಂಥ ಸಂಕ್ರಮಣ ಕಾಲದಲ್ಲಿ ಈ ಬಗೆಯ ಹೊಯ್ದಾಟ, ತುಯ್ದಾಟಗಳು ಸಹಜ. ಹೆಣ್ಣಿನ ಮುಂದಿರುವ ಇಂದಿನ ಆಯ್ಕೆ ಸ್ವಾತಂತ್ರ್ಯ ಸಂಪೂರ್ಣವಾಗಿ ಅವಳದೇ. ಇವತ್ತಿಗೂ ಎಷ್ಟೋ ಸುಶಿಕ್ಷಿತ ಹೆಣ್ಣು ಮಕ್ಕಳು ಉದ್ಯೋಗ ಮಾಡಲು ಮನಸಾರೆ ಇಷ್ಟಪಡದೆ ಶ್ರೀಮಂತ ಗಂಡನ ತೆಕ್ಕೆಯಲ್ಲಿ ಸುಖ ನೆಮ್ಮದಿ ಕಾಣಲು ಹಾತೊರೆಯುವರು.

ಶಿಕ್ಷಣ ಮತ್ತು ಉದ್ಯೋಗ – ಇವೆರಡೂ ಹೆಣ್ಣಿನ ವಿಷಯದಲ್ಲಿ ತೀರಾ ಸಕಾರಾತ್ಮಕವಾಗಿ ಪ್ರತಿಕ್ರಿಯಿಸುವುದೆಂದು ಹೇಳಲಾಗದು. ಅವಳ ಓದು, ವಿದ್ಯೆ, ರೂಪ, ಆಕರ್ಷಣೆ, ಉದ್ಯೋಗ, ಸಮಾಜದ ಸ್ಥಾನಮಾನ – ಇವೆಲ್ಲ ಇಂದಿನ ಪುರುಷನನ್ನು ವಿಧವಿಧವಾಗಿ ಸೆಳೆಯುತ್ತಿವೆ. ವಧೂವರರ ವಿವಾಹದ ಜಾಹಿರಾತು ಅಂಕಣಗಳಲ್ಲಿ 'ಉದ್ಯೋಗಸ್ಥ ಸ್ತ್ರೀ' ಬೇಕೆಂದು ಸ್ಪಷ್ಟವಾಗಿ ನಮೂದಿಸುವರು. ಹಾಗಾಗಿ ಇಬ್ಬರೂ ದುಡಿಯುವುದು ಅನಿವಾರ್ಯವೆಂದೂ, ಒಬ್ಬರ ದುಡಿಮೆ ಜೀವನಕ್ಕೆ, ಮತ್ತೊಬ್ಬರ ದುಡಿಮೆಯ ಲಾಭ ಕೂಡಿಡಲು ಅಥವಾ ಆಸ್ತಿ ಮಾಡಲು ಎಂಬಂತಾಗಿದೆ.

ಇಷ್ಟಾದರೂ ಮನೋವಿಜ್ಞಾನ ಸ್ಪಷ್ಟವಾಗಿ ಯಾವ ತೀರ್ಮಾನವನ್ನೂ ಕೊಡಲಾರದು. ಇದುವರೆಗೆ ಮಾನವನ ವ್ಯಕ್ತಿತ್ವದ ಮಾನಸಿಕ ಅಂಶವನ್ನು ಪೂರ್ತಿಯಾಗಿ ಪರೀಕ್ಷಿಸಿ ವಿಶ್ಲೇಷಿಸಲು ಯಾವ ತಜ್ಞನಿಗೂ ಸಾಧ್ಯವಾಗಿಲ್ಲ; ಪ್ರದೇಶ, ಸಂಸ್ಕೃತಿ, ಪರಂಪರೆ ಮತ್ತು ಆಲೋಚನಾ ಭಿನ್ನತೆಗಳು ಇಂಥ ಸೂಕ್ಷ್ಮ ವಿಚಾರಗಳನ್ನು ನಿರ್ದಿಷ್ಟವಾಗಿ ಹೇಳಲು ಸಾಧ್ಯವಾಗದ ಹಾಗೆ ತಡೆಯೊಡ್ಡುತ್ತವೆ.

ಉದಾಹರಣೆಗೆ, ಪಾಶ್ಚಿಮಾತ್ಯ ಸುಶಿಕ್ಷಿತ ಮಹಿಳೆ ಮತ್ತು ಭಾರತೀಯ ಸುಶಿಕ್ಷಿತ ಮಹಿಳೆ – ಇಬ್ಬರೂ ಒಂದೇ ತೆರನಾದ ತೀರ್ಮಾನಗಳಿಗೆ ಮತ್ತು ನಿರ್ಧಾರಗಳಿಗೆ ಬರುತ್ತಾರೆ ಎಂದು ಹೇಳಲಾಗುವುದಿಲ್ಲ. ನಮ್ಮಲ್ಲಿ ಸ್ವಲ್ಪ ನಿಧಾನಗತಿಯಲ್ಲಿ ಸ್ತ್ರೀ ಜಾಗೃತಿ ಉಂಟಾಯಿತು. ಬಾಲ್ಯವಿವಾಹ, ಸತಿ ಸಹಗಮನ ಮೊದಲಾದ ಅಮಾನವೀಯ ಅನಿಷ್ಟಗಳು ತೊಲಗುವ ಸಂದರ್ಭದಲ್ಲಿ ಮಹಿಳಾ ಸುಧಾರಣೆ ಆರಂಭವಾಯಿತು. ಹಾಗೆ ನೋಡಿದರೆ ಬ್ರಿಟಿಷರು ಭಾರತಕ್ಕೆ ಕಾಲಿಟ್ಟ ಮೇಲೆಯೇ – ಇಂಗ್ಲಿಷ್ ಶಿಕ್ಷಣ ನಮ್ಮಲ್ಲಿ ತಳವೂರಿದ ಮೇಲೆಯೇ ಇಂಥ ಸಾಮಾಜಿಕ ಸುಧಾರಣೆಗಳು ನಡೆಯತೊಡಗಿದವು. ಕೇವಲ ಐವತ್ತು ವರ್ಷಗಳ ಹಿಂದೆ ಇದ್ದ ಸಾಮಾಜಿಕ ಪರಿಸ್ಥಿತಿಗಳನ್ನು ನೆನೆಸಿಕೊಂಡರೆ ಈ ಅಂಶ ಅರ್ಥವಾಗುತ್ತದೆ. ಹುಡುಗ-ಹುಡುಗಿಯರಿಬ್ಬರೂ ಒಂದೇ ತರಗತಿಯಲ್ಲಿ ಕುಳಿತು ಪಾಠ ಕೇಳುವ ಪರಿಸ್ಥಿತಿಯೇ ಹಿಂದೆ ಇರಲಿಲ್ಲವೆಂದ ಮೇಲೆ ನಾವೆಷ್ಟು ದೀರ್ಘ ದಾರಿಯಲ್ಲಿ ಕ್ರಮಿಸಿದ್ದೇವೆಂಬುದು ಸ್ಪಷ್ಟವಿದೆ.

ಪುರುಷರಿಂದಾಗುವ ಶೋಷಣೆ, ಮಹಿಳೆಯರಿಗಾಗುವ ದೌರ್ಜನ್ಯಗಳು ಇತಿಹಾಸದುದ್ದಕ್ಕೂ ನಡೆದ, ನಡೆಯುತ್ತಿರುವ ಅಮಾನವೀಯ ಆಚರಣೆಗಳು. ಸ್ವಾರ್ಥ, ಹಣ ಸಂಪಾದನೆ, ಪುರುಷಾಹಂಕಾರ ಮತ್ತು ಅಧಿಕಾರದ ಆಕ್ರಮಣ ಮನೋಭಾವಗಳು ಇವಕ್ಕೆ ಕಾರಣ. ವರ್ಗ ಮತ್ತು ವರ್ಣಭೇದ ನೀತಿಯಂತೆ ಲಿಂಗಭೇದ ನೀತಿಯೂ ಪ್ರಬಲವಾದ ವ್ಯವಸ್ಥಿತ ಶೋಷಣೆ. ಇಂಥಲ್ಲಿ ಪುರುಷನೊಬ್ಬನೇ ಸಂಚುಹೂಡಿ ಈ ಆಕ್ರಮಣಗಳಲ್ಲಿ ತಲ್ಲೀನನಾಗಿರುವನೆಂದು ಹೇಳುವುದು ಅರ್ಧಸತ್ಯವಷ್ಟೇ.

'ಹೆಣ್ಣಿಗೆ ಹೆಣ್ಣೇ ಶತ್ರು' ಎಂಬ ಹೇಳಿಕೆಯಲ್ಲಿ ಪೂರ್ತ ನಿಜವಿಲ್ಲ, ಹಾಗೆಂದು ನಿಜವೇ ಅಲ್ಲವೆಂದು ತಳ್ಳಿ ಹಾಕಲಾಗದು. ಅತ್ತೆಯೆಂಬುವಳು ಪುರುಷಾಹಂಕಾರದಿಂದ ಹಾಗೆ ವರ್ತಿಸುವಳಷ್ಟೇ, ತನ್ನ ಮಗನ ಮಾನಸಿಕ ಸ್ಥಿತಿಯನ್ನೇ ಅನುಭವಿಸಿ ತೋರುವಳು ಎಂದೂ ಹೇಳಿಕೊಂಡು ಹೆಣ್ಣಿಗೆ ಹೆಣ್ಣು ಶತ್ರುವಾಗಲಾರಳು; ಇಂಥಲ್ಲಿ ಪುರುಷ ಮನಸ್ಸೇ ಕೆಲಸ ಮಾಡುವುದು ಎಂದೂ ವಿವರಿಸತೊಡಗುವುದು ಅಷ್ಟು ಸರಿಕಾಣಲಾರದು. ಎಷ್ಟೋ ಕುಟುಂಬಗಳಲ್ಲಿ ಹೆಣ್ಣಾದವಳು ತಾನು ಒಂದು ಮನೆಯ ಸೊಸೆಯಾಗಿದ್ದೇನೆಂಬುದನ್ನು ಮರೆತು (ಸೊಸೆಯಾಗಿ ಹೀನಾಯ ಅನುಭವಿಸಿದ್ದರೂ) ರಾಕ್ಷಸೀ ಅತ್ತೆಯಾಗುವುದು, ತನ್ನ ಸೊಸೆಯ ಮೇಲೇ ದೌರ್ಜನ್ಯ ಮಾಡುವುದು ಕಾಣಸಿಗುವ ದೃಶ್ಯ. ಇಲ್ಲೆಲ್ಲ ಮಹಿಳೆಯು ಹೊಂದಿರುವ ಶಿಕ್ಷಣ ಎಲ್ಲಿ ಕೆಲಸ ಮಾಡುವುದು? ಪಾಶ್ಚಿಮಾತ್ಯ ಸ್ತ್ರೀವಾದೀ ಚಳವಳಿಗಳ ಪ್ರೇರಣೆಯಲ್ಲಿ ಆಯ್ಕೆ ಸ್ವಾತಂತ್ರ್ಯವನ್ನೇ ಸ್ವೇಚ್ಛೆಯೆಂದು ತಿಳಿದು ಎಷ್ಟೋ ವಿದ್ಯಾವಂತ ಸ್ತ್ರೀಯರು ಪ್ರತ್ಯಕ್ಷ/ಪರೋಕ್ಷ ವ್ಯಭಿಚಾರಗಳಲ್ಲಿ ತೊಡಗಿಕೊಂಡಿಲ್ಲವೆ? ಇದನ್ನೂ ಪುರುಷ ದೌರ್ಜನ್ಯವೆಂದು ಕರೆಯಬೇಕೆ? ಅಥವಾ ವಿದ್ಯಾವಂತ ಮಹಿಳೆಯ ತಿಳಿಗೇಡಿತನ ಎನ್ನಬೇಕೇ?

ಇನ್ನು ಸಿನಿಮಾ, ರೂಪದರ್ಶಿತ್ವ ಮೊದಲಾದ ಬಣ್ಣದ ಬದುಕಿನ ನೆರಳಲ್ಲಿ ದುಡ್ಡಿಗಾಗಿ ಬಟ್ಟೆ ಬಿಚ್ಚಿ ಕುಣಿಯುವ ಸ್ತ್ರೀಯನ್ನು ಏನೆನ್ನೋಣ? ಇಲ್ಲಿ ಅವಳು ಪಡೆದ ಶಿಕ್ಷಣ ಕೆಲಸ ಮಾಡುತ್ತಿಲ್ಲವೆ? ಅಥವಾ ಶಿಕ್ಷಣದಿಂದ ಕಲಿಯಬೇಕಾದ್ದನ್ನು ಕಲಿತು ಆಚರಿಸಲಾಗದ ಅವಳ ಅನರ್ಹತೆಯೇ?

ಈ ರೀತಿ ಮಹಿಳೆಯರನ್ನು ಶೋಷಿಸುವವರು ಪುರುಷರೇ ಎಂಬುದೂ ನಿಜ; ಅದರಷ್ಟೇ ಮುಖ್ಯವಾದದ್ದು, ಸ್ವತಃ ಮಹಿಳೆಯೇ ಹಣಕ್ಕಾಗಿ ಏನೆಲ್ಲ ಮಾಡಲು ಸಿದ್ಧವಿದ್ದಾಳೆ ಎಂಬುದೂ ಇಜ, ಆದರೆ ಎಲ್ಲರೂ ಅಲ್ಲ ಎಂಬುದನ್ನೂ ಮರೆಯಬಾರದು.

ಅಂದರೆ ಗೌರವಪೂರ್ವಕವಾಗಿ, ಆತ್ಮಾಭಿಮಾನದಿಂದ ನೇರವಾಗಿ ಹೇಳಬೇಕೆಂದರೆ ಮರ್ಯಾದೆಯಿಂದ ಜೀವಿಸುವುದನ್ನು ಮಹಿಳೆಯೂ ಕಲಿಯಬೇಕಾಗಿದೆ. ಸ್ತ್ರೀ ಶಿಕ್ಷಣ ಇಷ್ಟೆಲ್ಲ ವಿಚಾರಗಳನ್ನು ತನ್ನ ಅಂತರಂಗದಲ್ಲಿ ಇಟ್ಟುಕೊಂಡಿದೆಯೆಂದರೆ ಆಶ್ಚರ್ಯವಾಗುವುದು.

ಪುರುಷ ತಪ್ಪು ಮಾಡಿದ್ದಾನೆ ಮತ್ತು ಗೊತ್ತಿದ್ದೂ ತಪ್ಪು ಮಾಡುತ್ತಿದ್ದಾನೆ. ಇದನ್ನು ಸರಿಪಡಿಸುವ ಕಾಯಕದಲ್ಲಿ ಸುಶಿಕ್ಷಿತ ಮಹಿಳೆ ಚಳವಳಿಯೋಪಾದಿಯ ಸಮರ ಹೂಡಿದ್ದಾಳೆ. ನಾವೆಲ್ಲ ಅವಳ ಜೊತೆಗೆ ನಿಲ್ಲೋಣ. ನಿಜವಾದ ಸ್ತ್ರೀವಾದಿಪರ ಮನುಷ್ಯರಾಗಿ ನಂನಮ್ಮ ನೆಲೆಗಟ್ಟಿನ ಪ್ರಯತ್ನ, ಪರಿಶ್ರಮಗಳಿಂದ ಬದುಕನ್ನು ಬೆಳಕಾಗಿಸೋಣ. ಹಾಗೆಯೇ ಮಹಿಳೆ ಕೂಡ (ಮತ್ತೊಮ್ಮೆ ಹೇಳುತ್ತೇನೆ; ಎಲ್ಲರೂ ಅಲ್ಲ) ತನ್ನ ಶಿಕ್ಷಣದಿಂದ ಸಿಗುವ, ಉದ್ಯೋಗದಿಂದ ಲಭಿಸುವ ಆತ್ಮಾಭಿಮಾನ ಮತ್ತು ಆಯ್ಕೆ ಸ್ವಾತಂತ್ರ್ಯಗಳನ್ನು ದುರುಪಯೋಗ ಮಾಡಿಕೊಳ್ಳದ ಹಾಗೆ ನೋಡಿಕೊಳ್ಳೋಣ. ಇಂಥಲ್ಲಿ ಸ್ತ್ರೀ ಶಿಕ್ಷಣ ಅಗತ್ಯವಾಗಿ ಈ ತೆರನಾದ ತಿಳಿವು ಮತ್ತು ಅರಿವನ್ನು ಉಂಟುಮಾಡಬೇಕಿದೆ.

ಡಾ॥ ಎಚ್. ಎಸ್. [illegible]

[illegible]



**ಡಿ.** ಎಸ್. ಚೌಗಲೆ ಅವರ 'ವಾರಸಾ' ಎಂಬ ಕಥಾ ಸಂಕಲನ ಕನ್ನಡದ ಸೃಜನಶೀಲ ಕಥಾ ಸಾಹಿತ್ಯಕ್ಕೆ ಒಂದು ಉತ್ತಮ ಕೊಡುಗೆ. ಈಗಾಗಲೇ 'ಗಾಂಧಿ ವಿರುದ್ಧ ಗಾಂಧಿ' ಎಂಬ ಅನುವಾದಿತ ನಾಟಕ ಮತ್ತು ಚಿತ್ರಕಲಾ ಬರವಣಿಗೆಯ ಮೂಲಕ ಕನ್ನಡಿಗರಿಗೆ ಚಿರಪರಿಚಿತರಾದ ಡಿ. ಎಸ್. ಚೌಗಲೆ ಅವರು ತಮ್ಮ ಈ ಪ್ರಥಮ ಕಥಾ ಸಂಕಲನದ ಮೂಲಕ ಉತ್ತಮ ಕಥೆಗಾರರಾಗಿಯೂ ಬೆಳೆದಿದ್ದಾರೆ. ಆಧುನಿಕವೆನ್ನಬಹುದಾದ ಒಂದು ವಿಶಿಷ್ಟ ಸಂವೇದನೆಯನ್ನು ಈ ಕಥೆಗಳ ಮೂಲಕ ನೀಡಿದ್ದಾರೆ. ಇದರಿಂದ ಕನ್ನಡ ಕಥಾ ಸಾಹಿತ್ಯ ಹೊಸ ಆಯಾಮವೊಂದಕ್ಕೆ ವಾಲಿದಂತಾಗಿದೆ. ಈ ಸಂಕಲನದ ಶೀರ್ಷಿಕೆಯ ಕತೆ 'ವಾರಸಾ' ಚೆನ್ನೈನ ಕನ್ನಡ ಬಳಗದವರು 'ಲಹರಿ' ಪತ್ರಿಕೆಯ ಇಪ್ಪತ್ತನೇ ವಾರ್ಷಿಕೋತ್ಸವ ಸಂದರ್ಭದಲ್ಲಿ ಏರ್ಪಡಿಸಿದ್ದ ಕಥಾ ಸ್ಪರ್ಧೆಯಲ್ಲಿ ದ್ವಿತೀಯ ಬಹುಮಾನವನ್ನು ಪಡೆದಿದೆ.

ಪ್ರಸ್ತುತ ಸಂಕಲನದಲ್ಲಿ ಒಟ್ಟು ಹತ್ತು ಕತೆಗಳಿವೆ. ಎಲ್ಲವೂ ಬೆಳಗಾವಿ ಸುತ್ತ ಮುತ್ತಲಿನ ಪ್ರಾದೇಶಿಕ ತುಡಿತಗಳಿಂದಲೇ ಗಮನ ಸೆಳೆಯುತ್ತವೆ. ಇದಕ್ಕೆ ಕತೆಗಾರರ ಸ್ವಾನುಭವ ಜೀವನವೂ ತುಂಬಾ ಸಹಕಾರಿಯಾಗಿದೆ. ಅವರೇ ಹೇಳುವಂತೆ, ''ಈ ಭಾಗ ಸಾಂಸ್ಕೃತಿಕವಾಗಿ ಹಿಂದೆ ಬೀಳುತ್ತಿದೆಯೇನೋ ಎಂಬ ಸಂದೇಹ ನನ್ನನ್ನು ಕಾಡುತ್ತಿದೆ. ಜನ ಮುಗ್ಧರು. ಅನೇಕ ಸಂಪ್ರದಾಯ, ರೂಢಿ, ಆಚಾರ, ನಂಬಿಕೆಗಳನ್ನು ಪೋಷಿಸಿಕೊಂಡು ಬಂದವರು. ಅವರು ಅದೆಷ್ಟು ಮುಗ್ಧರೆಂದರೆ ತಮ್ಮ ಜೀವನದ ಎಲ್ಲ ಘಟನೆಗಳಿಗೆ ದೇವರತ್ತ ಬೊಟ್ಟಿಟ್ಟು ತೋರಿಸುವಂಥವರು. ತಾವೇ ತೆಗೆದುಕೊಂಡ ವೈಜ್ಞಾನಿಕವಲ್ಲದ, ಅವೈಚಾರಿಕ ನಿರ್ಧಾರಗಳಿಗೆ ದೈವದ ಹೆಸರಿಟ್ಟು ಸಮಾಧಾನ ಪಡುವಂಥವರು. ಇಂಥ ವಾತಾವರಣದಲ್ಲಿ ಬೆಳೆದ ನನ್ನನ್ನು ಇವು ಪ್ರಶ್ನಿಸುತ್ತಲೇ ಇದ್ದವು. ಅವುಗಳಿಗೆ ಉತ್ತರ ಹುಡುಕುವ ಪ್ರಯತ್ನವನ್ನು ಮಾಡಿದ್ದೇನೆ.''



ಪುಟ : ೧೦೮ ಬೆಲೆ ರೂ. ೫೦
ಮಾ ಪ್ರಿಂಟ್ - ಪಬ್ಲಿಷರ್ಸ್
೩, ಸಂಪಿಗೆ ಲೇ ಔಟ್,
ವಿಜಯನಗರ, ಬೆಂಗಳೂರು-೭೯

'ಸಂಬಂಧಗಳು' ಈ ಸಂಕಲನದ ಉತ್ತಮ ಕತೆಗಳಲ್ಲಿ ಒಂದು. ಎರಡು ಕೌಟುಂಬಿಕ ವಲಯಗಳ ಹಿನ್ನೆಲೆಯಲ್ಲಿ ಮಾನವೀಯ ಸಂಬಂಧಗಳನ್ನು ಚಿತ್ರಿಸುವಂಥದ್ದು. ತಲೆ ತಲಾಂತರಗಳಿಂದ ಕುಸಿಯುತ್ತಿರುವ ಮಾನವೀಯ ಸಂಬಂಧಗಳನ್ನು ಪ್ರಸ್ತುತ ಸಾಮಾಜಿಕ ಮೌಲ್ಯಗಳಿಗೆ ಹೊಂದಿಸಿ ಪರೀಕ್ಷಿಸುತ್ತದೆ. ನಿಜವಾದ ಜೀವಪರತೆಯನ್ನು ಹುಡುಕುವಲ್ಲಿ ಸಫಲವಾಗುತ್ತದೆ. ಈ ಕಥೆಯಲ್ಲಿನ ಗೋವಿಂದರಾವ್ ಮತ್ತು ಶಿವಪ್ಪನ ನಡುವಿನ ಆತ್ಮೀಯ ಸಂಬಂಧಗಳನ್ನು ಮುಂದಿನ ಅವರ ಮಕ್ಕಳಲ್ಲಿ ಕಾಣಲಾಗುವುದಿಲ್ಲ. ಇದು ಕಾಲಮಾನದ ವೈಪರೀತ್ಯದ ಸೂಚನೆ. ಕಥಾನಾಯಕ ಬಾಳಾಸಾಹೇಬ ಈಗ ಸುಶಿಕ್ಷಿತನಾಗಿದ್ದಾನೆ. ಅವನ ತಂದೆಯು ಅಂದರೆ ಶಿವಪ್ಪನು ಗೋವಿಂದರಾವ್‌ರೊಂದಿಗೆ ಇರಿಸಿಕೊಂಡ ಸಂಬಂಧಗಳಿಗೆ ಅವನಲ್ಲಿ ಸಮ್ಮತಿ ಇದೆ. ಆದರೆ ಗೋವಿಂದರಾವ್ ಅವರ ಮಕ್ಕಳಲ್ಲಿ ಅಸಮ್ಮತಿ. ಅದು ಅವರಿಗೆ ಕೀಳರಿಮೆಯಾಗಿ ಕಾಣುತ್ತದೆ. ಇದೇ ಸಮಸ್ಯೆ 'ಹಗೆಯ ಧಗೆ'ಯಲ್ಲಿ ಇನ್ನೊಂದು ತೆರನಾಗಿ ಚಿತ್ರಿತವಾಗಿದೆ. ಅದು ವರ್ಗ ಸಂಘರ್ಷದ ಮೇಲು-ಕೀಳೆಂಬ ಭಾವನೆಯಲ್ಲಿ ರಕ್ತ ಸಿಕ್ತದಲ್ಲಿ ಕೊನೆಗೊಳ್ಳುತ್ತದೆ. ಇದಕ್ಕೆ ಪೂರಕವಾಗಿ ಅನೈತಿಕ ಸಂಬಂಧ, ಕಳ್ಳತನ, ದಲಿತರ ಶೋಷಣೆಯಂಥ ಮನೋಭಾವನೆಗಳು ಪುಷ್ಟಿಕೊಡುತ್ತವೆ. ಇದೆಲ್ಲವನ್ನೂ ಮೀರಿ ಮಾನವೀಯ ಸಹಮತಕ್ಕಾಗಿ ಚಿಂತಿಸುವ ಕತೆಗಾರರ ಸೂಕ್ಷ್ಮ ಶೀಲ ಮನಸ್ಸೊಂದು ಇಲ್ಲಿ ಮುಖ್ಯವಾಗಿ ಗೋಚರಿಸುತ್ತದೆ. ಕಥಾ ಪಾತ್ರಗಳು ತಮ್ಮ ಸಮಸ್ಯೆಗಳ ಸುತ್ತ ನಿಜವಾದ ಪ್ರಾದೇಶಿಕ ಭಾಷೆಯ ಅಭಿವ್ಯಕ್ತಿಯನ್ನು ವ್ಯಕ್ತಪಡಿಸುತ್ತವೆ. ಇದು ದಲಿತ ಭಾವನೆಯ ಹಿನ್ನೆಲೆಯಲ್ಲಿ ಬಂದ ಕತೆ.

ಕತೆಗಾರರ ಪ್ರಾದೇಶಿಕ ಅನುಭವದ ಪಕ್ವತೆಗೆ ಈ ಸಂಕಲನದ 'ವಾರಸಾ' ಎಂಬ ಕತೆ ಹಿಡಿದ ಕನ್ನಡಿ. ಈ ಕತೆಗೆ ಹಿನ್ನಲೆಯಾಗಿರುವ ವಸ್ತು ದೇವದಾಸಿ ಪದ್ಧತಿ. ಮೂಢನಂಬಿಕೆ, ಸ್ವಾರ್ಥ ಜನರ ಹಿತಾಸಕ್ತಿಗೋಸ್ಕರ ಇಂದು ಎಷ್ಟೋ ಪ್ರಾಯದ ಹೆಂಗಸರು ಈ ಸಮಸ್ಯೆಗೆ ಸಿಕ್ಕಿ ತಮ್ಮ ನಿಜವಾದ ಜೀವನದಿಂದ ವಂಚಿತರಾಗಿದ್ದಾರೆ. ಇಲ್ಲಿನ ಕಥಾನಾಯಕಿ ಯಲ್ಲವ್ವನ ಪಾತ್ರ ಇದಕ್ಕೆ ಜೀವಂತ ಸಾಕ್ಷಿಯಂತೆ ತೋರುತ್ತದೆ. ಚಿಕ್ಕ ವಯಸ್ಸಿನಲ್ಲಿಯೇ ತನ್ನ ಸುತ್ತಮುತ್ತಲಿನ ಕೊಳಕು ಜನರ ಪ್ರಭಾವದಿಂದ ದೇವದಾಸಿತ್ವವನ್ನು ಸ್ವೀಕರಿಸಿ, ಕಾಮಾಟಿಪುರದಲ್ಲಿ ತನ್ನ ಜೀವನವನ್ನು ಸವೆಸುತ್ತಾಳೆ. ಇದರ ಫಲವಾಗಿ ಹುಟ್ಟಿದ ಮಗನಿಗೆ 'ವಾರಸಾ' ಕುದುರಿಸುವ ಸಮಸ್ಯೆಯೇ ಈ ಕತೆಯ ತಿರುಳು. ಇದಕ್ಕಾಗಿ ಎದುರಾಗುವ ಸಮಸ್ಯೆಗಳು ಹಲವಾರು. ಊರ ಜನರ ಹಗೆತನ, ಬಾನಗಡಿತನ ಎಲ್ಲವೂ ಕಥೆಯ ಸುತ್ತ ಸುತ್ತುತ್ತವೆ. ಕಥಾವಸ್ತುವಿನ ಸುಂದರ ಅನಾವರಣ, ಪಾತ್ರಗಳಿಗೆ ತಕ್ಕಂತೆ ಪರಿಚಯ, ವರ್ತನೆ ಕಥೆಯ ಜೀವಂತಿಕೆಯನ್ನು ಹೆಚ್ಚಿಸಿವೆ. ಕತೆಗಾರರು ಪ್ರಾದೇಶಿಕ ಭಾಷೆಯ ಸೊಗಡನ್ನು ಇಲ್ಲಿ ಜೀವಂತವಾಗಿ ದುಡಿಸಿಕೊಂಡಿದ್ದಾರೆ: ''ಸಂಜೆ ಮಬ್ಬು ಗತ್ತಲು ಮುಸುಕಿತೆಂದರ ಇರಪಾಕಸಿ ಕಾಲುಗಳು ಯಲ್ಲಪ್ಪನ ಕೇರಿ ಕಡಿಗಿ ಉಳತಿದ್ದವು. ಮಡ್ಡಿ ಆಚೆ ಹೊಲಗೇರಿ. ಅದರಾಚೆ ಕೆಳಗೇರಿ. ಕೆಳಗೇರಿಯೊಳಗ ಆಕಿ ಠಿಕಾಣಿ. ಬೀದಿ ದೀಪಗಳು ಮಿಂಚಿ-ಮಿಣುಕ ಹತ್ತಿದಾಗ ಕೆಳಗೇರಿಯಲ್ಲಿ ಚಿಮಣಿ ಬುಡ್ಡಿಗಳು ಜೀವ ಹಿಡಿದುಕೊಳ್ಳತಾವು.''

ಪ್ರಸ್ತುತ ಸಮಸ್ಯೆಗಳಿಗೆ ಸದಾ ಎಚ್ಚರವಹಿಸುವ ಕತೆಗಾರರು ತಮ್ಮ ಸುತ್ತಲಿನ ಪ್ರದೇಶದ ರೈತರು ಪಡುವ ಪಾಡನ್ನು ಸ್ವ-ಅನುಭವದ ಧಾಟಿಯಿಂದಲೇ ಒಂದೆರಡು ಕತೆಗಳಲ್ಲಿ ಪ್ರತಿಬಿಂಬಿಸಿದ್ದಾರೆ. 'ಹೊನ್ನಿನೆಲೆಯ ಹಸಿವು', 'ಜಪ್ತಿ' ಈ ತೆರನಾದ ವಸ್ತುವನ್ನು ಒಳಗೊಂಡಂಥವುಗಳು. 'ಜಪ್ತಿ' ಕತೆಯ ರೈತಾಪಿ ಭೀಮಪ್ಪನ ಸಂಸಾರ ಬರಗಾಲದ ದವಡೆಗೆ ಸಿಕ್ಕು ಸಾಲದ ಹೊರೆಯಲ್ಲಿ ಬೀಳುತ್ತದೆ. ಸಾಲದ ಅಧಿಕಾರಿಗಳು ಅವನ ಮನೆ ಜಪ್ತಿಯನ್ನು ಮಾಡಲು ಮುಂದಾಗುತ್ತಾರೆ. ಈ ಸಂದರ್ಭಕ್ಕೆ ಯಾವುದೇ ಬಂಧು - ಬಳಗ ಹತ್ತಿರ ಸುಳಿಯುವುದಿಲ್ಲ. ಕೊನೆಗೆ ರೈತ ಸಮುದಾಯದವರಿಂದಲೇ ಭೀಮಪ್ಪನ ಕುಟುಂಬಕ್ಕೆ ಮುಕ್ತಿ ಸಿಗುತ್ತದೆ. 'ಹೊನ್ನಿನೆಲೆಯ ಹಸಿವು' ಕತೆಯ ಲಗುಮನ ಗೋಳು ಇದೇ ತೆರನಾದುದು. ಆದರೆ ಅವನು ಜೀತದಾಳು. ಕಿತ್ತು ತಿನ್ನುವ ಬಡತನ ಬೇರೆ. ಇದ್ದಂತಹ ಸ್ವಲ್ಪ ಭೂಮಿಯಲ್ಲಿನ ಬೆಳೆಗೆ ಸಿಗಲಾರದ ಬೆಲೆ. ಸಿಕ್ಕಷ್ಟು ಸಹ ಸಮಯಕ್ಕೆ ಸಿಗಲಾರದೆ ಅವನ ಕುಟುಂಬ ಬದುಕಿನ ಹಸಿವಿನಿಂದ ತತ್ತರಿಸಿ ಹೋಗುತ್ತದೆ. ಹೀಗೆ ಈ ಕತೆಗಳು ಓದುಗನನ್ನು ಸರಾಗವಾಗಿ ಓದಿಸಿಕೊಂಡು ಸಾಗಿ, ಅಂತಃಕರಣವನ್ನು ಮಿಡಿಸುತ್ತವೆ. ಇಲ್ಲಿ ಕತೆಗಾರರು ಚಿಕ್ಕ ಚಿಕ್ಕ ವಾಕ್ಯಗಳ ಮೂಲಕ, ಆಡು ಮಾತಿನ ಗಂಧದೊಂದಿಗೆ, ಸನ್ನಿವೇಶಕ್ಕೆ ತಕ್ಕಂತೆ ನಾಟಕೀಯ ಶೈಲಿಯೊಂದಿಗೆ ಕತೆಗಳನ್ನು ಹೆಣೆದಿದ್ದಾರೆ.

'ಅವ್ವ, ಸಾವು ಮತ್ತು ಕಾಗೆ' ಮತ್ತು 'ಲಿಂಬೆಯೆಂಬ ಬಾಂಬ್' ಇವು ಗ್ರಾಮೀಣ ಸಂಸ್ಕೃತಿಯ ಮೂಢನಂಬಿಕೆಗಳ ಹಿನ್ನೆಲೆಯಲ್ಲಿ ಸಾವಿನ ಆತಂಕವನ್ನು ಪ್ರತಿಬಿಂಬಿಸುತ್ತವೆ. 'ಅವ್ವ, ಸಾವು ಮತ್ತು ಕಾಗೆ' ಮೊದಲನೆಯ ಕಥೆಯಲ್ಲಿನ ನಾಯಕ ಅಣ್ಣಪ್ಪಗೌಡ ಕಾಗೆಮೆಟ್ಟಿನ ಪರಿಹಾರದ ತನ್ನ ತಾಯಿಯ ಹುಸಿ ಸಾವಿನ ಸುದ್ದಿಯನ್ನು ಕೇಳಿ ದಿಗಿಲುಪಡುತ್ತಾನೆ. ಈ ಭಯ-ಆತಂಕಗಳೊಂದಿಗೆ ತಾಯಿ ಮತ್ತು ಮಗನ ನಡುವಿನ ಸಂಬಂಧಗಳು ಪ್ರಸ್ತುತ ಸಮಸ್ಯೆಗಳೊಂದಿಗೆ ಎಳೆ ಎಳೆಯಾಗಿ ಬಿಚ್ಚಿಕೊಳ್ಳುತ್ತವೆ. ಇದೇ ಸಮಸ್ಯೆ ಎರಡನೆಯ ಕತೆಯಲ್ಲಿ ಮಾಟ-ತಂತ್ರಗಳ ಮೂಢ ವಿಚಾರಗಳೊಂದಿಗೆ ಮಾನಸಿಕ ಭ್ರಮೆಗೆ ಬೀಳುವ ಪಾರವ್ವನ ಸಾವಿನೊಂದಿಗೆ ಇಡೀ ಗ್ರಾಮೀಣ ಪರಿಸರವನ್ನು ವ್ಯಾಪಿಸಿಕೊಳ್ಳುತ್ತದೆ. ಆದರೂ ಈ ಕತೆಗಳು ಸಂಕೀರ್ಣಾನುಭವದಿಂದ ದೂರ ಸರಿದು ಹೊಸದೇನನ್ನೂ ಹೇಳುವುದಿಲ್ಲ.

'ಗುಣಮುಖಿ' ಮತ್ತು 'ಕರಗಿಹೋದ ಕೃತಿ ಮೌಲ್ಯ' ಲೇಖಕರ ಚಿತ್ರಕಲಾಸಕ್ತಿಯಿಂದ ಒಡ ಮೂಡಿ ಬಂದ ಬರಹಗಳು. ಕತೆಗಾರರು ಸ್ವತಃ ಚಿತ್ರಗಾರರಾದುದರಿಂದ ಸಹಜವಾಗಿ ಅದರ ಪ್ರಭಾವ ಇಲ್ಲಿ ಮೂಡಿಬಂದಿದೆ. ಆದರೂ ಇಲ್ಲಿ ಕೂಡ ತಾಯಿ ಮತ್ತು ಮಕ್ಕಳ ನಡುವಿನ ಸಂಬಂಧದ ಧ್ಯಾನವೇ ಇದೆ. 'ಗುಣಮುಖಿ' ಖ್ಯಾತ ಚಿತ್ರ ಬರಹಗಾರ ಅವಿನಾಶ ಚೌಧರಿಯವರ ಒಂದು ಚಿತ್ರಪಟ ಗಿರೀಶ ದೇಶಪಾಂಡೆಯ ತಾಯಿ ಸರೋಜಮ್ಮನ ಮಾನಸಿಕ ಅಸ್ವಸ್ಥತೆಯನ್ನು ನಿವಾರಿಸುವಲ್ಲಿ ಸಹಕಾರಿಯಾಗುತ್ತದೆ. ಓದುಗರಿಗೆ ಇದು ಅದ್ಭುತವೆನಿಸುತ್ತದೆಯಾದರೂ ಸತ್ಯ. ಏಕೆಂದರೆ ಚಿತ್ರ ಬರಹದ ಮಹತ್ವವನ್ನು ತಿಳಿಸುವುದೇ ಈ ಕತೆಯ ಮುಖ್ಯ ಆಶಯಗಳಲ್ಲೊಂದು. ಸರಳ-ನೇರ-ನಿರೂಪಣೆ ಕಥೆಗೆ ಒಗ್ಗಿದೆ. ಆದರೆ ಇದೇ ಗುಣ 'ಕರಗಿ ಹೋದ ಕೃತಿ ಮೌಲ್ಯ'ದಲ್ಲಿ ವಿಭಿನ್ನವಾಗಿ ಕಾಣಿಸುತ್ತದೆ. ಇಲ್ಲಿ ವಸ್ತುವಿನ ವೈವಿಧ್ಯತೆ ಇದೆ. ಆದರೆ ಕತೆಯನ್ನು ಹೀಗೇ ಬರೆಯಬೇಕೆಂಬ ಪೂರ್ವನಿಯೋಜಿತ ಭಾವನೆಯಿಂದ ಬಹುಶಃ ಇಲ್ಲಿನ ವಸ್ತು ಸಪ್ಪೆಯಾಗುತ್ತದೆ. ಸಂಗಸಹವಾಸದಿಂದ ತನ್ನ ತಮ್ಮ ಕೆಟ್ಟರೂ ಅದನ್ನು ಪ್ರತಿಭಟಿಸದೆ, ತಾಳ್ಮೆಯಿಂದಲೇ ಎಲ್ಲವನ್ನೂ ಸಹಿಸಿಕೊಂಡು ಸ್ವಂತ ಶ್ರಮದಿಂದ ಪಿತ್ರಾರ್ಜಿತ ಆಸ್ತಿಯನ್ನು ಉಳಿಸಿಕೊಳ್ಳಲು ಹೆಣಗಾಡುವ ಸಂಜಯ ದೇಸಾಯಿಯ ಶ್ರಮ ವಿಫಲವಾಗುವುದು ಕಥೆಗೆ ಶೋಭೆಯೆನಿಸುವುದಿಲ್ಲ.

ಅದ್ಭುತ-ರಮ್ಯ ಶೈಲಿಗೆ ಹತ್ತಿರವೆನಿಸುವ 'ಮಾಯೆಯೋ- ಮಾನವನೋ...' ಕಥೆಗೆ ಅರ್ಥಪೂರ್ಣ ವಸ್ತುವಿದ್ದರೂ ಚುರುಕಾದ ಸಂವೇದನೆಯ ಕೊರತೆಯಿಂದ ಗಂಭೀರ ಚಿಂತನೆಗೊಳಗಾಗುವುದಿಲ್ಲ. ವರ್ಗರಹಿತ ಸಮಾಜದ ರಚನೆಯೇ ಇಲ್ಲಿನ ಆಶಯ. ದಲಿತ ಇಲ್ಲವೇ ಕೆಳವರ್ಗದ ಕಿಟ್ಯಾ ಅನಕ್ಷರಸ್ಥನಾಗಿದ್ದರೂ ಕೆಲವೊಂದು ವಿಚಾರ ವೇದಿಕೆಗಳಲ್ಲಿನ (ಅಂಬೇಡ್ಕರ್ ವಿಚಾರ ವೇದಿಕೆಯಂಥ) ಭಾಷಣಗಳ ಮೂಲಕ ಮನಸ್ಸಿನ ಪ್ರಬುದ್ಧತೆಯೊಂದಿಗೆ ಮೈಮರೆಸಿಕೊಂಡು, ಭಾವು ಮಹಾರಾಜನಾಗಿ ಮೇಲ್ವರ್ಗದ ಮೈಯನ್ನು ಸ್ಪರ್ಶಿಸಿಕೊಳ್ಳುವುದು ಸಮಾನ ಸಂಸ್ಕೃತಿಯ ದ್ಯೋತಕ.

**ಗೋವಿಂದರಾಜ ತಳಕೋಡ**
ಕನ್ನಡ ಅಧ್ಯಯನ ಇಲಾಖೆ, ಏಷ್ಯನ್ ಅಧ್ಯಯನ ಸಂಸ್ಥೆ, ಚೆಮ್ಮನ್‌ಚೆರಿ, ಸೋಲಿಂಗನಲ್ಲೂರ್ ಅಂ., ಚೆನ್ನೈ-೬೦೦ ೧೧೯

**ಸೂತ್ರಧಾರರು** : ನಗುವು ಸಹಜದ ಧರ್ಮ : ನಗಿಸುವುದು ಪರ ಧರ್ಮ !

ನಗುವ ಕೇಳುತ ನಗುವುದತಿಶಯದ ಧರ್ಮ

ನಗುವ ನಗಿಸುವ ನಗಿಸಿ ನಗುತ ಬಾಳುವ ವರವ।

ಮಿಗೆ ನೀನು ಬೇಡಿಕೊಳೊ - ಮಂಕುತಿಮ್ಮ॥

**ಸೂತ್ರಧಾರ ೧)** ಡಿ. ವಿ. ಗುಂಡಪ್ಪನವರ ಬಂಗಾರದಂಥ ಈ ಮಾತನ್ನ ನೀವೆಲ್ಲ ಕೇಳಿದ್ದೀರಿ.

**ಸೂತ್ರಧಾರ ೨)** ಒಮ್ಮೆ ನಗಲೇಬೇಡಿ ಅಂತಾ ಕಾಯಿದೆ ಬಂದರೆ ಏನಾಗ್ತದೆ ಅಂತ ನೀವೇನಾದ್ರೂ ಯೋಚನೆ ಮಾಡಿದ್ದೀರಾ ?

೧) ಅದಕ್ಕೆ-ಇದಕ್ಕೆ ಅಂತ ಕರ ಹೇರುವ ಸರಕಾರ ನಾಳೆ ನಗುವಿಗೂ ಕರ ಹಾಕಿದರೆ ?

೨) ಅಳುವುದೊಂದೇ ದಾರಿ.

೧) ಏಯ್ ! ಏನಂತಿ. ಅಳುವುದೆಂದರೇನು ? ಮನುಷ್ಯ ಇದ್ದೂ ಸತ್ತ ಹಾಗೆ. ಮಾನವ ಸಹಜವಾದ ನಗುವನ್ನು ಬಿಟ್ಟು ಅವನಿರಲಾರ. ಎಂಥ ವಿಪತ್ತು ಬಂದರೂ ನಗೋದನ್ನು ಬಿಡಬಾರದು.

೨) ನಗೆಯೆಂಬುದೇ ಒಂದು ಮದ್ದು. ಔಷಧಿ... ಟಾನಿಕ್ಕು.

೧) ಅದು ಎಲ್ಲರಿಗೂ ಬೇಕೇ ಬೇಕು.

೨) ಹಾಗಾದರೆ ನಮ್ಮ ನಗೆಯೆಂಬ ಮದ್ದಿನ ನಾಟಕ ನೋಡಿ, ಗಂಟು ಮುಖದವರೆಲ್ಲ ಅದರ ಮಹಿಮೆಯನ್ನರಿಯಿರಿ.

ಚಿತ್ತವಿಟ್ಟು ಕೇಳಿರಣ್ಣ ಕತಿಯೊಂದ ಹೇಳತೀವಿ
ಹೀಗೊಂದು ಗಂಗಾಪುರ ಊರು
ಜಮೀನ್ದಾರಿಕೆಯ ಕಾರುಬಾರು - ಅಲ್ಲಿ
ಜಮೀನ್ದಾರತಿಯ ಕಾರುಬಾರು ॥ ಗೀಯಗಾ ಗಾಗೀಯ ಗಾ॥
ಹೇ, ಮಕ್ಕಳು ಮರಿ ಇಲ್ಲದಿದ್ರು ಸೊಕ್ಕು ಏನು ಕಡಿಮೆ ಇಲ್ಲಾ
ಸುಕ್ಕುಗಟ್ಟಿದ ಸಂಸಾರ ಅದು ಕಣ್ರಪ್ಪಾ ॥ ಗೀಯಗಾ ಗಾ॥



ಸತೀಶ್ ಯಲ್ಲಾಪುರ

# ನಗೆಯೆಂಬ ಮದ್ದು

**ಮಕ್ಕಳ ನಾಟಕ**

ಹೇ, ಬಾಯಿ ಇದ್ರೂ ಮೂಕರಾದ ಕಿವಿಯಿದ್ರೂ ಕಿವುಡರಾದ
ಊಳಿಗದಾ ಮಂದಿಯ ತವರೂರಪ್ಪಾ। ಗೀಯಗಾ ಗಾ॥

**ದೃಶ್ಯ-೧**

**(ಜಮೀನುದಾರನು ಕಾಲೊತ್ತಿಸಿಕೊಳ್ಳುತ್ತ ಕೂತಿದ್ದಾನೆ. ಜಮೀನ್ದಾರತಿ ರಾಣಿ ಬರುವಳು).**

**ರಾಣಿ** : ಆಹಾಹಾಹಾ ! ಕೂತುಬಿಟ್ರು, ಕಾಲೊತ್ತಿಸಿಕೊಳ್ತಾ... ಲೋಕಾ ಮರ್ತು. ಇಲ್ಲಿ ಮಕ್ಕಳಿಲ್ಲದ ಕೊರಗು ನನಗೆ. ಯಾರದೇ ಮನೇಲಿ ಕೂಸು ಅತ್ತರೂ ನನಗಾಗಲ್ಲ. ಅಂಥಾದ್ರಲ್ಲಿ ಆ ಬಸಯ್ಯನ ಮನೇಲಿ ಕೂಸು ಹುಟ್ಟಿ ನಗ್ತಾ ಇದೆ. ಹೇಗೆ ಸಹಿಸಲಿ ? ಇನ್ನೂ ಸುಮ್ನೇ ಇದ್ದೀರಲ್ರೀ ? **(ಕೂಸು ಅತ್ತ ಶಬ್ದ)**

**ಜಮೀನ್ದಾರ** : ಕೇಳಿಸ್ತೇನು ? ಕೂಸು ಅತ್ತಿದ್ದು, ಸಂತೋಷಾನಾ ?

**ರಾಣಿ** : ಹಾ ! ಈಗ ನಗ್ತಾ ಇದ್ದಿದ್ದನ್ನ ಕೇಳಿದ್ದೆ ನಾನು !

**ಜಮೀನ್ದಾರ** : ಲೇ... ಲೇ... ನಿನಗೆ ಮಗುವಿನ ನಗೂನೂ ಅಲರ್ಜಿ ಅಂತ ಎಲ್ಲರಿಗೂ ಗೊತ್ತು ಕಣೇ. ಅದ್ಕೇ ಚಿವುಟಿಯಾದ್ರೂ ಮಕ್ಕಳನ್ನ ಅಳಿಸ್ತಾರೆ.

**ರಾಣಿ** : ಕೂಸು ಹುಟ್ಟಿದ ಕೂಡಲೇ ಬಸಯ್ಯ ನಕ್ಕಿದ್ದನಂತೆ ? ಅದಕ್ಕೆ ಶಿಕ್ಷೆ ಮಾಡಿದ್ರೇನು?

**ಜಮೀನ್ದಾರ** : ಯಾಕೆ ? ಸಂಶಯಾನಾ ? ಯಾರಲ್ಲಿ ? ಆ ಬಸಯ್ಯನನ್ನು ಎಳಕೊಂಡು ಬನ್ನಿ ಇಲ್ಲಿ! **(ಎಳೆದು ತರುವರು)** ನೋಡವನ ಮುಖ, ಬರೆ ಹಾಕಿದ್ದೀನಿ. ನಗೋರಿಗೆಲ್ಲಾ ಇದೇ ಶಿಕ್ಷೆ ಅಂತ ಊರಲ್ಲಿ ಇವನ ಮೆರವಣಿಗೆ ಮಾಡಿಸಿದೀನಿ. ಸಮಾಧಾನಾನಾ ?

**ರಾಣಿ** : ಏನ್ ಸಮಾಧಾನಾನೋ ಏನೋ ? ಸಾಕ್ ನಡೀರಿ ಎಲ್ಲ ಕಂಡಿದ್ದೇನೆ. ಹೊಲದ ಕಡೆ ಹೋಗಿ ಬನ್ನಿ.

**(ಎಲ್ಲ ಹೋಗುವರು)**

**ಸೂತ್ರಧಾರರು** - ಬಂತೋ। ಬಂತು ಬಂತು ಬಂತು (ಎರಡು ಬಾರಿ)
ನಗಬಾರದೆಂಬ ಕರಾಳ ಶಾಸನ
ಗಂಗಾಪುರಕೆ ಬಂತು ॥
ಹಲ್ಲು ಕಿಸಿಯಲು ತೊಂದರೆ ಬಂತು
ಸಂತಸ ಕಾಣಲು ತೊಂದರೆ ಬಂತು
ಜನಕೆಲ್ಲಾ ಬರೀ ದುಃಖವ ತಂತು
ನಕ್ಕರೇ... ನಕ್ಕವ ಸಿಕ್ಕರೇ ಜೀವಕೇ ಅಪಾಯ ತಂತು ॥

**ಸೂತ್ರಧಾರ** : ೧) ಹೀಗೆ ಗಂಗಾಪುರದಲ್ಲಿ ಯಾರೂ ನಗಬಾರದೆಂಬ ಕಾನೂನು ಮಾಡಿದ್ರು.

೨) ನಕ್ಕವರನ್ನು ಗುರುತಿಸಲು ಗೂಢಚಾರರನ್ನೂ ನೇಮಿಸಿದ್ರು.

೧) ನಕ್ಕವರಿಗೆ ಚಾಟಿ ಏಟು, ಬರೆ ಹಾಕುವುದು, ಕಮರಿಗೆ ತಳ್ಳುವುದು ಮುಂತಾದ ಉಗ್ರಶಿಕ್ಷೆ ಕೊಡತಿದ್ರು.

೨) ಹೀಗಿರಲು ಗಂಗಾಪುರದ ಜನರ ಪರಿಸ್ಥಿತಿ... ಅಯ್ಯೋ ಪಾಪ, ನೀವೇ ನೋಡಿ.

**ದೃಶ್ಯ-೨**

**(ಬೀದಿ ದೃಶ್ಯ: ಗಂಗಾಪುರದ ಜನ ಸುಖ-ದುಃಖ ಹಂಚಿಕೊಳ್ಳುತ್ತಿರುತ್ತಾರೆ)**

**ಸಂಗಮ್ಮ** : ಏನಪ್ಪಾ ಈ ವಿಧಿಯಾಟ. ಮನೇಲಿ ಕೂಸು ಹುಟ್ಟಿದೆ ಅಂತ ಸಂತಸ ಪಡುವ ಹಾಗಿಲ್ಲ. ಕೂಸು ಹುಟ್ಟಿ ನಗುವ ಹಾಗಿಲ್ಲ.

**ಕಮಲಮ್ಮ** : ಹೌದೌದು.. ಅದೂ ಗಂಡು ನಿಮ್ಮನೇಲಿ ಹುಟ್ಟಿದೆ. ತುಂಬಾ ಸಂತೋಷಾನಮ್ಮಾ ತುಂಬಾ ಸಂತೋಷ. ಆ ಮಗು ಆ ದಿನ ನಗ್ತು ಅಂತ ಅದರ ತಾಯಿಯಿಂದಾನೇ ಎರಡು ದಿನ ದೂರ ಮಾಡಿ ಎದೆ ಹಾಲಿಲ್ಲದ ಆ ಕೂಸಿನ ಅಳು ಆ ಜಮೀನ್ದಾರತಿಗೆ ಹಾಲು ಕುಡಿದಷ್ಟೇ ಸಂತೋಷ ಆಗಿರ್ಬೇಕು.

**ಸಂಗಮ್ಮ** : **(ದುಃಖತಪ್ತ ದನಿಯಲ್ಲಿ)** ನಮ್ಮ ಕೂಸಿನ ಆಟ ಎಷ್ಟು ಚೆಂದ. ಕಾಲು ಬಡಕೊಂಡು ತೊಟ್ಟಿಲಲ್ಲಿ ಆಡೋದು ನೋಡಿದರೆ...

**ಕಮಲಮ್ಮ** : ಹೌದಮ್ಮಾ, ಆ ಮಗುವಿನ ಬಣ್ಣ ಎಷ್ಟು ಸುಂದರವಾಗಿದೆ. ಕೂಸಿರುವ ಮನೆಗೆ ಬೀಸಣಿಕೆ ಯಾತಕೆ ಅನ್ನೋ ಈ ಮಾತು ಸುಳ್ಳಲ್ಲಾ. ಮಗು ನಕ್ಕಾಗ ಚಿವುಟ

ಅಳಿಸಬೇಕಾದ ತಾಯ್ತನ ಯಾವ ಜನ್ಮದ ಪಾಪಾನೋ ಏನೋ ?

**ರಾಮಣ್ಣ** : ನಮ್ಮ ಹೊಲದ ಬಳಿಯ ಮರದಲ್ಲಿ ಹೆಜ್ಜೇನು ಬಂದಿದೆ. ಅದರ ತುಪ್ಪ ತೆಗೆದು ನಾಲ್ಕು ಮಂದಿಗೆ ಹಂಚಬೇಕೂ ಅನ್ನೋ ಆಸೆ. ಆದರೆ ಯಾಕೋ ಮನಸ್ಸಿಗೇ ಸುಖವಿಲ್ಲ.

**ಭೀಮಣ್ಣ** : ಹಾಗೇನೂ, ನಮ್ಮ ಮಾವಿನ ಮರದಲ್ಲಿ ಮಾವಿನ ಹಣ್ಣುಗಳು.. ಅಯ್ಯೋ ಏನು ಹೇಳಲಿ ? ಅದರ ಬಣ್ಣ, ರುಚಿ ಅದನ್ನು ತಿಂದರೆ ಮಾತ್ರ ತಿಳಿಯುತ್ತೆ.

**ರಾಮಣ್ಣ** : ಹಣ್ಣು ಎಷ್ಟು ಸಿಹಿಯಾದ್ರೇನಪ್ಪಾ, ಹುಳಿ ಮುಖ ಮಾಡಿಕೊಂಡೇ ತಿನ್ನಬೇಕಾದ ಕರ್ಮ ನಮ್ಮದು.

**ಸಂಗಮ್ಮ** : ರಾಮಣ್ಣ, ಭೀಮಣ್ಣ ನಾಳೆ ನಮ್ಮ ಮನೆಗೆ ಬನ್ನಿ. ನಮ್ಮ ಗಂಡು ಕೂಸಿಗೆ ನಾಮಕರಣದ ಹಬ್ಬವಿದೆ, ಊಟ ಮಾಡಿ ಮಗುವನ್ನು ಅಳಿಸಿ ಹೋಗುವಿರಂತೆ.

**ರಾಮಣ್ಣ** : ಆಗಲಮ್ಮ, ಯಾವ ಜನ್ಮದಲ್ಲಿ ಏನ ಪಾಪಾ ಮಾಡಿದ್ವೋ ಕೂಸನ್ನು ಹರಸೋ ಬದಲು ಅಳಿಸಬೇಕಾಗಿ ಬಂದಿದೆ.

**(ಹೆಂಗಸರು ಹೋಗುವರು)**

**ರಾಮಣ್ಣ** : ಏನ್ ಭೀಮಣ್ಣ, ನಿನ್ನ ಕಣ್ಣು ಗುಳಿ ಬಿದ್ದ ಹಾಗೆ ಕಾಣ್ತಾ ಇದೆ. ಅದರಲ್ಲಿ ಹೊಳಪೇ ಇಲ್ಲ, ಏನಾಯ್ತು ?

**ಭೀಮಣ್ಣ** : ಶಕ್ತೀನೇ ಇಲ್ಲಪ್ಪಾ. ಒಂಥರಾ ಸುಸ್ತು. ನಿಂತರೆ ಕೂತ್ಕೊಳೋ ಹಾಗಾಗುತ್ತೆ, ಕುಂತ್ರೆ ಮಲಕೊಳೊ ಹಾಗಾಗುತ್ತೆ, ಹೌದೂ.... ನೀನು ಈಗ ಮೊದಲಿನ ರಾಮಣ್ಣ ಅಲ್ಲ, ಭಾಳ ಬಡಕಲಾಗಿದ್ದೀಯ.

**ರಾಮಣ್ಣ** : ನಂದೂ ಅದೇ ಕತೆ... ಊಟ-ತಿಂಡಿ ಒಂದೂ ಸೇರೊಲ್ಲಾ. ರುಚೀನೇ ಇಲ್ಲಾ, ಹಬ್ಬದ ಅಡಿಗೇನೂ ಸಪ್ಪೆ ಅನಿಸ್ತಾ ಇದೆ.

**(ಸೋಮಣ್ಣನ ಪ್ರವೇಶ)**

**ಸೋಮಣ್ಣ** : ಏನ್ರಪ್ಪಾ... ಏನ್ ಸುದ್ದಿ... ನಂದೂ ಒಂದಿಷ್ಟು ಕೇಳಿ. ದಿನಾಲೂ ಬೆಳಿಗ್ಗೆ ಬೆಳಿಗ್ಗೆ ಸರಕ್ಕಂತ ಎದ್ದು ಹೊಲಕ್ಕೆ ಹೋಗ್ತಿದ್ದೆ ಹೌದೋ ಅಲ್ವೋ ?

**ಭೀಮಣ್ಣ** : ಹೌದು... ಏನಾಯ್ತೀಗ ?

**ಸೋಮಣ್ಣ** : ಈಗ ಹೊಲಾ ಅಲ್ಲಾ... ಹಾಸಿಗೇ ಬಿಟ್ಟು ಏಳೋಕೇ ಆಗ್ತಾ ಇಲ್ಲಾ.

**ಭೀಮಣ್ಣ** : ಜಡ್ಡು !

**ಸೋಮಣ್ಣ** : ಏನೋ ಮಾರಾಯಾ, ಈ ಬದುಕೇ ಬೇಡವಾಗಿದೆ.

**ಭೀಮಣ್ಣ** : ನಂಗಂತೂ ಮುಖಾ ಎಲ್ಲಾ ಒಂಥರಾ ಗಟ್ಟಿ ಆದ ಹಾಗೆ ಕಾಣ್ತಾ ಇದೆ, ನಿಂದ ನೋಡೋಣ ? **(ರಾಮಣ್ಣ ಮುಖ)** ಹೌದಲ್ಲಾ, ಒಂಥರಾ ಗೋಡೆ ಮೇಲೆ ಕೈ ಆಡಿಸಿದ ಹಾಗಾಗುತ್ತೆ.

**ರಾಮಣ್ಣ** : ಈಚೀಚೆಗೆ ನನ್ಹೆಂಡ್ತಿ ಮೇಲೆ ತುಂಬಾ ಸಿಟ್ಟು ಬರುತ್ತೆ. ಯಾವಾಗ್ ನೋಡಿದ್ರೂ ಮಾರುದ್ದ ಮೂತಿ ಮಾಡ್ಕೊಂಡಿರ್ತಾಳೆ. ಅವಳಿಗೂ ಆರೋಗ್ಯ ಸರಿ ಇಲ್ಲಾ. ಯಾವ ಪಾತ್ರೆ ಕೈಯಲ್ಲಿ ಹಿಡಿದರೂ ಧಣ್ ಅಂತ ಕೆಳಗೆ. ಮನೆಯಲ್ಲಿನ ಎಲ್ಲ ಪಾತ್ರೆಗಳ ತಳಾನೂ ನಮ್ಮ ಮುಖದ ಹಾಗೇ ಗುಳಿ ಬಿದ್ದಿವೆ.

**ಸೋಮಣ್ಣ** : ನಿನ್ನ ಹೆಂಡ್ತಿ ವಿಷ್ಯ ಇರ್ಲಪ್ಪಾ, ನನ್ಹೆಂಡ್ತಿ ಈಗಾಗ್ಲೇ ನಾಲ್ಕು ಕೊಡ ಬಾವೀಲಿ ಹಾಕಿದ್ದಾಳೆ. **(ರಾಮ ಸೋಮ ಏಳುವರು)**

**ಭೀಮಣ್ಣ** : ಏನೇ ಹೇಳಿ, ನಮ್ಮ ಊರಿನ ಮಂದಿಗೆಲ್ಲ ಎಂಥದೋ ವಿಚಿತ್ರ ಖಾಯಿಲೆ ಬಂದಿದೆ. ನಮ್ಮ ಊರಿಗೆ ಏನೋ ಗರ ಬಡಿದಿದೆ. ಸ್ವಲ್ಪ ನನ್ನ ಕೈ ಹಿಡಿದೆತ್ರೋ. ಕಾವೇರಪ್ಪ ನಾಳೆ ಸಾಯೋ ಸ್ಥಿತೀಲಿದ್ದಾನೆ. ನಡೀರಿ ಅವನನ್ನ ನೋಡಿ ಬರೋಣ.

**ಸೂತ್ರಧಾರರು** : ಗಂಗಾಪುರ ಅಲ್ಲ ರೋಗಾಪುರ ॥

ಯಾರೂ ಅರಿಯದ, ಯಾರೂ ತಿಳಿಯದ
ಬೇನೆಗೆ ತುತ್ತಾದ ಗಂಗಾಪುರ
ಎಲ್ಲಿ ನೋಡಿದರೂ ಪೇಲವ ಮುಖಗಳು
ಎಲ್ಲಿ ನೋಡಿದರೂ ಸುಸ್ತಿನ ಜನಗಳು ॥
ಹಾಸಿಗೆಯನು ಬಿಟ್ಟೇಳದ ಜನಗಳು
ರೋಗದ ಕಾರಣ ತಿಳಿಯದ ಮೂಢರು ॥

೧) ಗಂಗಾಪುರದ ಜನರಿಗೆ ಯಾವುದೋ ಅರಿಯದ ರೋಗ ಬಂದಿದೆ.
೨) ಯಾರಲ್ಲೂ ಉತ್ಸಾಹವಿಲ್ಲ... ಶಕ್ತಿ ಇಲ್ಲಾ... ಕಳೆಯೇ ಇಲ್ಲಾ!
೧) ನಿರುತ್ಸಾಹ ಇದೆ. ಅಶಕ್ತತೆ ಇದೆ... ನಿಸ್ತೇಜವಿದೆ.
೨) ಹೊಲದ ನಂಟಲಿದ್ದವರೆಲ್ಲಾ ಹಾಸಿಗೆಗೆ ಅಂಟಿದ್ದಾರೆ.
೧) ಜಮೀನ್ದಾರನ ಮನೆ ಕೆಲಸವನ್ನೂ ತೊರೆದಿದ್ದಾರೆ.

ಗಂಗಾಪುರ ಅಲ್ಲ ರೋಗಾಪುರ (ಹಾಡುತ್ತಾ ಹೋಗುವರು)

**ದೃಶ್ಯ-೩**

**(ಜಮೀನ್ದಾರ ಮತ್ತವನ ರಾಣಿ ಕೂತಿದ್ದಾರೆ)**

**ಜಮೀನ್ದಾರ** : ರಾಣಿ, ನಮ್ಮ ಜನಕ್ಕೆಲ್ಲ ಇದೇನು ರೋಗ ಬಂತೂ ಅಂತೀನಿ. ಕೆಲಸಕ್ಕೇ ಬರ್ತಾ ಇಲ್ಲ. ಎಲ್ಲ ಹಾಸಿಗೆ ಹಿಡಿದಿದ್ದಾರೆ.

**ರಾಣಿ** : ಹೌದು, ಈ ರೋಗದ ನಿವಾರಣೆ ಮಾಡ್ಲಿಕ್ಕೆ ಮೊನ್ನೆ ಮಂತ್ರವಾದಿಯನ್ನೂ ಕರೆದು ನೋಡಿದ್ದಾಯ್ತು. ಏನೂ ಪ್ರಯೋಜನವಾಗಲಿಲ್ಲ. ಇದಕ್ಕೆ ತಕ್ಕ ಔಷಧೀನೇ ಇಲ್ವೇ ? (ಗದರಿಸುತ್ತ) ನೀವೊಬ್ರು ಇಲ್ಲಿ ಚಿಂತೆ ಮಾಡತಾ ಕೂತಿದ್ದೀರಾ, ಯಾವುದಾದರೂ ಒಳ್ಳೇ ವೈದ್ಯರನ್ನು ಹುಡುಕಬೇಡ್ವೇ ?

**ಜಮೀನ್ದಾರ** : ಅಗೋ ನೋಡು, ಯಾರೋ ಒಬ್ಬರು ನಮ್ಮ ಕಡೆಗೇ ಬರ್ತಾ ಇದ್ದಾರೆ.

**ರಾಣಿ** : ಯಾರಪ್ಪಾ ನೀನು ? ಈ ಮುದಿ ವಯಸ್ಸಿನಲ್ಲಿ ಹೀಗೆ ತಿರುಗುತ್ತಿಯಲ್ಲಾ, ಮನೆ ಮಠ ಇಲ್ವೇನು ?

**ಅಜ್ಜ** : ಈ ಜಗತ್ತೇ ನನ್ನ ಮನೆ. ಆಕಾಶವೇ ಮನೆಯ ಸೂರು. ನೆಲವೇ ನನ್ನ ಹಾಸಿಗೆ.

**ಜಮೀನ್ದಾರ** : ಅಲ್ಲಾ, ನಮ್ಮ ಊರಿಗೆ ಯಾಕೆ ಬಂದಿರಿ ?

**ಅಜ್ಜ** : ಹೀಗೇ ಪ್ರಯಾಣ ಕಾಲದಲ್ಲಿ ನಿಮ್ಮ ಊರಿನ ವಿಚಿತ್ರ ರೋಗದ ವಿಚಾರ ನನಗೆ ತಿಳಿಯಿತು. ಹಿಮಾಲಯದ ಕಡೆಯಿಂದ ಬರುವಾಗ ಒಂದಿಷ್ಟು ಗಿಡಮೂಲಿಕೆಗಳನ್ನು ತಂದಿದ್ದೆ. ಅದು ನಿಮ್ಮೂರಿನ ಜನರ ಬೇನೆ ದೂರ ಮಾಡುತ್ತೆ.

**ರಾಣಿ** : ಹಾಗೇನು ?! ಒಳ್ಳೇದಾಯ್ತು, ಆದ್ರೆ ಪ್ರತಿಯಾಗಿ ನಿನಗೆ ಏನೂ ಕೊಡಲು ಸಾಧ್ಯವಿಲ್ಲ. ಎಷ್ಟೋ ಜನ ಪ್ರಯತ್ನ ಮಾಡಿ ಕೈ ಬಿಟ್ಟಿದ್ದಾರೆ. ನೀನೊಂದು ಪ್ರಯತ್ನ ಮಾಡುವುದಿದ್ದರೆ ಮಾಡಿಕೊ.

**ಅಜ್ಜ** : ಆಗಲಿ ತಾಯಿ, ನನ್ನ ಔಷಧಿಗೆ ಪ್ರತಿಯಾಗಿ ನನಗೆ ಏನೂ ಕೊಡುವುದು ಬೇಡ. ಜನರ ರೋಗ ದೂರವಾದರೆ ಅದೇ ದೇವರ ಸೇವೆ.

**ರಾಣಿ** : ಆಯಿತು, ನೀನಿನ್ನು ಹೊರಡು. **(ಅಜ್ಜ ಹೊರಡುವನು)** ಅಲ್ಲಾ, ದಮ್ಮಡಿ ಖರ್ಚಿಲ್ಲದೇ ನಮ್ಮ ಜನರ ಖಾಯಿಲೆ ಗುಣವಾಗುವುದಾದರೆ ಆಗಲಿ ಬಿಡಿ.

**ಸೂತ್ರಧಾರರು** : ನೋಡಿರಣ್ಣ, ನೋಡಿರಕ್ಕ

ಬರ್ತಾ ಇದ್ದಾನೆ, ಅಜ್ಜ ಬರ್ತಾ ಇದ್ದಾನೆ.
ದೂರದಿಂದ ಬಂದಿದ್ದಾನೆ
ಔಷಧಿ ಕೂಡ ತಂದಿದ್ದಾನೆ
ಊರ ತುಂಬಾ ತಿರುಗಿದ್ದಾನೆ
ರೋಗಿಗಳನ್ನು ನೋಡಿದ್ದಾನೆ
ರೋಗದ ಕಾರಣ ತಿಳಿದಿದ್ದಾನೆ ॥



**ಅಜ್ಜ** : ಹೌದೌದು.... ನಾನು ತುಂಬಾ ದೂರದಿಂದ ಬಂದವನು. ಹೇಗೋ ನನ್ನ ಕಿವಿಗೆ ಬಿತ್ತು ಈ ಊರಿನ ಜನರ ರೋಗದ ವಿಚಾರ. ವಿಚಿತ್ರ ಜನ, ವಿಚಿತ್ರ ರೋಗ, ಎಷ್ಟೆಷ್ಟೋ ಔಷಧ ಮಾಡಿದರಂತೆ, ಕಡಿಮೆ ಆಗಿಲ್ವಂತೆ. ಊರಿನ ರೋಗಿಗಳನ್ನೆಲ್ಲ ಮಾತನಾಡಿಸಿದ್ದಾಯ್ತು, ಅವರ ರೋಗದ ಮೂಲದ ಪತ್ತೆ ಆಗಿದೆ. ಮೇಲಾಗಿ ಜಮೀನ್ದಾರರನ್ನು ಭೆಟ್ಟಿ ಮಾಡಿ ಯಾವ ಪ್ರತಿಫಲಾಪೇಕ್ಷೆ ಇಲ್ಲದೇ ಔಷಧಿ ಮಾಡುವುದಾಗಿ ಹೇಳಿದ್ದೇನೆ. ಅದಕ್ಕೇ ಈ ಗಿಡ ಮೂಲಿಕೆ. ಕಷಾಯ ಮಾಡಿ ಕುಡಿಯಿರಿ ಅಂತ ಹೇಳ್ಬೇಕು. ಖರೇ ಹೇಳಬೇಕೆಂದರೆ ಇವರ ರೋಗಕ್ಕೆ ಈ ಮೂಲಿಕೆ ಮದ್ದೇ ಅಲ್ಲ, ಆದರೆ ವ್ಯಾಧಿಯ ಬಗ್ಗೆ ತೀರ ನಂಬಿರುವ ಜನಕ್ಕೆ ಒಂದು ಔಷಧಿ ಬೇಕೇ ಬೇಕು. ಇಲ್ಲಿನ ಜನರ ಆರೋಗ್ಯಕ್ಕೆ ತೊಂದರೆಯಾದದ್ದು ನಗೆಯಾಡದೇ ಇರುವುದರಿಂದ. ಮುಖ, ಮೈ, ದೇಹ ಮುಖ್ಯವಾಗಿ ಮನಸ್ಸು ಎಲ್ಲ ಜಡ್ಡುಗಟ್ಟಿರುವುದು. ಇರಲಿ, ಇಲ್ಲಿನ ಜನರನ್ನು ಹೇಗಾದರೂ ಮಾಡಿ ನಗಿಸಬೇಕಾಗಿದೆ. ನಿರ್ಭಯವಾಗಿ ಅವರು ನಗುವಂತೆ ಮಾಡಲು ನನ್ನನ್ನೇ ನಾನು ತೊಂದರೆಗೆ ಸಿಲುಕಿಸಿಕೊಳ್ಳಲೂ ಹಿಂಜರಿಯಬಾರದು. ಯಾವೊಬ್ಬನಾದರೂ ರೋಗಿಗೆ ಹೇಗಾದರೂ ಮಾಡಿ ನಗೆಯ ದಿವ್ಯ ಔಷಧ ಸೇವಿಸಲು ಅವನ ಆರೋಗ್ಯ ಸುಧಾರಿಸುವಂತೆ ಮಾಡಿದರೆ ಆಗ ನನ್ನ ಕೆಲಸ ಸುಲಭವಾಗುತ್ತದೆ. (ಅಷ್ಟರಲ್ಲಿ ರೋಗ ಪೀಡಿತನೊಬ್ಬ ಅಲ್ಲಿಗೆ ಬಂದು ಧೊಪ್ಪನೆ ಬೀಳುತ್ತಾನೆ. ಬಿದ್ದವನನ್ನು ಎಬ್ಬಿಸಲು ಇನ್ನಿಬ್ಬರು ಬರ್‍ತಾರೆ).

## ದೃಶ್ಯ-೪

**ಅಜ್ಜ** : ಅಯ್ಯೋ!.... ಬಿದ್ದೇಬಿಟ್ಟ, ನಿಧಾನಕ್ಕೆ ಕೂಡ್ರಿಸಪ್ಪಾ ಅವನ್ನ. ಹಾ...ಹಾ... ಹಾಗೆ. ಏನಪ್ಪಾ, ತುಂಬಾ ನೋವಾಯ್ತು? ನೋಡು ಈ ಮೂಲಿಕೆ ಕಷಾಯ ಮಾಡಿ ಕುಡಿ ನಿನ್ನ ನೋವೆಲ್ಲ ಮಾಯವಾಗುತ್ತೆ.

**ರೋಗಿ** : ಅಜ್ಜಾ ಈ ಕಷಾಯದಂಥದ್ದನ್ನು ಈಗಾಗಲೇ ಹತ್ತಾರು ಬಾರಿ ಕುಡಿದಾಯ್ತು. ಪ್ರಯೋಜನವಿಲ್ಲ. ನಾನು ಇವತ್ತು ಸತ್ತರೆ ಒಳ್ಳೆಯದೋ ಅಥವಾ ನಾಳೆ ಸತ್ತರೆ ಒಳ್ಳೆಯದೋ ಸ್ವಲ್ಪ ಹೇಳ್ತೀರಾ ?

**ಅಜ್ಜ** : ನೋಡು.... ನಿನಗೆ ಬಂದಿರೋದು ಅಷ್ಟು ದೊಡ್ಡ ಖಾಯಿಲೆ ಅಂತ ಭಾವಿಸಿದೆಯಾ ? ನಾನು ಹೇಳುವ ಇನ್ನೊಂದು ಔಷಧಿ ಸೇವಿಸಿ ಆಗ ನಿಮ್ಮ ಇಡೀ ಊರಿನ ಈ ರೋಗ ವಾಸಿಯಾಗುತ್ತದೆ.

**ರೋಗಿ ಮತ್ತಿತರರು** : ಹಾ ! ಹೌದಾ ? ಯಾವ ಔಷಧಿ ? ಬೇಗ ಹೇಳಿ, ಬೇಗ ಹೇಳಿ.

**ಅಜ್ಜ** : ಏನಿಲ್ಲ, ನೀವೆಲ್ಲ ಸ್ವಲ್ಪ ನಗೆಯಾಡಬೇಕು.

**ಇತರರು** : ಏನಯ್ಯಾ ? ಎಂಥದೋ ದಿವ್ಯ ಔಷಧಿ ಕೊಡುವವನಂತೆ ಮಾಡಿ ಈಗ ಸಾಯುವ ದಾರಿ ತೋರಿಸ್ತಿಯಲ್ಲ. ನಕ್ಕರೆ ನಮ್ಮ ಊರಿನವರಿಗೆ ಉಳಿಗಾಲವುಂಟೇ ? ನಗೆಯಾಡಬೇಕಂತೆ ನಗೆ, ತಲೆಗಿಲೆ ಕೆಟ್ಟಿಲ್ಲಾ ತಾನೇ ?

**ಅಜ್ಜ** : ಅಲ್ರಯ್ಯಾ, ನಿಮ್ಮನ್ನು ಸಾವಿನ ಕೂಪಕ್ಕೆ ತಳ್ಳಿ ನಾನು ಸಾಧಿಸಬೇಕಾದದ್ದಾದ್ರೂ ಏನು ? ನೋಡಿ ನೀವು ನಿಮ್ಮ ಜಮೀನ್ದಾರರ ಶಿಕ್ಷೆಗೆ ಹೆದರಿ ನಗುವುದನ್ನೇ ನಿಲ್ಲಿಸಿ ಬಿಟ್ಟಿದ್ದೀರಿ. ಪ್ರಕತಿ ಸಹಜವಾದ ನಗುವನ್ನು ಬಿಟ್ಟು ಮಾನವ ಬದುಕಲಾರ. ನಗುವಿನ ಮಹಿಮೆ ನೀವೇನು ಬಲ್ಲಿರಿ ? **(ಹಾಡುವನು)**

ನಗೆ ಇಲ್ಲದ ಮೊಗ ಸುಣ್ಣವಿಲ್ಲದ ಗೋಡೆಯಂತೆ
ನಗೆ ಇಲ್ಲದ ಮನೆ ಮಗುವಿಲ್ಲದ ಮನೆಯಂತೆ
ನಗೆ ಇಲ್ಲದ ನುಡಿ ರಸರಹಿತ ಕಬ್ಬಿನಂತೆ
ನಗೆ ಇಲ್ಲದ ದೇಹ ಆತ್ಮವಿಲ್ಲದ ಶವದಂತೆ

ನಾಲ್ಕು ಜನರ ನಡುವೆ ಬದುಕುವಾಗ ನಗೆಯೇ ಇಲ್ಲದೆ ಬದುಕಲು ಸಾಧ್ಯವಿಲ್ಲ. ನಗೆ ಮುಖಕ್ಕೆ ಭೂಷಣ, ನಗೆ ಸ್ನೇಹಕ್ಕೆ ಭೂಷಣ, ನಗೆ ಮನಸ್ಸಿನ ಆರೋಗ್ಯದ ಬಾಗಿಲು, ನಗೆ ಮುಖ ಚಂದ್ರಮನ ಪ್ರಭಾವಳಿ, ನಿಮ್ಮ ಮುಖದ ನರಗಳನ್ನೆಲ್ಲ ಹಿಗ್ಗಿಸಿ ಸೌಂದರ್ಯವನ್ನು ಹೆಚ್ಚಿಸುತ್ತದೆ. ಇಂಥ ನಗೆಯನ್ನು ನಿಮ್ಮಿಂದ ಜಮೀನ್ದಾರ ಕಸಿದುಕೊಳ್ಳಲು ಬರುವುದಿಲ್ಲ. ನಗೆ ಮನುಷ್ಯನ ನೈಸರ್ಗಿಕ ಕ್ರಿಯೆ, ಅದರ ಮೇಲೆ ಯಾರೂ ಹಕ್ಕು ಸ್ಥಾಪಿಸಲು ಬರುವುದಿಲ್ಲ. ನೀವು ನಕ್ಕರೆ ಸ್ವರ್ಗ ಸಿಕ್ಕಂತೆ, ತಿಳಿಯಿತೋ ನಗುವಿನ ಮಹಿಮೆ ?

**ಇತರರು** : ತಿಳಿಯಿತು, ಆದರೂ ನಮಗೆ ಜಮೀನ್ದಾರರ ಚಾಟಿ ಏಟಿನ ಹೆದರಿಕೆ ಇದೆ.

**ಅಜ್ಜ** : ಛೆ ! ನಿಮ್ಮ ಅಧೈರ್ಯಕ್ಕೆ ಧಿಕ್ಕಾರವಿರಲಿ. ಆದರೂ ನಾನೊಂದು ಉಪಾಯ ಹೇಳುವೆ. ನಿಮಗೆ ನಗಬೇಕೆನಿಸಿದಾಗ ಮುಸುಕಿನಲ್ಲಿ ನಗೆಯಾಡಿ, ಯಾರಿಗೂ ಕಾಣಿಸದು. ಎಲ್ಲಿ, ಮುಸುಕು ಹಾಕಿಕೊಳ್ಳಿ, ಒಮ್ಮೆ ನಗೆಯಾಡಿ.

**(ರೋಗಿ ಮತ್ತಿತರರು ಮುಸುಕು ಹಾಕಿ ನಗುವರು)**

**ರೋಗಿ** : ಅಬ್ಬಾ! ಈಗ ನಾನು ಹಗುರಾಗಿದ್ದೇನೆ. ಏನೋ ಭಾರ ಕಳೆದು ಕೊಂಡಂತಿದೆ. ಆರಾಮವಾಗಿದೆ.

**ಇತರರು** : ನಮಗೂ ಅಷ್ಟೇ ! ಖುಷಿಯಾಗ್ತಿದೆ ಅಜ್ಜಾ, ಇನ್ನೊಮ್ಮೆ ನಗುವ ಆಸೆಯಾಗ್ತಿದೆ.

**ಅಜ್ಜ** : ನೋಡಿದಿರಾ, ನಗುವಿನ ಶಕ್ತಿ ಎಂಥದ್ದು ಅಂತ. ನೀವು ನಗಿ, ನಿರ್ಭೀತಿಯಿಂದ ನಗಿ. ಭಯವಾದರೆ ಮುಸುಕಿನಲ್ಲಿ ನಗಿ.

**ಇತರರು** : ಪುಣ್ಯಾತ್ಮಾ, ನಿನಗೆ ಸಾವಿರ ನಮಸ್ಕಾರ. ನಮಗೆ ಹೊಸ ಜನ್ಮ ನೀಡಿದ ದೇವರು ನೀನು.

**ಅಜ್ಜ** : ಹೊಗಳಿಕೆ ಸಾಕು, ಈಗಲೇ ಹೊರಡಿ, ಊರಿನ ಜನರಿಗೆಲ್ಲ ಮುಸುಕಿನ ನಗೆಯ ಔಷಧಿಯ ಬಗ್ಗೆ ತಿಳಿಸಿ. ಗುಟ್ಟಾಗಿರಲಿ.

**ಸೂತ್ರಧಾರರು** : ನಗುವಿನ ಮಾಯಾಶಕ್ತಿ
ನಗುವಿನ ಪ್ರಚಂಡ ಶಕ್ತಿ
ನೋಡಿರಿ ನೋಡಿರಿ ನಗೆಯಾಟ
ಸಂತಸಪಡಿರಿ ನಗುನಗುತ
ದೊರಕಿತು ದೊರಕಿತು ದಿವ್ಯ ಔಷಧ
ಜೀವ ನೀಡಿತು ದಿವ್ಯ ಔಷಧ
ಆದರೆ, ಮುಂದೇನಾಗುತ್ತೆ ನೀವೇ ನೋಡಿ.

**(ನಾಲ್ಕು ಜನ ತಲೆ ಮೇಲೆ ವಸ್ತ್ರಹಾಕಿಕೊಂಡು ಅದೂ ಇದೂ ಮಾತನಾಡುತ್ತ ಬರುತ್ತಾರೆ. ನಗುವ ಸಂದರ್ಭ ಬಂದಂತೆಲ್ಲ ಮುಸುಕು ಹಾಕಿ ನಗುತ್ತಿರುತ್ತಾರೆ. ಅಷ್ಟರಲ್ಲಿ ಜಮೀನ್ದಾರನ ಗೂಢಚಾರನ ಪ್ರವೇಶವಾಗುತ್ತದೆ).**

**ಗೂಢಚಾರ** : **(ಜನರ ವರ್ತನೆ ನೋಡಿ)** ಏನ್ರಪಾ ಭಾಳ ಖುಶೀಲಿ ಇದ್ದಾಗಿದೆ ?

**ರಾಮ** : ಖುಷಿ ಅದು... ಅದು ಕಾಣದೇ ಭಾಳ ದಿವಸಾಯ್ತು ಬಿಡಿ.

**ಭೀಮ** : **(ಗೂಢಚಾರನ ಬೆನ್ನ ಹಿಂದೆ ಹೋಗಿ ಮುಸುಕು ಹಾಕಿ ಕಿಸಕ್ಕಂತ ನಗುತ್ತಾನೆ. ಗೂಢಚಾರ ಅವನತ್ತ ತಿರುಗಿದ ಕೂಡಲೇ)** ಮತ್ತೇನ್ರೀ, ತಮ್ಮ ಸವಾರಿ ಈ ಕಡೆ ಬರೋಣವಾಯ್ತು ?

**ಗೂಢಚಾರ** : ಏನು ಭಾಳ ಚಿಗುರಿದ ಹಾಗೆ ಕಾಣ್ತೇರಲ್ಲ. ಈಗ ನನ್ನಿಂದೆ ಕಿಸಕ್ಕಂತ ನಗೆಯಾಡಿದೆಯಾ ?



**ಭೀಮ** : ಅಯ್ಯೋ ಶಿವನೇ, ನಗೋದು ಯಾರಿಗೆ ಬೇಕಾಗಿದೆ. ಚಾಟಿ ಏಟು, ಬರೆ... ಅಬ್ಬಬ್ಬಾ ನೆನೆಸಿಕೊಂಡ್ರೆ.

**ರಾಮ** : ಅಲ್ಲಾ, ನಿಮಗೂ ನಗು ಕೇಳದೇ ಭಾಳ ದಿವಸ ಆಗಿದ್ದಕ್ಕೆ, ಕಿಸಕ್ಕಂತ ಶಬ್ದ ಬಂದ್ರೆ ಸಾಕು, ನಗುವಿನ ಹಾಗೆ ಅನಿಸ್ತಿರಬೇಕು.

**ಗೂಢಚಾರ** : ಅಲ್ಲಾ, ಗಳಿಗೆಗೊಂದು ಸಲ ಆ ವಸ್ತ್ರಾನ್ನ ಮುಖಕ್ಕೆ ಏಕೆ ಅಡ್ಡ ಮಾಡ್ತೀರಿ ? ಏನಿಟ್ಟೀರಿ ಬಾಯಲ್ಲಿ ?

**ಭೀಮ** : ಶೇಂಗಾ !.... ನಾವ್ ತಿನ್ನೋದ್ ನೋಡಿ ಬೇರೆಯವರಿಗೆ ಆಸೆಯಾಗ ಬಾರದೂಂತ ಮುಖ ಮುಚ್ಚಿಕೊಳ್ತೀವಿ.

**(ಹೀಗೆನ್ನುವಾಗ ರಾಮ ಗೂಢಚಾರನ ಬೆನ್ನ ಹಿಂದೆ ಹೋಗಿ ಕಿಸಕ್ಕಂತ ನಗ್ತಾನೆ).**

**ಗೂಢಚಾರ** : **(ಸ್ವಗತ)** ಏನೋ ಮಸಲತ್ತು ನಡೆಸಿದ್ದಾರೆ. ಮುಸುಕಿನೊಳಗೇ ನಗೋಕೆ ಶುರುವಿಟ್ಟರೋ ಹಾಗಿದೆ. ಏನೇ ಇರಲಿ, ಜಮೀನ್ದಾರಳಿಗೆ ವರದಿ ಮಾಡುತ್ತೇನೆ. **(ಹೋಗುವನು)**

**ಭೀಮ** : ಏ ! ಕಮಂಗಿ ! ಎಂಥ ಕೆಲ್ಸ ಮಾಡಿದೆ ನೀನು ? ಅವ ಮೊದಲೇ ಚಾಡಿ ಹೇಳುವವ. ಅವನಿಗೆ ಗೊತ್ತಾಗೋ ಹಾಗೆ ನಗ್ತೀಯಲ್ಲ.

**ರಾಮ** : ಅಜ್ಜ ಹೇಳಿದಾನಲ್ಲಾ, ನಿರ್ಭಯವಾಗಿ ನಗಿ ಅಂತ. ಏನಾಗ್ತದೋ ಆಗಲಿ ಬಿಡು. ನಡಿ, ಬೇರೆ ಕಡೆ ಹೋಗಿ ಬೇರೆ ಬೇರೆ ನಮೂನೆ ನಗುವ. ಅಜ್ಜನ ಔಷಧಿ ಕರಾಮತು, ನಮ್ಮ ರೋಗವದು ದೂರಾಯ್ತು **(ಹೋಗುವರು)**.

**ಸೂತ್ರಧಾರರು** : ಗೂಢಚಾರರು ಅಲೆದು ಬಂದರು
ಜಮೀನ್ದಾರಳಿಗೆ ವಿಷಯ ತಿಳಿಸಿದರು
ಗಂಗಾಪುರದ ಕೇರಿಯಲಿ
ಜನರ ಮುಸುಕಿನಡೆ ನೋಡು ಎಂದರು
ಜನರ ನಗುವನು ತೋರಿದರು
ಶಿಕ್ಷೆ ವಿಧಿಸಲು ಹೇಳಿದರು **(ಹೋಗುವರು)**

**ದೃಶ್ಯ-೫**

**ರಾಣಿ** : ಅಬ್ಬಾ ! ಆ ಮುದುಕನ ಸೊಕ್ಕೇ, ನನ್ನ ಹೊಟ್ಟೆ ಉರಿಸಿದ್ದಾನೆ. ಏನೋ ಔಷಧಿ ಕೊಡ್ತಾನೆ ಅಂತ ನೋಡಿದ್ರೆ ಮುಸುಕಿನಲ್ಲಿ ನಗೆಯಾಡೋಕೆ ಕಲಿಸಿದ್ದಾನೆ. ಎಳೆದು ತನ್ನಿ ಆ ಮುದುಕನನ್ನು ! **(ಅಬ್ಬರಿಸುವಳು) (ಮುದುಕನನ್ನು ಗೂಢಚಾರ ಎಳೆದು ತರುವನು. ಮುದುಕನ ಕೈ ಹಿಂದಕ್ಕೆ ಕಟ್ಟಿದ್ದಾರೆ).**

**ರಾಣಿ** : ಏ ! ಮುದಿಗೂಬೆ, ಎಷ್ಟು ಸೊಕ್ಕು ನಿನಗೆ ? ನಿನಗೆ ತಕ್ಕ ಶಿಕ್ಷೆ ಮಾಡ್ತೀನಿ. ಹಾಕಿ ಇವನಿಗೆ ಚಾಟಿ ಏಟು. **(ಜಮೀನ್ದಾರ ಮುದುಕನಿಗೆ ಚಾಟಿ ಏಟು ಹಾಕುವನು. ಮುದುಕ ಜೋರಾಗಿ ನಗುವನು. ಜನರೆಲ್ಲ ಬರುವರು. ಏಟು ಹಾಕಿದಂತೆಲ್ಲ ಮುದುಕ ಜೋರಾಗಿ ನಗತೊಡಗುವನು. ಜನರೂ ಜೋರಾಗಿ ನಗತೊಡಗುವರು. ಆಳುಗಳೂ ನಗುವರು).**



**ರಾಣಿ** : **(ಕೋಪಾವೇಶದಿಂದ)** ಏಯ್ ನಿಲ್ಲಿಸ್ರೋ ! ಕೂಗೋದನ್ನ, ನಗೋದನ್ನ.

**ರಾಮ** : ಏಯ್ ! ನಿಲ್ಲಿಸು ನಿನ್ನ ಅರಚಾಟವನ್ನು. ನಮಗೂ ಸಾಕಾಗಿದೆ. ಜನರನ್ನು ನಗುವುದಕ್ಕೂ ಬಿಡದ ನೀನೊಬ್ಬ ಮನುಷ್ಯಳಾ ! ಈಗ ನಮ್ಮ ಸರದಿ. ಏ ಬಿಚ್ರೋ ಅಜ್ಜನ ಬಂಧನ. ನಡೀರೋ ಇವರಿಬ್ಬರನ್ನು ಕಮರಿಗೆ ತಳ್ಳುವ, ನಗುತ್ತ ನಗುತ್ತ ನಿಮಗೆ ನಾವು ಶಿಕ್ಷೆ ಕೊಡುತ್ತೇವೆ. **(ಎಳೆದೊಯ್ಯುವರು. ಉಳಿದವರು ಕೈ ಮುಗಿದು ನಿಲ್ಲುವರು)**

**ಸೂತ್ರಧಾರರು** : ಮಹಾಜನಗಳೇ ನಗೆಯೆಂಬ ಮದ್ದಿನ ನಾಟಕ ನೀವೆಲ್ಲ ನೋಡಿದಿರಿ. ನಗುವನ್ನು ಬಿಟ್ಟು ಮನುಷ್ಯ ಬದುಕಲಾರ. ಕಷ್ಟ ನಿವಾರಿಸಿಕೊಳ್ಳಲ್ಲಿಯವರೆಗೆ ಕಷ್ಟದಲ್ಲೂ ನಗುತ್ತಿರಿ. **ಮೂಲಕಥೆ** : ನೀಲಾಂಬರಿ


ನಾಟಕ ರೂಪಾಂತರ : **ಸತೀಶ್ ಯಲ್ಲಾಪುರ**
ಬಿಸಗೋಡು (ಅಂಚೆ), ಯಲ್ಲಾಪುರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ - ೫೮೧ ೩೫೯

# ಕ್ರಾಂತಿಯ ಪಥದಲ್ಲಿ ಕವಿಯ ಪಾತ್ರ

ಬಂಡಾಯದಿಂದ ಕ್ರಾಂತಿಯತ್ತ ಮುಂದುವರಿಯಬೇಕು. ಕವಿಯೊಬ್ಬ ಅಸ್ವಾಭಾವಿಕ ವ್ಯಕ್ತಿಯಾಗಿರುತ್ತಾನೆಂದು ಕ್ರಿಸ್ಟಾಫರ್ ಕಾಡವೆಲ್ ತನ್ನ ಕಾವ್ಯ ವಿಮರ್ಶೆಯಲ್ಲಿ (Illusion and Reality) ಹೇಳುತ್ತಾನೆ. ವ್ಯವಸ್ಥೆಯ ವಿರೋಧಿ ಅವನಾಗಿರುತ್ತಾನೆ. ಈ ಕವಿ ಇದಕ್ಕೆ ಪರ್ಯಾಯವಾಗಿ ವ್ಯವಸ್ಥೆಯ ವಿರುದ್ಧದ ಪ್ರಥಮ ಪ್ರಜೆಯಾಗಿರುತ್ತಾನೆ. ಈ ವ್ಯವಸ್ಥೆಯಲ್ಲಿ ಭಾರತದ ರಾಷ್ಟ್ರಪತಿ ಪ್ರಥಮ ಪ್ರಜೆಯಾಗಿದ್ದರೂ ಕೂಡಾ ವ್ಯವಸ್ಥೆಯ ವಿರೋಧಿ ಕಾವ್ಯವೇ ಸತ್ವಶಾಲಿ ಉತ್ತಮ ಕಾವ್ಯವಾಗಿರುತ್ತದೆ.

''ಕವಿಯು ಶಾಸನಬದ್ಧವಲ್ಲದ ಜಗತ್ತಿನ ಶಾಸಕನಾಗಿ ಇರುತ್ತಾನೆ'' ಎಂದು ಆಂಗ್ಲದಲ್ಲಿ ಶೆಲ್ಲಿ ಹೇಳಿದ್ದಾನೆ.

ಮಹಾಭಾರತ ಕಾಲದ ಶ್ರೋತೃವರ್ಗ ಆಳರಸರಿಗೆ ಸೀಮಿತವಾಗಿತ್ತು. ಕಾವ್ಯಸತ್ವವು ಕಾವ್ಯರಚನೆಯ ರೂಪಕವನ್ನು ನಿರ್ಧರಿಸುತ್ತದೆ. ಇವೆರಡೂ ಓದುಗರನ್ನು ಗೊತ್ತುಪಡಿಸುತ್ತವೆ. ಅಂದರೆ ಶ್ರೋತೃಗಳಿಂದ ಕಾವ್ಯ ಮತ್ತೆ ತನ್ನ ಸತ್ವ ಮತ್ತು ರೂಪವನ್ನು ಪಡೆದುಕೊಳ್ಳುತ್ತದೆ. ಇದು ಹೀಗೆಯೇ ನಡೆದುಕೊಂಡು ಹೋಗುತ್ತದೆ.

ಪರಿವರ್ತನೆಯ ಕಾಲಘಟ್ಟದಲ್ಲಿ ಕ್ರಾಂತಿಯು ಬರೀ ಲೇಖಕನಾಗಿ ಅಲ್ಲ ಬರಹದಲ್ಲೂ ಅಭಿವ್ಯಕ್ತಿ ವ್ಯಕ್ತವಾಗುತ್ತದೆ. ತೆಲುಗು ಕವಿ ಪಾಲ್ಕುರಿಕೆ ಸೋಮನಾಥನು ಅರಸರ ಓಲಗಕ್ಕೆ ಪರ್ಯಾಯವಾದ ಕಾವ್ಯ ರಚಿಸಿದ. ಈ ಅರ್ಥದಲ್ಲಿ ಅವನು ತೆಲುಗಿನಲ್ಲಿ ಪ್ರಥಮ ಬಂಡಾಯ ಕವಿಯಾಗಿರುತ್ತಾನೆ. ಕನ್ನಡದಲ್ಲಿ ಸರ್ವಜ್ಞ ಇದ್ದಂತೆ. ಹನ್ನೆರಡು ಶತಮಾನಗಳ ಹಿಂದೆ ಕನ್ನಡದಲ್ಲಿ ನಡೆದ ಶರಣರ ವಚನಗಳ ಪ್ರಭಾವ ಸೋಮನಾಥನ ಮೇಲಿತ್ತು. ಆತ ದ್ವಿಪದಿಯಲ್ಲಿ ಕಾವ್ಯ ರಚಿಸಿದ. ಈ ರೀತಿ ವೀರಶೈವ ಸಾಹಿತ್ಯದ ಪ್ರಭಾವವನ್ನು ತೆಲುಗು ಸಾಹಿತ್ಯದಲ್ಲಿ ಕಾಣಬಹುದು. ತೆಲುಗು ಕನ್ನಡ ಪರಸ್ಪರ ಹೊಂದಿಕೊಂಡಿದ್ದ ಜನರ ಭಾಷೆಗಳಾದರೂ ಪರಸ್ಪರ ಸಾಹಿತ್ಯ ಪರಿಚಯ ಕಡಿಮೆ. ವಿಜಾಪುರದ ಆದಿಲಶಾಹಿ ತೆಲುಗು ಪ್ರದೇಶವನ್ನು ಕೂಡಾ ಕೆಲವು ಕಾಲ ಆಳಿದ್ದು ಇತಿಹಾಸದ ಒಂದು ಭಾಗ. ನಿಜಾಮನ ವಿರುದ್ಧ ನಡೆದ ಜಮೀನ್ದಾರಿ ವಿರೋಧಿ ಹೋರಾಟದಲ್ಲಿ ಕಮ್ಯೂನಿಸ್ಟರು ಪ್ರಥಮ ಬಾರಿಗೆ ಸಶಸ್ತ್ರ ಹೋರಾಟ ನಡೆಸಿದರು. ಈ ಹೋರಾಟ ತೆಲುಗರು/ಕನ್ನಡಿಗರು ಇಬ್ಬರಿಂದಲೂ ನಡೆದ ಸಂಯುಕ್ತ ಹೋರಾಟವಾಗಿತ್ತು. ಆದರೆ ಇಂದು ಆಳುವ ವರ್ಗದವರು ನಮ್ಮನ್ನು ಭಾಷೆಯ ಆಧಾರದ ಮೇಲೆ ವಿಭಜಿಸಲು ಯತ್ನಿಸುತ್ತಾರೆ. ಅದಕ್ಕಾಗಿ ಕೃಷ್ಣಾನದಿ ನೀರು, ಆಲಮಟ್ಟಿ ಅಣೆ ವಿಷಯಗಳನ್ನು ದುರುಪಯೋಗಪಡಿಸಿಕೊಳ್ಳುತ್ತಿದ್ದಾರೆ.

ಸುಮಾರು ಆರು ವರ್ಷಗಳ ಹಿಂದೆ ನಾವು ಆಲಮಟ್ಟಿಗೆ ಭೇಟಿ ನೀಡಿದ್ದೆವು. ಆಂಧ್ರದ ಕೃಷ್ಣಾ ಜಿಲ್ಲೆಯ ರೈತರು ಮೂರು ಬೆಳೆಗಳನ್ನು ಬೆಳೆಯುತ್ತಾರೆ. ಅವರು ಒಂದು ಬೆಳೆಯನ್ನು ಬೆಳೆಯುವದು ಬಿಟ್ಟು ಆ ನೀರನ್ನು ಬರ ಪೀಡಿತ ವಿಜಾಪುರ ಜಿಲ್ಲೆಯ ರೈತರು ತಮ್ಮ ಜಮೀನುಗಳಿಗೆ ಉಪಯೋಗಿಸಲು ಬಿಡಬಹುದು ಎಂಬುದು ನಮ್ಮ ಸಲಹೆಯಾಗಿತ್ತು.

ನದಿ ತೀರದ ಜನರ ವಿಷಯದಲ್ಲಿ ನಡೆಯುವ ತಿಕ್ಕಾಟ ಕುರಿತು ಆಫ್ರಿಕನ್ ಸಾಹಿತಿ ಗೂಗಿಯ 'River Between' ಕಾದಂಬರಿಯಲ್ಲಿ ಕಾಣಬಹುದಾಗಿದೆ. ಜನರನ್ನು ನದಿ ವಿಭಜಿಸುವುದಿಲ್ಲ, ಆದರೆ ಆಳುವ ವರ್ಗ ಜನರನ್ನು ವಿಭಜಿಸುತ್ತದೆ.

ಯಾವುದೇ ರೀತಿಯ ದಬ್ಬಾಳಿಕೆ ವಿರುದ್ಧ ಪ್ರತಿಭಟಿಸಬೇಕೆಂದು ವ್ಯವಸ್ಥೆಯ ವಿರುದ್ಧ ಹೋರಾಡಿದ ತೆಲುಗು ಸಾಹಿತಿ ಕೆ. ನಾರಾಯಣರಾವ್ ಹೇಳುತ್ತಾರೆ. ಅವರು ಇತ್ತೀಚೆಗೆ ತಮ್ಮ ೮೯ರ ಇಳಿವಯಸ್ಸಿನಲ್ಲಿ ನಿಧನರಾದರು. ತಮ್ಮ ೧೬ನೇ ವಯಸ್ಸಿನಲ್ಲಿಯೇ ಹೋರಾಟದ ದಾರಿ ಹಿಡಿದ ಅವರಿಗೆ ಪದ್ಮಭೂಷಣ ಪದವಿ ನೀಡಲಾಗಿತ್ತು.

ಎಲೆಮರೆಗಳ ಹಿಂದೆ ಕುಳಿತು ಹಾಡುವ ಪಕ್ಷಿಯಂತೆ ಕವಿ ಇರಬೇಕೆನ್ನುವ ಕಾಲ ಒಂದಿತ್ತು. ಈಗ ಅದಿಲ್ಲ. ಸಾಹಿತಿಗಳಿಗೆ ಜನ ಧ್ವನಿ ನೀಡಿದ್ದಾರೆ, ಅವರಿಗೆ ಹೆಸರು ನೀಡಿದ್ದಾರೆ. ಈ ಜನರ ಋಣ ತೀರಿಸಲು ಸಾಹಿತಿಗಳು ಜನರ ಧ್ವನಿಯಾಗಬೇಕು. ಎರಡನೆ ಜಾಗತಿಕ ಸಮರದ ಸಂದರ್ಭದಲ್ಲಿ ಸಾಹಿತಿಗಳು ಸ್ವಯಂಪ್ರೇರಣೆಯಿಂದ ಜನರಿಗೆ ಸ್ಫೂರ್ತಿ ನೀಡಲು ಮುಂದಾದರು. ಈ ಸಂದರ್ಭದಲ್ಲಿ ರೂಪುಗೊಂಡ ಇಪ್ಟಾ (IPTA) ಚಳುವಳಿಯ ನೇತೃತ್ವವನ್ನು ಪ್ರೇಮಚಂದ್, ಸಜ್ಜದ್ ಜಾಹಿರ್, ಮುಂತಾದವರು ವಹಿಸಿದ್ದರು. ಅವರು ಹಿಟ್ಲರನ ಫ್ಯಾಸಿಸಂ ವಿರುದ್ಧ ಹೋರಾಡಿದರು.

ತೆಲುಗು ಸಾಹಿತ್ಯದಲ್ಲಿ ಮೂರು ತೆರನಾದ ಸಂದರ್ಭಗಳು ಬರುತ್ತವೆ. ಎಲೆಮರೆಗಳ ಹಿಂದೆ ಕುಳಿತು ಹಾಡುವ ಕಾಲ ಒಂದಾಗಿದ್ದರೆ, ಮುಂದೆ ಎರಡನೇ ಜಾಗತಿಕ ಸಮರದ ಸನ್ನಿವೇಶದಲ್ಲಿ ಫ್ಯಾಸಿಸಂ ವಿರುದ್ಧ ಜನರನ್ನು ಪ್ರಚೋದಿಸುವುದಾಗಿತ್ತು. ಮತ್ತೆ ಈಗಿನ ಸಂದರ್ಭದಲ್ಲಿ ಜನರಿಗೆ ಸಂಘಟನಾ ಶಕ್ತಿಯನ್ನು ಒದಗಿಸುವುದಾಗಿದೆ.

ಶ್ರೀಕಾಕುಲಂ ಜಿಲ್ಲೆಯಲ್ಲಿ ಆರಂಭಗೊಂಡ ನಕ್ಸಲೀಯರ ಚಳುವಳಿಯ ಸಂದರ್ಭದಲ್ಲಿ ಕವಿ ಶಿವಸಾಗರ ತನ್ನ ಕಾವ್ಯ ಶಕ್ತಿಯಿಂದ ಜನರನ್ನು ಶಸ್ತ್ರಸಜ್ಜಿತರನ್ನಾಗಿಸಲು ಕಾವ್ಯ ರಚಿಸಿ ಬೀದಿ ಬೀದಿಗೆ ಕಾವ್ಯವನ್ನು ಕೊಂಡೊಯ್ದರು. ತಮ್ಮ ಕವನಗಳನ್ನು ಪೊಲೀಸ್ ಠಾಣೆಯ ಗೋಡೆಗೂ ಅಂಟಿಸುವವರೆಗೆ ಅವರು ಕಾವ್ಯವನ್ನು ಜನರತ್ತ ಒಯ್ದರು. ಈ ಹಿನ್ನೆಲೆಯಲ್ಲಿ ೧೯೭೦ರಲ್ಲಿ ಆಂಧ್ರದಲ್ಲಿ ಜನ ನಾಟ್ಯ ಮಂಡಳಿ ಜನ್ಮ ತಳೆಯಿತು. ೨೦ ವರ್ಷಗಳ ಹಿಂದೆ ಜನ ನಾಟ್ಯ ಮಂಡಳಿ ಸೇರಿದ ನಿರಕ್ಷರ ಮಹಿಳೆ ಪದ್ಮಾ ಜನರಿಗಾಗಿ ಕವನ ರಚಿಸಿ, ಹಾಡಿ, ಹೋರಾಡಿ ಮೊನ್ನೆ ಪೊಲೀಸರ ಮೋಸದ Encounterನಲ್ಲಿ ಹಿಂಸೆಗೊಳಗಾಗಿ ಸಾವನ್ನಪ್ಪಿದಳು. ಅವಳ ಶವವನ್ನು ಗುರುತಿಸಲೂ ಸಾಧ್ಯವಿರಲಿಲ್ಲ. ಇಂಥ 'ಅಪರಿಚಿತ' ಶವಗಳನ್ನು ಪಡೆಯಲೆಂದೇ ನಾವು ಆಂಧ್ರದಲ್ಲಿ ಸಮಿತಿ ರಚಿಸಿದ್ದೇವೆ.

ನಮ್ಮ ಹೋರಾಟ ಹಿರಣ್ಯಕಶ್ಯಪನ ವಿರುದ್ಧ ಪ್ರಹ್ಲಾದ ನಡೆಸಿದ ಹೋರಾಟದಂತೆ. ದೌರ್ಜನ್ಯದ ವಿರುದ್ಧ ಪ್ರಹ್ಲಾದ ಹೋರಾಡಿದ ಆ ಸಂದರ್ಭದಲ್ಲಿ ಹಿರಣ್ಯಕಶ್ಯಪ ಬಲಿಯಾದ. ಇದಕ್ಕೆ ಹಿಂಸೆ ಎನ್ನಲಾಗುತ್ತದೆಯೇ? ಫ್ಯಾಸಿಸಂ ವಿರುದ್ಧ ನಾವಿಂದು ಪ್ರಹ್ಲಾದನ ತರಹ ಹೋರಾಡಬೇಕಾಗಿದೆ.

ಜಾಗತೀಕರಣ ಮತ್ತು ಶಿಕ್ಷಣದ ಕೇಸರಿಕರಣ ಇವೆರಡೂ ಇಂದು ಪ್ರಮುಖ ಸಮಸ್ಯೆಗಳಾಗಿವೆ. ಹಿಟ್ಲರ್ ಮಾಡಿದ್ದನ್ನೆ ಇಂದು ಜಾರ್ಜ್ ಬುಶ್ ಮಾಡುತ್ತಲಿದ್ದಾನೆ. ''ಯಾರು ತಮ್ಮ ಜೊತೆಗೆ ಇರುವುದಿಲ್ಲವೋ ಅವರೆಲ್ಲ ಭಯೋತ್ಪಾದಕರು'' ಎಂದು ಬುಶ್, ಬ್ಲೇರ್, ಶರೋನ್ ಹೇಳುತ್ತಿದ್ದಾರೆ. ಅವರಿಗೆ ಮಧ್ಯ ಪ್ರಾಚ್ಯದಲ್ಲಿರುವ ಎಣ್ಣೆಯ ಮೇಲೆ ತಮ್ಮ ನಿಯಂತ್ರಣ ಸಾಧಿಸಬೇಕಿದೆ.

ಸಾಮ್ರಾಜ್ಯವಾದವು ಹಿಂಸೆಯಲ್ಲಿ ನಂಬಿಕೆ ಇಟ್ಟಿದೆ. ಗುತ್ತೇದಾರಿ ಬಂಡವಾಳವು ಎಲ್ಲ ಸಂಪತ್ತನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಲು ಯತ್ನಿಸುತ್ತಿದೆ. ಅತ್ತ ಸಾಮ್ರಾಜ್ಯವಾದ ತನ್ನ ನಿಯಂತ್ರಣಕ್ಕಾಗಿ ಯತ್ನಿಸುತ್ತಿರುವಾಗ ಈ ದೇಶದಲ್ಲಿ ಪುರೋಹಿತವಾದವು ಎಲ್ಲವನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಲು ಯತ್ನಿಸುತ್ತಿದೆ. ಈ ಉದ್ದೇಶದ ಈಡೇರಿಕೆಗೆ ಶಿಕ್ಷಣದಲ್ಲಿ ಕೋಮುವಾದವನ್ನು ಸೇರಿಸಲಾಗುತ್ತಿದೆ. ಇದಕ್ಕೆ ವಿರುದ್ಧವಾಗಿ ನಾವಿಂದು ಪರ್ಯಾಯ ರಾಜಕೀಯ ಸಂಸ್ಕೃತಿ ಕುರಿತು ಯೋಚಿಸಬೇಕು. ಆರಂಭದಲ್ಲಿ ಜನರಿಗೆ ಬಂಡಾಯ ಏಳಲು ಕರೆ ನೀಡಿದೆವು. ಜನರು ಅದಕ್ಕಿಂತ ಮುಂದೆ ಹೋಗಿ ಬಂಡಾಯದಿಂದ ಕ್ರಾಂತಿಯ ಕರೆ ನೀಡಿದರು. ಕರ್ನಾಟಕದಲ್ಲಿ ಬಂಡಾಯವಿಂದು ಮುಂದಿನ ಘಟ್ಟದ ಕಾರ್ಯಕ್ರಮ ರೂಪಿಸಿಕೊಳ್ಳಬೇಕಾಗಿದೆ.

*(೧೩ನೇ ಬಂಡಾಯ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಶ್ರೀ ವರವರರಾವ್ ಅವರು ಮಾಡಿದ ತೆಲುಗು ಭಾಷಣದ ವರದಿ.)*


ಆರ್. ಡಿ. ಹಳಿಂಗಳಿ
ವಕೀಲರು, ಗಣಪತಿ ಗಲ್ಲಿ, ಜಮುಖಂಡಿ-೫೮೭ ೩೦೧,
ಬಾಗಲಕೋಟೆ ಜಿಲ್ಲೆ


**ಎಲೆಮರೆಗಳ ಹಿಂದೆ ಕುಳಿತು ಹಾಡುವ ಪಕ್ಷಿಯಂತೆ ಕವಿ ಇರಬೇಕೆನ್ನುವ ಕಾಲ ಒಂದಿತ್ತು. ಈಗ ಅದಿಲ್ಲ. ಸಾಹಿತಿಗಳಿಗೆ ಜನ ಧ್ವನಿ ನೀಡಿದ್ದಾರೆ, ಅವರಿಗೆ ಹೆಸರು ನೀಡಿದ್ದಾರೆ. ಈ ಜನರ ಋಣ ತೀರಿಸಲು ಸಾಹಿತಿಗಳು ಜನರ ಧ್ವನಿಯಾಗಬೇಕು.**




# ಪ್ರಾಚೀನ ಭಾರತದ ಭೌತವಾದಿ ಪಂಥಗಳು

## 'ನ್ಯಾಯ' ದಾರ್ಶನಿಕ ಪಂಥ

'ನ್ಯಾಯ' ಅನ್ನುವುದು ಪ್ರಾಚೀನ ಭಾರತದಲ್ಲಿ ಸರಿಸುಮಾರು ಕ್ರಿ.ಶ. ೧ನೆಯ ಶತಮಾನದಲ್ಲಿ ಸ್ಪಷ್ಟವಾಗಿ ರೂಪು ತಳೆದ ಒಂದು ದಾರ್ಶನಿಕ ಪಂಥ. ಇದರ ಮೂಲಕರ್ತೃ ಗೋತಮ. ಅವನು ಕ್ರಿ.ಪೂ. ೩ನೆಯ ಶತಮಾನದಲ್ಲಿ ಜೀವಿಸಿದ್ದ. ಅವನು ರಚಿಸಿದ ''ನ್ಯಾಯ ಸೂತ್ರ'' ಮೂಲತಃ ಒಂದು ಭೌತವಾದಿ ಕೃತಿ. ಆದ್ದರಿಂದಲೇ ಭಾವನಾವಾದಿಗಳು ಇವನನ್ನು 'ಅಕ್ಷಪಾದಿ ಗೌತಮ' ಎಂದು ಕರೆಯುತ್ತಿದ್ದರು. ಅಂದರೆ ಇವನ ಕಣ್ಣುಗಳು ಇವನ ಪಾದಗಳಲ್ಲಿದ್ದವು. ಹಾಗಾಗಿ ಇವನು ತನ್ನ ಕಾಲುಗಳಿಗೆ ಹತ್ತಿರವಿದ್ದ ವಸ್ತುಗಳನ್ನಷ್ಟೆ, ಅಂದರೆ ಭೌತ ಪ್ರಪಂಚದ ವಸ್ತುಗಳನ್ನಷ್ಟೆ ಕಾಣಬಲ್ಲವನಿದ್ದ, ದೂರದ ಅಂದರೆ ಪಾರಲೌಕಿಕ ವಸ್ತುಗಳು ...ಆತ್ಮ, ಪರಮಾತ್ಮ ಮುಂತಾದವು... ಇವನ ತಿಳಿವಳಿಕೆಗೆ ಮೀರಿದವಾಗಿದ್ದವು, ಎಂದವರು ಇವನನ್ನು ಮೂದಲಿಸುತ್ತಿದ್ದರು.

ನ್ಯಾಯವಾದಿಗಳು ಬಹುಮಟ್ಟಿಗೆ ಜ್ಞಾನ ಮೀಮಾಂಸೆಯ ಪ್ರಶ್ನೆಗಳ ಅಧ್ಯಯನ ಮಾಡಿದರು. ತರ್ಕವಿದ್ಯೆ ಅವರ ಆಸಕ್ತಿಯ ವಿಷಯವಾಗಿದ್ದಿತು. ಗ್ರೀಕ್ ದೊರೆ ಅಲೆಕ್ಸಾಂಡರನು ತನ್ನ ಮಹಾ ದಂಡಯಾತ್ರೆಯ ಸಮಯದಲ್ಲಿ ಭಾರತಕ್ಕೆ ಬಂದಿದ್ದಾಗ ಗ್ರೀಕ್ ತತ್ತ್ವಜ್ಞಾನಿ ಕೆಲಿಸ್ತನೀಸನೂ ಅವನ ಸೈನ್ಯದಲ್ಲಿದ್ದ. ಇವನು 'ನ್ಯಾಯ' ದಾರ್ಶನಿಕ ಪದ್ಧತಿಯ ಇಡೀ ವಿಚಾರಗಳನ್ನು ಇಲ್ಲಿನ ಬ್ರಾಹ್ಮಣ ಪುರೋಹಿತರಿಂದ ತಿಳಿದುಕೊಂಡು, ಅನಂತರ ಅವುಗಳನ್ನು ಗ್ರೀಕ್ ತತ್ತ್ವಜ್ಞಾನಿ ಅರಿಸ್ಟಾಟಲನಿಗೆ ತಿಳಿಸಿ ಕೊಟ್ಟನೆಂದೂ, ಅವೇ ಅರಿಸ್ಟಾಟಲಿನ ತರ್ಕ ಸಿದ್ಧಾಂತಕ್ಕೆ ಅಡಿಪಾಯವಾಗಿ ರೂಪು ಗೊಂಡವೆಂದೂ ಕೆಲವರು ಹೇಳುತ್ತಾರೆ. ಆದರೆ ಆಧುನಿಕ ವಿದ್ವಾಂಸರು ಎಲ್ಲರೂ ಇದನ್ನು ಒಪ್ಪುವುದಿಲ್ಲ. ''ನ್ಯಾಯ'' ಎಂದರೆ ತರ್ಕ ಅಥವಾ ಸರಿಯಾಗಿ ವಿಚಾರ ಮಾಡುವ ವಿಜ್ಞಾನ ಎಂದರ್ಥ. ಇದು ಅನೇಕ ರೀತಿಗಳಲ್ಲಿ ಅರಿಸ್ಟಾಟಲಿನ 'ನಿಗಮನ ತರ್ಕ'ವನ್ನು (ಅಂದರೆ, ಪ್ರತಿಯೊಂದು ಸದ್ಗುಣವೂ ಪ್ರಶಂಸನೀಯ, ಕರುಣೆಯು ಒಂದು ಸದ್ಗುಣ, ಆದ್ದರಿಂದ ಕರುಣೆ ಪ್ರಶಂಸನೀಯ, ಎಂದು ವಾದಿಸುವಂಥ ತರ್ಕ ಸರಣಿ) ಹೋಲುತ್ತದೆಯಾದರೂ, ಅವೆರಡರ ನಡುವೆಯೂ ಮೂಲಭೂತ ವ್ಯತ್ಯಾಸಗಳಿವೆ'' ಎಂದು ಜವಾಹರಲಾಲ ನೆಹರೂ ಬರೆದಿದ್ದಾರೆ.

ಭೌತ ಪ್ರಪಂಚವು (ಪ್ರಕೃತಿಯು) ವಸ್ತುನಿಷ್ಠವಾಗಿ ಅಸ್ತಿತ್ವದಲ್ಲಿದೆ, ಬಾಹ್ಯ ವಸ್ತುಗಳ ಅಸ್ತಿತ್ವವು ಜ್ಞಾನದ ಆಕರದ ಮೇಲೆ, ಅಂದರೆ ಪ್ರಜ್ಞೆಯ ಮೇಲೆ, ಅವಲಂಬಿತವಾಗಿಲ್ಲ. ಪ್ರಕೃತಿಯ ವಸ್ತುಗಳೂ ವಿದ್ಯಮಾನಗಳೂ ಮನುಷ್ಯನಿಗೆ ಅವನ ಪಂಚೇಂದ್ರಿಯಗಳ ಮೂಲಕವಷ್ಟೆ ತಿಳಿದುಬರುತ್ತವೆ. ಇಂದ್ರಿಯಗಳಿಗೆ ಗೋಚರವಾಗದ ಯಾವ ವಸ್ತುವಿಗೂ ನಿಜವಾದ ಅಸ್ತಿತ್ವವಿಲ್ಲ, ಹಾಗಾಗಿ ಬ್ರಹ್ಮನಿಗೂ (ದೇವರಿಗೂ) ಅಸ್ತಿತ್ವವಿಲ್ಲ, ಎನ್ನುವುದು ಈ ನ್ಯಾಯ ದಾರ್ಶನಿಕ ಪದ್ಧತಿಯ ಮೂಲ ಸೂತ್ರ. ನ್ಯಾಯಸೂತ್ರವು ದೇವರ ವಿಚಾರಕ್ಕೆ ಸಂಬಂಧಿಸಿ ತಾತ್ಸಾರದ ಮನೋಭಾವ ತಳೆದಿದ್ದಿತು. ದೇವರು ಮನುಷ್ಯನ ಅಸ್ತಿತ್ವಕ್ಕೂ ಕಾರಣನಲ್ಲ, ಈ ಪ್ರಪಂಚದ ಅಸ್ತಿತ್ವಕ್ಕೂ ಕಾರಣನಲ್ಲ, ಪ್ರಪಂಚವು ತನ್ನಷ್ಟಕ್ಕೆ ತಾನೇ, ತನ್ನ ಸ್ವಭಾವಕ್ಕೆ ಅನುಗುಣವಾಗಿ ಅಸ್ತಿತ್ವಕ್ಕೆ ಬಂದಿತು ಎಂದದು ಘೋಷಿಸಿತು. ಆದ್ದರಿಂದ ನ್ಯಾಯ ಸಿದ್ಧಾಂತವನ್ನು 'ಸ್ವಭಾವವಾದ' ಎಂದೂ ಕರೆಯಲಾಗುತ್ತದೆ.

ಇಂದ್ರಿಯ ಗ್ರಾಹ್ಯವಷ್ಟೆ ನಮ್ಮ ಜ್ಞಾನದ ನಂಬಲರ್ಹತೆಯ (ಅಥವಾ ಸತ್ಯದ) ಒರೆಗಲ್ಲು. ಇಂದ್ರಿಯಗಳಿಗೂ ವಸ್ತುವಿಗೂ ನಡುವೆ ಸನ್ನಿಕರ್ಷ ಅಥವಾ ನಿಕಟ ಸಂಬಂಧ ಏರ್ಪಡುವ ಮೂಲಕವಷ್ಟೆ ನೈಜ ಜ್ಞಾನ ಲಭ್ಯವಾಗುತ್ತದೆ ಎಂದು 'ನ್ಯಾಯ-ಸೂತ್ರ'ದ ವ್ಯಾಖ್ಯಾನಕಾರರಲ್ಲೊಬ್ಬನಾದ ವಾತ್ಸ್ಯಾಯನನು ಕ್ರಿ.ಶ. ೪ನೆಯ ಶತಮಾನದಲ್ಲಿ ಬರೆದಿದ್ದಾನೆ. ಈ ತಿಳಿವಳಿಕೆಯನ್ನು 'ಪ್ರತ್ಯಕ್ಷ ಜ್ಞಾನ' ಎಂದು ಕರೆಯಲಾಗುತ್ತದೆ.

ನ್ಯಾಯ ಸೂತ್ರಕಾರರ ಪ್ರಕಾರ, ಜ್ಞಾನ ಸಾಧನೆಯ ವೈಚಾರಿಕತೆಗೆ ಅಥವಾ ವಾಸ್ತವಿಕ ತಿಳಿವಳಿಕೆಗೆ, ನಾಲ್ಕು ಅಂಶಗಳು ಅತ್ಯವಶ್ಯ : ತಿಳಿಯ ಹೊರಟ ವಸ್ತು (ಪ್ರಮಾತೃ); ತಿಳಿಯಬೇಕಾದ ವಸ್ತು (ಪ್ರಮೇಯ); ನಂಬಲರ್ಹ ತಿಳಿವಳಿಕೆ (ಪ್ರಮಿತಿ) ಹಾಗೂ ನಿಗಮನ ತರ್ಕ (ಪ್ರಮಾಣ).

ಪ್ರಮಾಣ ಸಾಧನಗಳನ್ನು ರೂಪಿಸುವುದೇ ನ್ಯಾಯಸೂತ್ರಕಾರರ ಪ್ರಧಾನೋದ್ದೇಶವಾಗಿದ್ದಿತು. ಆದ್ದರಿಂದ ಅವರ ಬೋಧೆಯನ್ನು ಸಾಮಾನ್ಯವಾಗಿ ಪ್ರಮಾಣ ಶಾಸ್ತ್ರ ಎಂದೂ ಕರೆಯಲಾಗುತ್ತದೆ. ಇವರ ಪ್ರಕಾರ ನಾಲ್ಕು ರೀತಿಯ ಪ್ರಮಾಣಗಳಿವೆ : ಪ್ರತ್ಯಕ್ಷ ಪ್ರಮಾಣ, ಅನುಮಾನ ಪ್ರಮಾಣ, ಉಪಮಾನ ಪ್ರಮಾಣ ಹಾಗೂ ಶಬ್ದ ಪ್ರಮಾಣ. ಒಟ್ಟಿನಲ್ಲಿ ನ್ಯಾಯಸೂತ್ರಕಾರರ ಇಂದ್ರಿಯ ಜ್ಞಾನ ಪ್ರತಿಪಾದನೆಯು ಭೌತವಾದಿ ಸ್ವರೂಪದ್ದಾಗಿದ್ದಿತು.

ನ್ಯಾಯಸೂತ್ರಕಾರರ ಹಾಗೂ ಚಾರ್ವಾಕರ ವಿಚಾರಗಳ ನಡುವೆ ತುಂಬ ಸಾಮ್ಯತೆ ಇರುವುದನ್ನು ಎತ್ತಿ ತೋರಿಸುತ್ತ ರಾಮ್ ಮೋಹನ ರಾಯ್‌ರವರು ನ್ಯಾಯ ದಾರ್ಶನಿಕ ಪಂಥದ ಮೊದಲ ರೂಪಗಳನ್ನು ಸ್ವತಃ ಬೃಹಸ್ಪತಿಯೇ ರೂಪಿಸಿದುದೆಂಬ ಕಥೆಗೆ ಉಲ್ಲೇಖ ಮಾಡುತ್ತಾರೆ.

ತದನಂತರ, ಮಧ್ಯಯುಗದ ಆರಂಭ ಕಾಲದಲ್ಲಿ ಹಿಂದೂ ಧರ್ಮದ ಸ್ಥಳದಲ್ಲಿ ಬ್ರಾಹ್ಮಣ ಧರ್ಮ ಸ್ಥಾಪಿತವಾಗಿ ಭೌತವಾದದ ವಿರುದ್ಧ ಸಂಪ್ರದಾಯವಾದಿಗಳ ದಾಳಿ ಉಲ್ಬಣಗೊಂಡಾಗ ನ್ಯಾಯ ದಾರ್ಶನಿಕ ಪದ್ಧತಿಯೊಳಕ್ಕೆ ಭಾವನಾವಾದ ಹಾಗೂ ಆಸ್ತಿಕವಾದದ ವಿಚಾರಗಳು ವಾಚಸ್ಪತಿ, ಉದಯನ, ವರ್ಧಮಾನ ಮುಂತಾದವರ ಮೂಲಕ ನುಸುಳಿಕೊಂಡವು. ದೇವರ ಅಸ್ತಿತ್ವವನ್ನು ಸಾಧಿಸಿ ತೋರುವ ತರ್ಕಬದ್ಧ ವಿಧಾನಗಳನ್ನು ಪತ್ತೆ ಹಚ್ಚುವ ನಾನಾ ಯತ್ನಗಳನ್ನು ಮಾಡಲಾಯಿತು. ಅದೇ ಹೊತ್ತಿನಲ್ಲೇ ವಾತ್ಸ್ಯಾಯನ, ಉದ್ಯೋತಕರ ಮತ್ತು ವಿಶ್ವನಾಥರು ಗೋತಮನ ನಾಸ್ತಿಕ ಮಾರ್ಗವನ್ನೇ ಸಮರ್ಥಿಸುತ್ತಿದ್ದರು.

ಆಧುನಿಕ ಹಿಂದೂ ತತ್ತ್ವವೇತ್ತರು ಹೆಚ್ಚಾಗಿ ಮಧ್ಯಕಾಲೀನ ನ್ಯಾಯಸೂತ್ರ ಪದ್ಧತಿಗೇ, ಅಂದರೆ ಹೆಚ್ಚು ನಿಷ್ಕೃಷ್ಟವಾಗಿ ಈ ಪದ್ಧತಿಗೆ ಸೇರಿಸಲಾದ ಈಶ್ವರವಾದಿ ಹಾಗೂ ಭಾವನಾವಾದಿ ವಿಚಾರಗಳಿಗೇ, ಉಲ್ಲೇಖ ಮಾಡುತ್ತಾರೆ. ವೈಶೇಷಿಕಕ್ಕೆ ಸಂಬಂಧಿಸಿಯೂ ಇದೇ ಮಾತು ನಿಜ.

**ಕೆ. ಎಲ್. ಗೋಪಾಲಕೃಷ್ಣ ರಾವ್**

೨೬೧, ೨ನೇ ಕ್ರಾಸ್, ಸಿ.ಟಿ.ಬೆಡ್, ತ್ಯಾಗರಾಜನಗರ, ಬೆಂಗಳೂರು-೫೬೦ ೦೨೮

ಬಂಡವಾಳಶಾಹಿಯ ಉಗಮದಿಂದ ವಿಜ್ಞಾನದ ಬೆಳವಣಿಗೆ ಸಾಧ್ಯವಾಯಿತು. ಆದರೆ ವಿಜ್ಞಾನ ತನ್ನ ಬೆಳವಣಿಗೆಯ ಪರಾಕಾಷ್ಠೆಯನ್ನು ಮುಟ್ಟಿದಾಗ ಅದು ಬಂಡವಾಳ ವ್ಯವಸ್ಥೆಯನ್ನು ಅನಗತ್ಯವಾಗಿಸುತ್ತದೆ.

**- ಜೆ. ಡಿ. ಬರ್ನಾಲ್**

ಸಾಂಪ್ರದಾಯಿಕ ಭಾರತೀಯ ತತ್ವಶಾಸ್ತ್ರದ ಬಹುಮುಖ್ಯ ವೈಫಲ್ಯವೆಂದರೆ ಅದು ಸ್ವಾತಂತ್ರ್ಯವೆಂಬ ಪರಿಕಲ್ಪನೆಯ ತಾತ್ವಿಕ ಸಮಸ್ಯೆಯನ್ನು ಪರಿಹರಿಸಲಾಗದ್ದು. ಇದು ಆಶ್ಚರ್ಯಕರವೇನಲ್ಲ, ಮಧ್ಯಕಾಲೀನ ಯೂರೋಪಿನಲ್ಲಾದಂತೆ ಆ ಕಾಲದ ಇನ್ನೂ ಮುಂದುವರಿಯದಿದ್ದ ಆರ್ಥಿಕ ಸಾಮಾಜಿಕ ವ್ಯವಸ್ಥೆಯು ತತ್ವಶಾಸ್ತ್ರಕ್ಕೆ ಒಡ್ಡಿದ ಮಿತಿಗಳಿಗೆ ಸಂಬಂಧಿಸಿದ್ದು ಇದು.

**- ದೇವಿಪ್ರಸಾದ್ ಚಟ್ಟೋಪಾಧ್ಯಾಯ**

**HOSATHU** Kannada Monthly / March 2003 Rs. 10

RNI Regn. No. KARKAN/1999/614 REGD. CPMG / KA / BGE – 7 / 2003-05 Licenced to post without prepayment. Licence No. WPP-14



*"Let me explainify the war against Iraq a little bit in Texas terminologragy."*

**We Shell not EXXONNERATE Saddam Hussein for his actions.**
**We will Mobilize to meet this threat in the Persian Gulf until an AMOCOble solution is reached.**
**Our plan is to BPrepared.**
**Failing that, we ARCOming to kick his ass.**

DemocracyMeansYou.com

ಶೆಲ್, ಎಕ್ಸಾನ್, ಮೊಬಿಲಾಯಿಲ್, ಬ್ರಿಟಿಷ್ ಪೆಟ್ರೋಲಿಯಂ ಮತ್ತು ಆರ್ಕೋ ಎಂಬುವು ಅಮೆರಿಕಾ ಮತ್ತು ಬ್ರಿಟನ್ನಿನ ತೈಲ ಕಂಪನಿಗಳು. ಇರಾಕನ್ನು ಸ್ವಾಧೀನಪಡಿಸಿಕೊಳ್ಳುವುದು ಈ ಕಂಪನಿಗಳ ಬಲವರ್ಧನೆಗಾಗಿ, ಇರಾಕಿನ ತೈಲ ಸಂಪತ್ತನ್ನು ಲೂಟಿ ಮಾಡುವುದಕ್ಕಾಗಿ.



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published by him for Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna